

ಛತ್ರಪತಿ ಶಿವಾಜಿ

(ಕ್ರಿ ಶ ೧೬೨೭—೮೦)

# ಆರ್ಯಕೀರ್ತಿ

## (ದ್ವಿತೀಯ ಖಂಡ)

## ಛತ್ರಪತಿ ಶಿವಾಜಿ



**ಚ. ವಾಸುದೇವಯ್ಯನವರಿಂದ**

ರಚಿಸಲ್ಪಟ್ಟುದು



ಎರಡನೆಯ ಮುದ್ರಣ



ಬೆಂಗಳೂರು ಪ್ರೆಸ್

೧೯೩೫

ಬೆಲೆ ರೂ. ೧—೪—೦

# ವಿಜ್ಞಾಪನೆ

## ಮೊದಲನೆಯ ಮುದ್ರಣ

'ಕರ್ಣಾಟಕ ಗ್ರಂಥಮಾಲೆ'ಯಲ್ಲಿ ಮುದ್ರಿತವಾಗುತ್ತಿದ್ದ 'ಆರ್ಯಕೀರ್ತಿ'ಯ ಈಯೆರಡನೆಯ ಭಾಗವನ್ನು, ಅಲ್ಲಲ್ಲಿ ಕೆಲವು ತಿದ್ದುಪಾಡುಗಳನ್ನು ಮಾಡಿ, ಈ ರೂಪವಾಗಿ ಸಹೃದಯ ಪಾಠಕ ಮಂಡಲಿಗೆ ಅರ್ಪಿಸಿರುತ್ತೇನೆ.

'ಆರ್ಯಕೀರ್ತಿ'ಯ ಪ್ರಥಮ ಭಾಗವು ಮುಗಿಯುತ್ತಲೆ ಮಹಾರಾಷ್ಟ್ರ ರಾಜ್ಯ ಸಂಸ್ಥಾಪಕನಾದ ಶಿವಾಜಿ ಮಹಾರಾಜನ ವೃತ್ತಾಂತವನ್ನು ಬರೆಯಬೇಕೆಂದು ಸಂಕಲ್ಪಿಸಿದ್ದೆನು. ಆ ಸಮಯಕ್ಕೆ, ಕಲ್ಕತ್ತೆಯಲ್ಲಿ ಆಯುರ್ವೇದಾಧ್ಯಾಪಕರಾದ ಶ್ರೀಯುತ ಸತ್ಯಚರಣ ಶಾಸ್ತ್ರಿಗಳಿಂದ ಪ್ರಣೀತವಾದ ಶಿವಾಜಿಯ ಜೀವನ ಚರಿತೆ ಪ್ರಕಟವಾಗಿದ್ದಿತು. ಈ ಶಾಸ್ತ್ರಿಗಳು ಉದ್ದಿಷ್ಟ ಗ್ರಂಥಕ್ಕೆ ಸಾಮಗ್ರಿಗಳನ್ನು ಸಂಗ್ರಹಿಸುವ ನಿಮಿತ್ತವಾಗಿ ಶಿವಾಜಿಯ ಕಾರ್ಯಕ್ಷೇತ್ರಗಳನ್ನೆಲ್ಲ ಸಂಚರಿಸಿ, ಅನೇಕ ಗ್ರಂಥಗಳನ್ನು ನೋಡಿ, ಆ ರಾಜನ ಜೀವನ ಚರಿತೆಯನ್ನು ರಚಿಸಿದರು. ನಾನು ಅದನ್ನು ಸಂಗ್ರಹಿಸಿ ಕನ್ನಡದಲ್ಲಿ ಬರೆದಿರುತ್ತೇನೆ. ಇತರ ಗ್ರಂಥಗಳಿಂದ ಸೂಚಿತವಾದ ಕೆಲವಂಶಗಳನ್ನು ಅಲ್ಲಲ್ಲಿ ಸೇರಿಸಿರುತ್ತೇನೆ. 'ಗ್ರಂಥಮಾಲೆ'ಯ ಸಂಪಾದಕರ ಅನುಗ್ರಹದಿಂದ ಈ ಪುಸ್ತಕವು ಪ್ರಕಟಿತವಾಗಿರುವುದು. ಈ ವಿಷಯದಲ್ಲಿ ನಾನು ಅವರಿಗೆ ಕೃತಜ್ಞನಾಗಿರುವೆನು.

೧೮೯೮ನೆಯ ಇಸವಿ

**ಚ. ವಾಸುದೇವಯ್ಯ.**

## ಎರಡನೆಯ ಮುದ್ರಣ

'ಆರ್ಯಕೀರ್ತಿ'ಯ ಈ ದ್ವಿತೀಯ ಖಂಡವು ಇಪ್ಪತ್ತೇಳು ವರ್ಷಗಳ ಹಿಂದೆ ಅಚ್ಚಾಯಿತು. ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿಗಳು ಇದನ್ನು ೧೯೩೪-೩೬ನೆಯ ಸ್ಕೂಲ್ ಫೈನಲ್ ಪರೀಕ್ಷೆಗೆ ಪಠ್ಯಪುಸ್ತಕವನ್ನಾಗಿ ನೇಮಿಸಿದುದರಿಂದ ಇದರ ಪುನರ್ಮುದ್ರಣಕ್ಕೆ ಅವಕಾಶವಾಯಿತು. ಅನೇಕ ಮಂದಿ ಪಂಡಿತರು ಆಂಗ್ಲೇಯ ಭಾಷೆಯಲ್ಲಿಯೂ ದೇಶ ಭಾಷೆಗಳಲ್ಲಿಯೂ ಛತ್ರಪತಿ ಶಿವಾಜಿಯ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ದಿವಂಗತರಾದ ಮಹಾದೇವ ಗೋವಿಂದ ರಾನಡೆಯವರೂ, ವ॥ರಾ॥ ಶ್ರೀ ಕೃ. ಅ. ಕೆಳೂಸಕರರೂ, ಮಿ॥ ಸಿ. ವಿ. ಕಿಂಕೇಡ್ ಅವರೂ ರಚಿಸಿರುವ ಗ್ರಂಥಗಳ ಸಹಾಯದಿಂದ ನಾನು ಈ ಸಣ್ಣ ಪುಸ್ತಕವನ್ನು ಪರಿಷ್ಕರಿಸಿ, ಕಥಾನಾಯಕನ ವಿಷಯದಲ್ಲಿ ತಿಳಿಯಬೇಕಾದ ಕೆಲವು ವಿಶೇಷಾಂಶಗಳನ್ನು ಸೇರಿಸಿ, ಅಲ್ಲಲ್ಲಿ ಭಾಷೆಯನ್ನೂ ಪರಿವರ್ತಿಸಿ, ಈ ಸಾರಿ ಅಚ್ಚುಹಾಕಿಸಿದ್ದೇನೆ. ಮೊದಲನೆಯ ಪ್ರಕರಣದಲ್ಲಿ ಹೇಳಿರುವ ಸಂಗತಿಗಳನ್ನು ಮಿ॥ ವಿ. ಎ. ಸ್ಮಿತ್ ಅವರ ಚರಿತ್ರೆಯಿಂದ ತೆಗೆದುಕೊಂಡಿದ್ದೇನೆ. ಯಥಾಮತಿ ನಾನು ಮಾಡಿರುವ ಈ ಮಾರ್ಪಾಡುಗಳಿಂದ ಪುಸ್ತಕವು ವಾಚಕರಿಗೆ ಕೊಂಚ ಮಟ್ಟಿಗೆ ಹೃದಯಂಗಮವಾಗಬಹುದೆಂದು ಭಾವಿಸುತ್ತೇನೆ.

ಮ॥ ರಾ॥ ಶ್ರೀ ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ.ಎ. ಅವರು 'ಆರ್ಯಕೀರ್ತಿ'ಯ ಪ್ರಥಮ ಖಂಡವನ್ನು ಪರಿಶೀಲನೆ ಮಾಡಿ ಅಚ್ಚು ಹಾಕಿಸಿ ಇಂದಿಗೆ ಮೂರು ವರ್ಷವಾಯಿತು. ಸದಯ ಹೃದಯರಾದ ಆ ಪಂಡಿತರೇ ಈ ದ್ವಿತೀಯ ಖಂಡವನ್ನೂ ಅವಲೋಕಿಸಿ ಅಲ್ಲಲ್ಲಿದ್ದ ತಪ್ಪುಗಳನ್ನು ತಿದ್ದಿ ಮುದ್ರಣ ಕಾಲದಲ್ಲಿ ಬಿಂದು ವಿಸರ್ಗಗಳನ್ನೂ ಬಿಡದೆ ಸಾವಧಾನವಾಗಿ ಪುಸ್ತಕವನ್ನು ಅವಲೋಕನಮಾಡಿ ಅಚ್ಚುಹಾಕಿಸಿ ನನಗೆ ಮಾಡಿರುವ ಮಹೋಪಕಾರಕ್ಕೆ ನಾನು ಅವರಿಗೆ ಎಷ್ಟು ಕೃತಜ್ಞನಾಗಿದ್ದರೂ ತೀರದು. ಕಥಾನಾಯಕನ ಸ್ವಮಹಿಮೆಯಿಂದಲೂ ಮ॥ರಾ॥ಶ್ರೀ ವೆಂಕಟನಾರಾಯಣಪ್ಪನವರ ಹಸ್ತ ಗುಣದಿಂದಲೂ 'ಆರ್ಯ

ಕೀರ್ತಿ'ಯ ಈ ದ್ವಿತೀಯ ಖಂಡವು ವಾಚಕರ ಆದರಣೆಗೆ ಪಾತ್ರವಾಗಬಹುದೆಂದು ನಂಬುತ್ತೇನೆ.

ವಿದ್ಯಾಭ್ಯಾಸದ ಇಲಾಖೆಯ ಅಧಿಕಾರಿಗಳು ಈ ಪುಸ್ತಕವನ್ನು ಪರೀಕ್ಷೆಗಾಗಿ ಪುರಸ್ಕರಿಸಿದುದಕ್ಕೆ ಅವರಿಗೆ ನಾನು ನನ್ನ ವಂದನೆಗಳನ್ನು ಅರ್ಪಿಸುತ್ತೇನೆ.

ಬೆಂಗಳೂರು ಪ್ರೆಸ್ಸಿನವರು ಅತ್ಯಲ್ಪ ಕಾಲದಲ್ಲಿ ಪುಸ್ತಕವನ್ನು ಸ್ಫುಟವಾಗಿಯೂ ಅಂದವಾಗಿಯೂ ಮುದ್ರಿಸಿದುದಕ್ಕಾಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಮಲ್ಲೇಶ್ವರ, ಬೆಂಗಳೂರು
೫ನೆಯ ಜೂಲೈ ೧೯೩೫

**ಚ. ವಾಸುದೇವಯ್ಯ.**

---

# ವಿಷಯಾನುಕ್ರಮಣಿಕೆ

# ಆರ್ಯಕೀರ್ತಿ

(ದ್ವಿತೀಯ ಖಂಡ)

---

# ಛತ್ರಪತಿ ಶಿವಾಜಿ

## ಮೊದಲನೆಯ ಪ್ರಕರಣ

---

### ಪೂರ್ವ ಕಥೆ

ಸಮರ್ಥ ರಾಮದಾಸ ಸ್ವಾಮಿಯು ಶಿವರಾಯನ ರೂಪ ಶಿವರಾಯನ ಪ್ರತಾಪ ಶಿವರಾಯನ ಕ್ರಿಯಾಕಲಾಪಗಳನ್ನು ಸ್ಮರಣೆಮಾಡುತ್ತಿರಿ ಎಂದು ಮಹಾರಾಷ್ಟ್ರರಿಗೆ ಉಪದೇಶಮಾಡಿ ಹೋದನು. ಪಶ್ಚಿಮ ಮಹಾರಾಷ್ಟ್ರದೊಳಗೆ ವೀರ ಮಾತೆಯ ಗರ್ಭದಲ್ಲಿ ಹುಟ್ಟಿ, ವೀರ ಮಾತೆಯ ಲಾಲನೆ ಪಾಲನೆಯಲ್ಲಿ ಬೆಳೆದು. ಕಾಲಸ್ಥಿತಿಯನ್ನರಿತ ಗುರುವಿನಿಂದ ಶಿಕ್ಷಿತನಾಗಿ, ವಿಷಯನಿಸ್ಪೃಹನಾದ ಕಮಂಡುಲುಧಾರಿಯಿಂದ ಉಪದಿಷ್ಟನಾಗಿ, ಸ್ವಧರ್ಮ ಸ್ವದೇಶಗಳ ರಕ್ಷಣೆಯಲ್ಲಿ ಅರ್ಪಿತಪ್ರಾಣನಾದ ಆ ಮಹಾ ಪುರುಷನ ಸಚ್ಚರಿತ್ರೆಯು ಚಿರ ಸ್ಮರಣೀಯವಾದುದೆಂದು ಭಾವಿಸಿ ಈಗಲೂ ಮಹಾರಾಷ್ಟ್ರರು ಭಕ್ತಿಪೂರ್ವಕವಾಗಿ ಅವನ ಜನ್ಮೋತ್ಸವವನ್ನು ಮಾಡುತ್ತಿರುವರು.

ಶಿವಾಜಿಯು ಹುಟ್ಟಿದ ಸಮಯದಲ್ಲಿ ಮೊಗಲರ ಸಾಮ್ರಾಜ್ಯವು ಮಹೋನ್ನತ ದಶೆಯಲ್ಲಿದ್ದಿತು. ಅವರಂಗಜೇಬನ ಕಠೋರ ಶಾಸನದಿಂದ

ಭಾರತವರ್ಷವೆಲ್ಲವೂ ಕಂಪಿಸುವಂತಾಯಿತು. ಭಾರತೀಯರ ವೀರತ್ವವು ಕ್ಷೀಣವಾಗುತ ಬಂದಿತು. ಯಾರು ಅಸಹಾಯ ಶೂರರೆಂದು ಖ್ಯಾತಿಗೊಂಡಿದ್ದರೊ ಅವರ ಸಂತತಿಯವರು ಪರಾಧೀನರಾದರು. ಯಾವ ಸ್ವಾತಂತ್ರ್ಯ ಪ್ರೇಮದಿಂದಲೂ ಶೌರ್ಯದಿಂದಲೂ ಪೃಥ್ವೀರಾಜನು ತಿರೋರಿ ಕ್ಷೇತ್ರದಲ್ಲಿ ಅಜೇಯನೆನಿಸಿಕೊಂಡನೊ, ಸಮರಸಿಂಹನು ಪ್ರಾಣವನ್ನು ತುಚ್ಛವಾಗೆಣಿಸಿ ವಿಧರ್ಮಿಗಳಾದ ಶತ್ರುಗಳ ಮುಂದೆ ಧೀರನಾಗಿ ನಿಂತನೊ, ಪ್ರಾತಃ ಸ್ಮರಣೀಯನಾದ ಪ್ರತಾಪಸಿಂಹನು ಊರ್ಜಿತ ಪ್ರಬಲರೂ ಸರ್ವ ಸಹಾಯ ಸಂಪನ್ನರೂ ಆದ ವೈರಿಗಳ ಮುಂದೆ ನಿಂತು ದೀರ್ಘ ಕಾಲ ಯುದ್ಧ ಮಾಡಿ ವಿಜಯಿಯೆನಿಸಿಕೊಂಡನೊ, ಆ ಸ್ವಾತಂತ್ರ್ಯ ಪ್ರೇಮವೂ ಆ ಶೌರ್ಯವೂ ಲುಪ್ತಪ್ರಾಯವಾದುವು. ದಕ್ಷಿಣ ಹಿಂದೂಸ್ಥಾನವು ಅನೈಕ್ಯದಿಂದಲೂ ಅಂತಃಕಲಹಗಳಿಂದಲೂ ಹಲವು ತಂಡವಾಗಿ ಪಾರತಂತ್ರ್ಯಕ್ಕೊಳಗಾಗಿದ್ದಿತು. ಈ ಸ್ಥಿತಿಯಲ್ಲಿ ಶಿವಾಜಿ ಜನ್ಮವೆತ್ತಿ ಅಂತಃಕಲಹಗಳನ್ನು ಅಡಗಿಸಿ ದೇಶವಾಸಿಗಳಲ್ಲಿ ಐಕಮತ್ಯವನ್ನುಂಟುಮಾಡಿದನು. ಅವನ ಮಹಾ ಮಂತ್ರದಿಂದ, ಅಜಯ್ಯರಾದ ಮೊಗಲರ ಸಾಮ್ರಾಜ್ಯದ ಕೀಲು ಸಡಿಲಿತು.

ವಿಂಧ್ಯಾದ್ರಿಗೆ ದಕ್ಷಿಣಕ್ಕೆ ಕನ್ಯಾಕುಮಾರಿಯ ವರೆಗಿರುವ ಭಾಗವು ದಕ್ಷಿಣ ಹಿಂದೂಸ್ಥಾನವೆನಿಸಿಕೊಳ್ಳುವುದು. ಆ ಪರ್ವತದ ಉತ್ತರಕ್ಕಿರುವ ಭಾಗವೆಲ್ಲವೂ ಪುರಾಣೇತಿಹಾಸಗಳಲ್ಲಿ ಆರ್ಯಾವರ್ತವೆನಿಸಿಕೊಂಡಿರುವಂತೆಯೇ ದಕ್ಷಿಣ ಹಿಂದೂಸ್ಥಾನವು ದಕ್ಷಿಣಾಪಥವೆನಿಸಿಕೊಂಡಿರುವುದು. ಈ ಭಾಗಕ್ಕೆ ದಕ್ಷ್ಖಣ ಎಂದು ಮತ್ತೊಂದು ಹೆಸರೂ ಬಳಕೆಗೆ ಬಂದಿರುವುದು. ಪರಂತು, ದಕ್ಷ್ಖಣ ಎಂಬ ಹೆಸರನ್ನು ಮಹಾರಾಷ್ಟ್ರ ಆಂಧ್ರ ದೇಶಗಳು ವ್ಯಾಪಿಸಿರುವ ಭೂಖಂಡಕ್ಕೆ ಮಾತ್ರ ಸಾಮಾನ್ಯವಾಗಿ ಪ್ರಯೋಗಿಸುವರು. ಈ ದೇಶಗಳಲ್ಲದೆ ದಕ್ಷಿಣ ಹಿಂದೂಸ್ಥಾನದಲ್ಲಿ ಕರ್ಣಾಟಕ ದೇಶವೂ, ಅತ್ಯಂತ ದಕ್ಷಿಣದಲ್ಲಿ ಪಾಂಡ್ಯ ಚೋಳ ಕೇರಳ ನಾಡುಗಳಿಂದ ಕೂಡಿರುವ ದ್ರಾವಿಡ ಅಥವಾ ತಮಿಳು ದೇಶವೂ ಇರುವುವು.

ಉತ್ತರ ಹಿಂದೂಸ್ಥಾನದಲ್ಲಿ ಹೇಗೊ ಹಾಗೆ ದಕ್ಷಿಣ ಹಿಂದೂಸ್ಥಾನದಲ್ಲಿಯೂ ಅನೇಕ ರಾಜ್ಯಗಳೂ ಅವುಗಳನ್ನು ಆಳುತ್ತಿದ್ದ ರಾಜವಂಶಗಳೂ

ಹೆಸರುಗೊಂಡಿವೆ. ಬೇರೆ ಬೇರೆಯ ವಂಶದವರಾದ ಆ ರಾಜರು ಏಕಚ್ಛತ್ರಾಧಿಪತ್ಯವನ್ನು ಸಂಪಾದನೆಮಾಡುವ ಸಲುವಾಗಿ ತಮ್ಮೊಳಗೆ ತಾವು ಅನುದಿನವೂ ಕಾದಾಡುತ್ತಿದ್ದರು. ಉತ್ತರ ಹಿಂದೂಸ್ಥಾನದಲ್ಲಿ ಚಂದ್ರಗುಪ್ತ ಮೌರ್ಯನಿಂದ ಸ್ಥಾಪಿತವಾಗಿ ಅಶೋಕ ಮಹಾರಾಜನಿಂದ ವರ್ಧಿತವಾದ ಮಗಧ ಸಾಮ್ರಾಜ್ಯವು ಮೈಸೂರು ದೇಶದ ವರೆಗೂ ಹಬ್ಬಿ ವಿಸ್ತಾರದಲ್ಲಿಯೂ ವೈಭವದಲ್ಲಿಯೂ ಸಾಟಿಯಿಲ್ಲದಿದ್ದಿತು. ಅಶೋಕ ಚಕ್ರವರ್ತಿಯ ಮರಣಾನಂತರ ಸಾಮಂತರೆಲ್ಲರೂ ಸ್ವತಂತ್ರ ರಾಜರಾದರು. ಹಾಗೆ ಸ್ವತಂತ್ರರಾದವರೊಳಗೆ ಆಂಧ್ರರೊಬ್ಬರು. ಅವರು ಆದಿಯಲ್ಲಿ ಕೃಷ್ಣಾ ಗೋದಾವರೀ ಮುಖಗಳ ನಡುವೆ ಪೂರ್ವ ಸಮುದ್ರದ ಅಂಚಿನಲ್ಲಿದ್ದ ವೆಂಗಿ ಎಂಬ ನಾಡಿಗೆ ಒಡೆಯರಾಗಿದ್ದು ಸ್ವತಂತ್ರರಾದ ಮೇಲೆ ಪಶ್ಚಿಮ ಘಟ್ಟದ ಬಳಿ ಇರುವ ನಾಸಿಕದ ವರೆಗೂ ರಾಜ್ಯವನ್ನು ವಿಸ್ತರಿಸಿಕೊಂಡು ಕ್ರಿ. ಶ. ೨೨೫ರ ವರೆಗೆ ೪೫೦ ವರ್ಷಗಳ ಕಾಲ ದಕ್ಷಿಣದಲ್ಲಿ ಚಕ್ರವರ್ತಿಗಳಾಗಿದ್ದರು. ತರುವಾಯ ಮುನ್ನೂರು ವರ್ಷಗಳ ಕಾಲ ಆಂಧ್ರ ಸಾಮ್ರಾಜ್ಯವೇನಾಗಿದ್ದಿತೊ, ಕಡೆಗೆ ಅದು ಹೇಗೆ ಹೋಯಿತೊ, ತಿಳಿಯದು. ಪರಂತು, ಕ್ರಿ. ಶ. ೫೫೦ರಲ್ಲಿ ಚಾಳುಕ್ಯರೆಂಬವರು ದಕ್ಷಿಣಕ್ಕೆ ದಂಡೆತ್ತಿ ಬಂದ ಸಮಯದಲ್ಲಿ ದಕ್ಷಿಣದ ಪಶ್ಚಿಮ ಭಾಗವಾದ ಮಹಾರಾಷ್ಟ್ರದಲ್ಲಿ ರಾಷ್ಟ್ರಿಕರೆಂಬವರೂ ವೆಂಗಿ ದೇಶದಲ್ಲಿ ಪಲ್ಲವರೆಂಬವರೂ ರಾಜ್ಯವಾಳುತ್ತಿದ್ದರು. ಈ ರಾಷ್ಟ್ರಿಕರು ಅಥವಾ ರಾಷ್ಟ್ರಕೂಟರು ಎಂಬವರೇ ಮಹಾರಾಷ್ಟ್ರರೆಂದು ಹೆಸರಿಟ್ಟುಕೊಂಡು ತಮ್ಮ ರಾಷ್ಟ್ರಕ್ಕೆ ಮಹಾರಾಷ್ಟ್ರವೆಂದು ಹೆಸರಿಟ್ಟರು. ಚಾಳುಕ್ಯ ವಂಶದ ಮೂಲ ಪುರುಷನಾದ ಪುಲಿಕೇಶಿ ಎಂಬವನು ರಾಷ್ಟ್ರಕೂಟರನ್ನು ಜಯಿಸಿ ಅಶ್ವಮೇಧ ಯಾಗವನ್ನು ಮಾಡಿ ಚಕ್ರವರ್ತಿಯೆಂಬ ಬಿರುದನ್ನು ತಾಳಿದನು. ತರುವಾಯ ಚಾಳುಕ್ಯ ವಂಶಸ್ಥರು ವೆಂಗಿ ದೇಶವನ್ನು ಆಳುತ್ತಿದ್ದ ಪಲ್ಲವರನ್ನು ಅಲ್ಲಿಂದ ಹೊರಡಿಸಿ ದಕ್ಷಿಣಕ್ಕೆಲ್ಲ ಚಕ್ರವರ್ತಿಗಳಾಗಿ ಈಗ ಬಾದಾಮಿ ಎನಿಸಿಕೊಂಡಿರುವ ವಾತಾಪಿ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ. ಶ. ೭೫೩ರ ವರೆಗೆ ಪ್ರಭುತ್ವವನ್ನು ಮಾಡಿದರು. ಅಂತು ೨೨೫ ವರ್ಷಗಳ ಕಾಲ ರಾಷ್ಟ್ರಕೂಟರು ಚಾಳುಕ್ಯರ ಪ್ರಭುತ್ವಕ್ಕೊಳಗಾಗಿದ್ದರು. ತರುವಾಯ ರಾಷ್ಟ್ರಕೂಟರಲ್ಲಿ

ದಂತಿದುರ್ಗನೆಂಬ ಶೂರನೊಬ್ಬನು ಹುಟ್ಟಿ ಚಾಳುಕ್ಯರ ಸಾರ್ವಭೌಮತ್ವ ವನ್ನು ಕಡೆಗಾಣಿಸಿ ದಕ್ಷನಿಗೆ ಚಕ್ರವರ್ತಿಯಾದನು. ಮಾನ್ಯಖೇಟ ವೆಂದು ಹೆಸರುಗೊಂಡಿದ್ದ ಈಗಿನ ಮಾಲ್‌ಖೇಡವೇ ಆ ವಂಶದವರ ರಾಜ ಧಾನಿಯಾಗಿದ್ದಿತು. ಸಾಹಸಿಕರಾದ ಈ ರಾಷ್ಟ್ರಕೂಟ ಚಕ್ರವರ್ತಿಗಳು ದಿನ ದಿನಕ್ಕೆ ಬಲಿಷ್ಠರಾಗಿ ಚೋಳದೇಶದಲ್ಲಿ ಪ್ರಬಲಿಸಿ ದಕ್ಷನಿಗೆ ಕಂಟಕ ಪ್ರಾಯರಾಗಿದ್ದ ಪಲ್ಲವರನ್ನು ಅಡಗಿಸಿ ತಮ್ಮ ರಾಜ್ಯವನ್ನು ವೃದ್ಧಿಗೊಳಿಸಿ ೨೨೦ ವರ್ಷಗಳ ಕಾಲ ಅತಿ ವೈಭವದಿಂದ ದಕ್ಷನಿನಲ್ಲಿ ಚಕ್ರವರ್ತಿಗಳಾ ಗಿದ್ದರು. ರಾಷ್ಟ್ರಕೂಟ ವಂಶದಲ್ಲಿ ದಂತಿದುರ್ಗನು ಹುಟ್ಟಿ ಚಾಳುಕ್ಯರ ವಿನಾಶಕ್ಕೆ ಮೂಲವಾದಂತೆ ಚಾಳುಕ್ಯ ವಂಶದಲ್ಲಿ ಇಮ್ಮಡಿ ತೈಲಪನು ತಲೆಯೆತ್ತಿ ಕ್ರಿ. ಶ. ೯೭೩ರಲ್ಲಿ ರಾಷ್ಟ್ರಕೂಟರ ನಿಪಾತಕ್ಕೆ ಮೂಲವಾದನು. ತೈಲಪನ ಸಾಹಸದಿಂದ ಮತ್ತೆ ಚಾಳುಕ್ಯರು ದಕ್ಷನಿಗೆ ಸಾರ್ವಭೌಮ ರಾದರು; ಮಹಾರಾಷ್ಟ್ರವು ಇನ್ನೊಮ್ಮೆ ಅವರ ವಶವಾಯಿತು. ಕಲ್ಯಾಣ ವೆಂಬ ನಗರವು ಅವರ ರಾಜಧಾನಿಯಾಗಿದ್ದಿತು. ಈ ಚಾಳುಕ್ಯ ವಂಶ ಪರಂಪರೆಯಲ್ಲಿ ಬಂದ ವಿಕ್ರಮಾಂಕನು ಕ್ರಿ. ಶ. ೧೦೭೬ರಲ್ಲಿ ಅಣ್ಣನನ್ನು ಪದಭ್ರಷ್ಟನನ್ನಾಗಿ ಮಾಡಿ ಅವನ ಸ್ಥಾನದಲ್ಲಿ ಐವತ್ತು ವರ್ಷಗಳ ಕಾಲ ಕುಳಿತು ರಾಜ್ಯವಾಳಿದನು. ಅವನ ಉತ್ತರಾಧಿಕಾರಿಗಳು ಅಲಂಕಾರ ಮಾತ್ರಕ್ಕೆ ಚಕ್ರವರ್ತಿಗಳಾಗಿದ್ದುದರಿಂದ ಅವರ ಪ್ರತಿನಿಧಿಗಳೂ ಸಾಮಂ ತರೂ ಮಲೆತು ಸ್ವತಂತ್ರರಾಗಿ ಕ್ರಿ. ಶ. ೧೧೯೦ರಲ್ಲಿ ಲುಪ್ತಪ್ರಾಯವಾಗಿದ್ದ ಸಾಮ್ರಾಜ್ಯವನ್ನು ಹಂಚಿಕೊಂಡು ಬಗೆಹರಿಸಿದರು. ಈ ರೀತಿಯಲ್ಲಿ ಮಹಾರಾಷ್ಟ್ರದಲ್ಲಿ ದೇವಗಿರಿಯನ್ನು ಯಾದವರೂ, ತೆಲುಗಾಣ್ಯದಲ್ಲಿ ಓರ ಗಲ್ಲನ್ನು ಕಾಕತೀಯರೂ, ಕರ್ಣಾಟಕದಲ್ಲಿ ದ್ವಾರಸಮುದ್ರವನ್ನು ಹೊಯ್ಸ ಳರೂ ರಾಜಧಾನಿಯನ್ನಾಗಿ ಮಾಡಿಕೊಂಡು ಸ್ವತಂತ್ರರಾದರು. ಅತ್ಯಂತ ದಕ್ಷಿಣದಲ್ಲಿ ಪಾಂಡ್ಯ ಚೋಳ ಕೇರಳ ದೇಶಾಧಿಪತಿಗಳು ತಮ್ಮ ತಮ್ಮ ರಾಜ್ಯವನ್ನಾಳುತ್ತಿದ್ದರು.

ಪೂರ್ವ ಸೂಚಿತ ರಾಜ್ಯಾಧಿಪತಿಗಳು ದೇಶ ಹಿತವನ್ನು ಲೇಶ ವಾದರೂ ಚಿಂತಿಸದೆ ಅಸೂಯೆಯಿಂದ ತಮ್ಮೊಳಗೆ ತಾವು ಕಲಹಮಾಡಿ

ಒಬ್ಬರ ರಾಜ್ಯವನ್ನೊಬ್ಬರು ಆಕ್ರಮಿಸಲು ಯತ್ನಿಸದಿದ್ದ ಪಕ್ಷದಲ್ಲಿ ಅವರ ರಾಜ್ಯವಾಗಲಿ ಸ್ವಾತಂತ್ರ್ಯವಾಗಲಿ ಅನ್ಯಾಕ್ರಾಂತವಾಗುತ್ತಿರಲಿಲ್ಲ.

ಇತ್ತ ಹೀಗಿರಲು, ಉತ್ತರ ಹಿಂದೂಸ್ಥಾನದಲ್ಲಿ ಕ್ರಿ. ಶ. ೭೧೦ರಲ್ಲಿ ಮುಸಲ್ಮಾನರು ಕಾಲಿಟ್ಟರು. ಅಂದು ಮೊದಲ್ಗೊಂಡು ಅವರು ಪರಾರ್ಥಾ ಕಾಂಕ್ಷೆಯಿಂದ ಉತ್ತರ ಹಿಂದೂಸ್ಥಾನಕ್ಕೆ ಬರುತ್ತಲೂ ಹೋಗುತ್ತಲೂ ಇದ್ದು ಕಡೆಗೆ ಕ್ರಿ. ಶ. ೧೨೦೬ರಲ್ಲಿ ರಾಜ್ಯವನ್ನು ಸ್ಥಾಪಿಸಿ ದಿಳ್ಳಿಯಲ್ಲಿ ಸುಸ್ಥಿರವಾಗಿ ನೆಲಸಿದರು. ಅವರ ಪ್ರಭುತ್ವವು ೩೨೦ ವರ್ಷಗಳ ಕಾಲ ಅವಿಚ್ಛಿನ್ನವಾಗಿ ನಡೆಯಿತು. ಅಷ್ಟು ದೀರ್ಘ ಕಾಲವೂ ಅವರು ಪರ ರಾಜ್ಯ ವಶೀಕರಣಾರ್ಥವಾಗಿ ಎಡೆಬಿಡದೆ ಯುದ್ಧಮಾಡುತ್ತಿದ್ದರು. ಆದರೆ ಅವರು ದಿಳ್ಳಿಯಲ್ಲಿ ನೆಲೆಗೊಂಡ ತರುವಾಯ ನೂರು ವರ್ಷಗಳ ಕಾಲ ವಿಂಧ್ಯಪರ್ವತವನ್ನು ದಾಟಿ ಬರಲಿಲ್ಲ.

ಆಸೇತು ಹಿಮಾಚಲ ಪರ್ಯಂತವಾಗಿ ಏಕಚ್ಛತ್ರಾಧಿಪತ್ಯವನ್ನು ಸ್ಥಾಪಿಸಬೇಕೆಂಬಾಸೆಯಿಂದ ಕ್ರಿ. ಶ. ೧೨೯೪ರಲ್ಲಿ ಮೊತ್ತಮೊದಲು ಅವರು ದೇವಗಿರಿಯಲ್ಲಿ ಕಾಲಿಟ್ಟರು. ತರುವಾಯ ದಿಳ್ಳಿಯಿಂದ ದಂಡಿನ ಮೇಲೆ ದಂಡು ಬರಲಾರಂಭಿಸಿತು. ೧೩೦೬ರಲ್ಲಿ ದೇವಗಿರಿಯ ರಾಮ ದೇವನು ಸುಲ್ತಾನನಿಗೆ ಕಪ್ಪವನ್ನು ಕೊಡಲೊಪ್ಪಿ ಅವನಿಗೆ ಅಧೀನ ನಾದನು. ಹಾಗೆಯೇ ೧೩೦೯ರಲ್ಲಿ ಓರುಗಲ್ಲಿನ ಪ್ರತಾಪರುದ್ರನು ಸುಲ್ತಾನನಿಗೆ ಸಾಮಂತ ರಾಜನಾದನು. ೧೩೧೦ರಲ್ಲಿ ದ್ವಾರಸಮುದ್ರದ ಮುಮ್ಮಡಿ ಬಲ್ಲಾಳನು ಕೈಸೆರೆಯಾದನು. ಕಡೆಗೆ ೧೩೧೮ರಲ್ಲಿ ಸುಲ್ತಾನನ ಪ್ರತಿನಿಧಿಗಳೇ ಮಹಾರಾಷ್ಟ್ರವನ್ನು ಆಳಲಾರಂಭಿಸಿದರು. ೧೩೨೦ ರಲ್ಲಿ ಪ್ರತಾಪರುದ್ರನು ಕಪ್ಪವನ್ನು ಸಲಿಸಲು ತಪ್ಪಿದನೆಂಬ ವ್ಯಾಜದಿಂದ ಸುಲ್ತಾನನ ಸೇನಾನಾಯಕರು ಅವನನ್ನು ಕೈಸೆರೆ ಹಿಡಿದು ಸುಲ್ತಾನನ ಬಳಿಗೆ ಕಳುಹಿಸಿದರು.

ಈ ರೀತಿಯಲ್ಲಿ ಸ್ವತಂತ್ರವಾಗಿದ್ದ ಮಹಾರಾಷ್ಟ್ರ ಕರ್ಣಾಟಕ ಆಂಧ್ರ ರಾಜ್ಯಗಳು ಪರಾಧೀನವಾಗಿ ದಿಳ್ಳಿಯ ಸುಲ್ತಾನರ ನಿಗ್ರಹಾನುಗ್ರಹಕ್ಕೆ ಪಾತ್ರವಾಗುತ್ತಿದ್ದ ಸಮಯದಲ್ಲಿ, ಲೋಕ ಕಂಟಕನಾದ ಮಹಮ್ಮದ್

ತೊಗಲಕ್ ಎಂಬವನು ಸುಲ್ತಾನನಾಗಿ ೧೩೨೬ರಿಂದ ೧೩೫೧ರ ವರೆಗೆ ದೊರೆತನವನ್ನು ಮಾಡಿದನು. ಈ ನರರಾಕ್ಷಸನ ಪ್ರಭುತ್ವದಲ್ಲಿ ಪ್ರಜೆಗಳು ನಾನಾ ವಿಧ ಸಂಕಟಗಳನ್ನು ಅನುಭವಿಸಿ ಗತ್ಯಂತರವನ್ನು ಕಾಣದೆ ಎಲ್ಲೆಲ್ಲಿಯೂ ತಿರುಗಿಬಿದ್ದರು. ರಾಷ್ಟ್ರಾಧಿಪತಿಗಳು ಎಲ್ಲಿಯವರು ಅಲ್ಲಿ ಸ್ವತಂತ್ರರಾಗಲು ಯತ್ನಿಸಲಾರಂಭಿಸಿದರು. ಈ ಉನ್ಮತ್ತಪ್ರಾಯನ ಆಳಿಕೆಯಲ್ಲಿಯೇ ೧೩೩೬ರಲ್ಲಿ ಹರಿಹರ ಬುಕ್ಕರಾಯರ ಬಾಹುಬಲದಿಂದಲೂ ವಿದ್ಯಾರಣ್ಯರ ಬುದ್ಧಿಬಲದಿಂದಲೂ ವಿಜಯನಗರ ಸಂಸ್ಥಾನವು ಸ್ಥಾಪಿತವಾಗಿ ಅಳಿದುಳಿದ ಹಿಂದೂ ರಾಜ್ಯಗಳಿಗೂ ರಾಜವಂಶಗಳಿಗೂ ತೀರ್ಥಕ್ಷೇತ್ರಗಳಿಗೂ ಆನನ್ಯಾಶ್ರಯವಾಗಿ ದಕ್ಷಿಣ ಹಿಂದೂಸ್ಥಾನವನ್ನು ೨೫೦ ವರ್ಷಗಳ ಕಾಲ ರಕ್ಷಿಸಿತು. ಸೋತು ಹತಾಶರಾಗಿದ್ದರೂ ಓರುಗಲ್ಲಿನ ಕೃಷ್ಣನೂ ದ್ವಾರಸಮುದ್ರದ ಬಲ್ಲಾಳನೂ ವಿಜಯನಗರದ ಇಮ್ಮಡಿ ಹರಿಹರನೂ ಸೇರಿ ಮುಂದಿನ ಕಾರ್ಯಕ್ಕೆ ಪೂರ್ವ ರಂಗವಾಗಿ ಮಹಮ್ಮದೀಯರನ್ನು ಕ್ರಿ. ಶ. ೧೩೪೪ರಲ್ಲಿ ಓರುಗಲ್ಲಿನಿಂದ ದಾಟಿಸಿದರು. ಆಗ ಮಹಮ್ಮದೀಯರು ದೇವಗಿರಿಯೊಂದರಲ್ಲಿ ಮಾತ್ರ ಉಳಿದರು. ತರುವಾಯ ೧೩೪೭ರಲ್ಲಿ ದೇವಗಿರಿಯಲ್ಲಿ ನೆಲಸಿದ್ದ ಮುಸಲ್ಮಾನರು ದಿಳ್ಳಿಯ ಸುಲ್ತಾನನ ಅಧಿಕಾರಕ್ಕೊಳಪಟ್ಟಿರಲೊಲ್ಲದೆ ಹೋಗಲು ಹುಸೇನ ಗಂಗು ಬಹಮನಿ ಎಂಬವನ ಸಾಹಸದಿಂದ ಮಹಾರಾಷ್ಟ್ರದಲ್ಲಿ ಒಂದು ಸ್ವತಂತ್ರ ಮುಸಲ್ಮಾನ ರಾಜ್ಯವು ಸ್ಥಾಪಿತವಾಯಿತು. ಅನಂತರ ಹತ್ತಿರ ಹತ್ತಿರ ಮುನ್ನೂರು ವರ್ಷಗಳ ಕಾಲ ದಿಳ್ಳಿಯ ಪಾದಷಾಹರು ದಕ್ಷಿಣ ಹಿಂದೂಸ್ಥಾನಕ್ಕೆ ದಿಗ್ವಿಜಯಾರ್ಥವಾಗಿ ಹೊರಡಲಿಲ್ಲ. ಆದರೂ ಮಹಾರಾಷ್ಟ್ರದಲ್ಲಿ ನೆಲಸಿದ್ದ ಬಹಮನೀ ರಾಜ್ಯವು ದಿನದಿನಕ್ಕೆ ವೃದ್ಧಿಯಾಗುತ್ತ ಬರಲು ಆಂಧ್ರ ದೇಶವು ಮುಸಲ್ಮಾನರ ಪಾಲಾಯಿತು. ಅಂತು ದಕ್ಖನ ಎಲ್ಲವೂ ಬಹಮನಿ ರಾಜ್ಯವೆನಿಸಿಕೊಂಡಿತು. ದಕ್ಖನಿಗೂ ಲಂಕೆಗೂ ಮಧ್ಯದಲ್ಲಿರುವ ಪ್ರದೇಶವೆಲ್ಲವೂ ವಿಜಯನಗರ ಸಾಮ್ರಾಜ್ಯವೆನಿಸಿತು.

ಕಾಲ ಕ್ರಮದಲ್ಲಿ (೧೫೨೬ರಲ್ಲಿ) ಬಹಮನಿ ಸಂಸ್ಥಾನವು ಕಳಚಿಬಿದ್ದಿತು. ಅದರ ಭಗ್ನಾವಶೇಷದಿಂದ ಬಿಜಾಪುರ, ಗೋಲ್ಕೊಂಡ,

ಅಹಮುದ್ನಗರ, ಬೀರಾರು, ಬಿದರೆ ಎಂಬ ಐದು ಷಾಹಿ ರಾಜ್ಯಗಳು ಹುಟ್ಟಿದುವು. ದಕ್ಷನಿನಲ್ಲಿ ಬಹಮನಿ ಸಂಸ್ಥಾನವು ವಿಲುಪ್ತವಾದ ಸಮಯದಲ್ಲಿಯೇ ಉತ್ತರ ದೇಶದಲ್ಲಿ ಆಫ್ಘನರ ಆಧಿಪತ್ಯವೂ ಸಮಾಪ್ತವಾಯಿತು. ಆ ಬಳಿಕ ದಿಳ್ಳಿಯಲ್ಲಿ ಮೊಗಲ್ ಸಾಮ್ರಾಜ್ಯಕ್ಕೆ ಅಂಕುರಾರ್ಪಣವಾಯಿತು. ಇತ್ತ ದಕ್ಷಿಣ ದೇಶದಲ್ಲಿ ಶೌರ್ಯ ಸೌಂದರ್ಯ ವಿದ್ಯಾ ಬುದ್ಧಿಗಳಿಗೆ ನೆಲೆಯಾಗಿ ಹಿಂದೂಗಳ ಸ್ವಧರ್ಮಕ್ಕೂ ಸ್ವಾತಂತ್ರ್ಯಕ್ಕೂ ಆಶ್ರಯ ಕ್ಷೇತ್ರವಾಗಿದ್ದ ವಿಜಯನಗರ ಸಾಮ್ರಾಜ್ಯವು ೧೫೬೫ರಲ್ಲಿ ತಾಳಿಕೋಟೆಯ ಯುದ್ಧದಲ್ಲಿ ಧ್ವಂಸವಾಯಿತು. ಈ ರೀತಿಯಲ್ಲಿ ತ್ರಯೋದಶ ಶತಾಬ್ದದ ಕಡೆಯಲ್ಲಿ ದಕ್ಷಿಣ ದೇಶದಲ್ಲಿ ಮುಸಲ್ಮಾನ ರಾಜ್ಯವೊಂದೂ ಇರಲಿಲ್ಲ; ಷೋಡಶ ಶತಾಬ್ದದ ಕಡೆಯಲ್ಲಿ ಸ್ವತಂತ್ರ ಹಿಂದೂ ರಾಜ್ಯವೊಂದೂ ಇರಲಿಲ್ಲ. ಪರಂತು, ವಿಜಯನಗರ ಸಂಸ್ಥಾನಕ್ಕೆ ಅಧೀನರಾಗಿದ್ದ ಅರಸರೂ ನಾಯಕರೂ ಸ್ವತಂತ್ರರಾಗಿ ತಂತಮ್ಮ ನಾಡನ್ನಾಳುತ್ತಿದ್ದರು. ಹಿಂದೆ ಹೇಳಿದ ಐದು ಮುಸಲ್ಮಾನ ರಾಜ್ಯಗಳ ದೊರೆಗಳೂ ಪರಸ್ಪರ ವೈಷಮ್ಯದಿಂದ ಒಬ್ಬರ ರಾಜ್ಯವನ್ನೊಬ್ಬರು ಅಪಹರಿಸುವ ಸಲುವಾಗಿ ಸರ್ವದಾ ಕಲಹವಾಡುತ್ತಿದ್ದರು. ಕಡೆಗೆ ಮರಾಟೆಯವರು ಮುಸಲ್ಮಾನರ ಕೈಯಿಂದ ಬಿಡಿಸಿಕೊಳ್ಳುವ ಪ್ರಯತ್ನವನ್ನು ಮಾಡುವ ಕಾಲಕ್ಕೆ ಮೂರು ರಾಜ್ಯಗಳು ಉಳಿದಿದ್ದುವು. ಉತ್ತರ ಹಿಂದೂಸ್ಥಾನದಲ್ಲಿ ಮೊಗಲ ಪಾದಷಾಹರು ರಾಜ್ಯವನ್ನು ವಿಸ್ತರಿಸುತ್ತಹೋಗಿ ಅಕ್ಬರ್ ಪಾದಷಾಹನ ಕಾಲದಿಂದ ದಕ್ಷಿಣ ಹಿಂದೂಸ್ಥಾನವನ್ನು ಆಕ್ರಮಿಸಿಕೊಳ್ಳುವ ಸನ್ನಾಹಗಳನ್ನು ಮಾಡತೊಡಗಿದರು ಈ ತೆರದಲ್ಲಿ ದಕ್ಷನಿನ ಮುಸಲ್ಮಾನರು ಒಬ್ಬರ ರಾಜ್ಯವನ್ನೊಬ್ಬರು ಆಕ್ರಮಿಸಿಕೊಳ್ಳಬೇಕೆಂದು ಹೊಡೆದಾಡುತ್ತಿರಲು, ಮೊಗಲ ಪಾದಷಾಹರು ಅವರೆಲ್ಲರ ರಾಜ್ಯಗಳನ್ನೂ ತಾವು ಕವಳಿಸಬೇಕೆಂದು ದಂಡೆತ್ತಿ ಬರಲು ಆರಂಭಿಸಿದರು. ಈ ವಿಷಮ ಕಾಲದಲ್ಲಿ ಶಿವಾಜಿಯ ಪೂರ್ವಿಕರೂ, ಅವನು ಕೈಕೊಂಡ ಕಾರ್ಯದಲ್ಲಿ ಸಹಕಾರಿಗಳಾಗಿದ್ದವರೂ ಅಹಮುದ್‌ನಗರ, ಬಿಜಾಪುರ, ಗೋಲ್ಕೊಂಡವೆಂಬ ಈ ಮೂರು ಷಾಹಿ ಸಂಸ್ಥಾನಗಳಲ್ಲಿ ಸ್ವಸಾಮರ್ಥ್ಯದಿಂದ ಮುಂದಕ್ಕೆ ಬಂದರು.

---

ಎರಡನೆಯ ಪ್ರಕರಣ

---

## ಮಹಾರಾಷ್ಟ್ರರ ಅಭ್ಯುದಯ; ಶಿವಾಜಿಯ ಜನ್ಮ, ಬಾಲ್ಯ.

ದಕ್ಷಿಣದಲ್ಲಿ ರಾಜತ್ವವು ಮರಾಟೆಯವರ ಕೈಬಿಟ್ಟು ಹೋದರೂ ಮಹಮ್ಮದೀಯರ ಸಂಸ್ಥಾನಗಳಲ್ಲಿ ಅವರು ಉನ್ನತ ಪದವಿಯಲ್ಲಿರುತ್ತಿದ್ದರು. ಅಹಮುದ್‌ನಗರದ ಸಂಸ್ಥಾನದಲ್ಲಿ ನಿಜಾಮ್‌ಷಾಹಿ ವಂಶದವರು ಆಳುತ್ತಿದ್ದಾಗ ಲಕ್ಕೋಜಿ ಜಾದವರಾಯನೆಂಬವನು ಮಹೋನ್ನತಿಗೆ ಬಂದಿದ್ದನು. ಅವನು ದೇವಗಿರಿಯ ಯಾದವ ವಂಶಸ್ಥನಾಗಿ ಸಿಂಧಖೇಡ ಗ್ರಾಮಕ್ಕೆ ದೇಶಮುಖನಾಗಿ ಹತ್ತು ಸಾವಿರ ಕುದುರೆಗೆ ದಳವಾಯಿಯಾಗಿದ್ದನು. ಉದಯಪುರ ರಾಜವಂಶ ಪರಂಪರೆಯಲ್ಲಿ ಹುಟ್ಟಿದ ಮಾಲೋಜಿ ವಿಠೋಜಿ ಎಂಬ ಸೋದರರಿಬ್ಬರು ಕಾಲ ವಿಪರ್ಯಾಸದಿಂದ ದೌಲತಾಬಾದಿನ ಬಳಿ ಇರುವ ವೇರುಳವೆಂಬ ಗ್ರಾಮಕ್ಕೆ ಬಂದು ಪಟೇಲಿಯ ಕೆಲಸವನ್ನು ಸಂಪಾದಿಸಿ ಕೆಲವು ಕಾಲದ ಮೇಲೆ ಮುಂದಕ್ಕೆ ಬರಬೇಕೆಂದು ಜಾದವರಾಯನ ಆಶ್ರಯವನ್ನು ಹೊಂದಿದರು. ಆಶ್ರಿತಾಭಿಮಾನವಿಟ್ಟು ಜಾದವರಾಯನು ಸುಲ್ತಾನನಿಗೆ ಹೇಳಿ ಅವರಿಗೆ ಶಿಲೇದಾರಿಯ ಕೆಲಸವನ್ನು ಕೊಡಿಸಿದನು. ಮಾಲೋಜಿಯು ಬಾರ್‌ಗೀರ್ ದಂಡಿನಲ್ಲಿ ನಿಜಾಮ್‌ಷಾಹನ ಕೈಯ ಕೆಳಗೆ ಕೆಲಸ ಮಾಡತೊಡಗಿದನು.

ಕೆಲವು ದಿನಗಳ ತರುವಾಯ ಫಲಟಣವೆಂಬ ಗ್ರಾಮದ ದೇಶಮುಖನಾದ ಜಗಪಾಲನಾಯಕ ನಿಂಬಾಳಕರ್ ಎಂಬವನು ತನ್ನ ತಂಗಿಯಾದ ದೀಪಾಬಾಯಿಯನ್ನು ಮಾಲೋಜಿಗೆ ಕೊಟ್ಟು ಮದುವೆಮಾಡಿ ಮಾಲೋಜಿಯ ಪುರೋವೃದ್ಧಿಯ ವಿಷಯದಲ್ಲಿ ಕೂಡಿದ ಮಟ್ಟಿಗೆ ಸಹಾಯ ಮಾಡುತ್ತಿದ್ದನು. ಮಾಲೋಜಿಗೆ ಬಹು ದಿನಗಳು ಮಕ್ಕಳಾಗಲಿಲ್ಲ. ದಂಪತಿಗಳಿಬ್ಬರೂ ಮಕ್ಕಳಾಗಬೇಕೆಂದು ವ್ರತಗಳನ್ನೂ ದಾನಧರ್ಮಗಳನ್ನೂ ಮಾಡಿದರು; ಅಲ್ಲದೆ, ಅಹಮುದ್‌ನಗರದಲ್ಲಿದ್ದ ಒಬ್ಬ ಫಕೀರನಿಗೆ ಹರಸಿಕೊಂಡರು. ಆ ಫಕೀರನ ಆಶೀರ್ವಾದದಿಂದ ಅವರಿಗೆ

ಇಬ್ಬರು ಮಕ್ಕಳಾದರು. ಆ ಫಕೀರನ ಹೆಸರು ಷಾಹಷರೀಫ್. ಆ ಹೆಸರನ್ನು ಹಿಡಿದು ಹಿರಿಯವನಿಗೆ ಷಾಹಜಿ ಎಂದೂ ಕಿರಿಯವನಿಗೆ ಷರೀಫ್‌ಜಿ ಎಂದೂ ನಾಮಕರಣ ಮಾಡಿದರು. ಷಾಹಜಿಯು ಕ್ರಿ. ಶ. ೧೫೯೪ರಲ್ಲಿ ಹುಟ್ಟಿದನು.

ಷಾಹಜಿಗೆ ಐದು ವರ್ಷ ತುಂಬಿತು. ಮಾಲೋಜಿಯು ಕಾಮನ ಹಬ್ಬದಲ್ಲಿ ಒಂದು ದಿನ ಮಗನನ್ನು ಕರೆದುಕೊಂಡು ಜಾದವರಾಯನ ದರ್ಶನಕ್ಕೆ ಹೋದನು. ಜಾದವರಾಯನು ಆ ಹುಡುಗನ ರೂಪವನ್ನು ನೋಡಿ ಸಂತೋಷಿಸಿ ಅವನನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡು ಜೀಜಾಬಾಯಿ ಎಂಬ ತನ್ನ ಮಗಳನ್ನು ಆ ಹುಡುಗನ ಪಕ್ಕದಲ್ಲಿ ಕುಳ್ಳಿರಿಸಿದನು. ಜೀಜಾಬಾಯಿಗೆ ಹತ್ತಿರ ಹತ್ತಿರ ನಾಲ್ಕು ವರ್ಷವಾಗಿದ್ದಿತು. ಮಕ್ಕಳಿಬ್ಬರೂ ಆಡುತ್ತಿರಲು, ಜಾದವರಾಯನು ನೀನು ಅವನನ್ನು ಮದುವೆ ಮಾಡಿಕೊಳ್ಳುವೆಯೋ ಎಂದು ಮಗಳನ್ನು ಕೇಳಿ ಸಾಮಾಜಿಕರ ಕಡೆಗೆ ತಿರುಗಿ ಇವರಿಬ್ಬರೂ ಎಷ್ಟು ಮುದ್ದಾಗಿದ್ದಾರೆ ಎಂದನು. ಅಷ್ಟರೊಳಗೆ ಆ ಮಕ್ಕಳು ಒಬ್ಬರ ಮೇಲೊಬ್ಬರು ಗುಲಾಲನ್ನು ಎರಚಿದರು. ಈ ಆಟಗಳನ್ನು ನೋಡಿ ಅಲ್ಲಿದ್ದವರೆಲ್ಲರೂ ಗೊಳ್ಳೆಂದು ನಕ್ಕರು. ಆಗ ಮಾಲೋಜಿ ಎದ್ದು ನಿಂತು ಜಾದವರಾಯನು ನನ್ನ ಮಗನಿಗೆ ಹೆಣ್ಣುಕೊಡಲು ಒಪ್ಪಿದ್ದಾನೆ, ಇದಕ್ಕೆ ನೀವೆಲ್ಲರೂ ಸಾಕ್ಷಿ ಎಂದನು. ಆದರೆ ಜಾದವರಾಯನು ಆಡಿದ ಮಾತು ವಿನೋದಕ್ಕಾಡಿದುದೇ ಹೊರತು ಉದ್ದೇಶ ಪೂರ್ವಕವಾಗಿ ಆಡಿದುದಲ್ಲ. ಜಾದವರಾಯನು ಪುಣ್ಯವಂತನು, ಮಾಲೋಜಿ ಬಡವನು. ಗಂಡ ಹೆಂಡರಿಬ್ಬರಿಗೂ ಷಾಹಜಿಗೆ ಮಗಳನ್ನು ಕೊಡುವುದಕ್ಕಿಷ್ಟವಿರಲಿಲ್ಲ. ಹೀಗಿರಲು, ದೈವಗತಿಯಿಂದ ಮಾಲೋಜಿಗೆ ಅಹಮದ್ನಗರದ ಸುಲ್ತಾನನ ಕಟಾಕ್ಷವು ಪ್ರಾಪ್ತವಾಯಿತು. ಸುಲ್ತಾನನು ಅವನಿಗೆ ಪುಣೆಯನ್ನೂ ಸೂಪವೆಂಬ ಗ್ರಾಮವನ್ನೂ ಜಹಗೀರಿಯಾಗಿ ಕೊಟ್ಟು ಐದು ಸಾವಿರ ಸೇನೆಗೆ ಮನ್ಸಬನನ್ನಾಗಿಟ್ಟು, ಶಿವನೇರು ಚಾಕಣ ದುರ್ಗಗಳಿಗೆ ಅಧಿಪತಿಯನ್ನಾಗಿ ನೇಮಿಸಿ, ಅವನಿಗೆ ರಾಜನೆಂಬ ಬಿರುದನ್ನೂ ಕೊಟ್ಟನು. ಈ ರೀತಿಯಾಗಿ ಜಾದವರಾಯನು ಮಾಲೋಜಿಯ ಮಗನಿಗೆ ತನ್ನ ಮಗಳನ್ನು ಕೊಡುವುದಕ್ಕಿದ್ದ ಅಡ್ಡಿ ಕಳೆಯಿತು. ಸುಲ್ತಾನನೇ ಅವನನ್ನು

ಕರೆಯಿಸಿ ಜೀಜಾಬಾಯಿಯನ್ನು ಷಾಹಜಿಗೆ ಕೊಡುವುದಕ್ಕೆ ಒಡಂಬಡಿಸಿದನು. ಕ್ರಿ. ಶ. ೧೬೦೪ರಲ್ಲಿ ಅತ್ಯಂತ ಸಂಭ್ರಮದಿಂದ ಮದುವೆ ನಡೆಯಿತು. ಸುಲ್ತಾನನೂ ವಿವಾಹ ಮಹೋತ್ಸವಕ್ಕೆ ದಯೆಮಾಡಿಸಿದ್ದನು. ೧೬೨೩ರಲ್ಲಿ ಈ ದಂಪತಿಗಳಿಗೆ ಶಂಭೂಜಿ ಎಂಬ ಮಗನು ಹುಟ್ಟಿದನು.

ಪರಂತು, ಜಾದವರಾಯನು ಈ ಸಂಬಂಧವು ತನ್ನ ಗೌರವಕ್ಕೆ ಹಾನಿಯೆಂದೆಣಿಸಿ ಅಳಿಯನಲ್ಲಿ ದ್ವೇಷವಿಟ್ಟನು. ಅಹಮದ್ನಗರ, ಬಿಜಾಪುರ, ಗೋಲ್ಕೊಂಡ ಎಂಬ ಮುಸಲ್ಮಾನ ಸಂಸ್ಥಾನಗಳು ಅಂತಃಕಲಹಗಳಿಂದ ಬಲಹೀನವಾಗಿ ಪರಸ್ಪರ ವೈರದಿಂದ ಕಾದಾಡುತ್ತಿದ್ದುವು. ಸಾಲದುದಕ್ಕೆ ಮೊಗಲ್ ಚಕ್ರವರ್ತಿಗಳು ಈ ಮೂರು ರಾಜ್ಯಗಳನ್ನು ಆಕ್ರಮಿಸುವುದಕ್ಕೆ ಮೇಲೆ ಮೇಲೆ ದಂಡುಗಳನ್ನು ಕಳುಹಿಸುತ್ತಿದ್ದರು. ಈ ಕಲಹಗಳಲ್ಲಿ ಜಾದವರಾಯನೂ ಷಾಹಜಿಯೂ ಲಬ್ಧ ಪ್ರತಿಷ್ಠರಾದರು. ಕಾಲ ಕ್ರಮದಲ್ಲಿ ಷಾಹಜಿ ಅಹಮದ್ನಗರದಲ್ಲಿ ಪ್ರಬಲನಾಗುತ್ತ ಹೋದನು. ಅಳಿಯನ ಏಳಿಗೆಯನ್ನು ನೋಡಿ ಸೈರಿಸಲಾರದೆ ಜಾದವರಾಯನು ಮೊಗಲರ ಪಕ್ಷವನ್ನು ಸೇರಿದನು. ಮೊಗಲರ ಬಾಧೆಯನ್ನು ತಪ್ಪಿಸಿ ಅಹಮದ್ನಗರವನ್ನು ರಕ್ಷಿಸುವುದಕ್ಕೆ ಮಾಡಿದ ಪ್ರಯತ್ನಗಳು ಕೈಗೂಡದೆ ಹೋಗಲು ಷಾಹಜಿ ಜೀಜಾಬಾಯಿಯನ್ನೂ ಹಿರಿಯ ಮಗನಾದ ಶಂಭೂಜಿಯನ್ನೂ ಕರೆದುಕೊಂಡು ಬಿಜಾಪುರಕ್ಕೆ ಹೊರಟನು. ದಾರಿಯಲ್ಲಿ ಜೀಜಾಬಾಯಿಯು ತಂದೆಯ ಕೈಸೆರೆಯಾದಳು. ಜಾದವರಾಯನು ಮಗಳನ್ನು ಶಿವನೇರು ದುರ್ಗಕ್ಕೆ ಕಳುಹಿಸಿದನು. ಈ ಸಂಕಟ ಕಾಲದಲ್ಲಿ ಜೀಜಾಬಾಯಿಯು ಭಾವಿ ಛತ್ರಪತಿಯನ್ನು ಗರ್ಭದಲ್ಲಿ ಧರಿಸಿದ್ದಳು. ಅನಾಥೆಯಾಗಿ ಶಿವನೇರು ದುರ್ಗವನ್ನು ಸೇರಿ ಜೀಜಾಬಾಯಿಯು ದುರ್ಗಾಧಿಷ್ಠಾತ್ರಿಯಾದ ಶಿವಾಯಿ ದೇವಿಯನ್ನು ಸಂಕಟ ಪರಿಹಾರಾರ್ಥವಾಗಿ ಸರ್ವದಾ ಪ್ರಾರ್ಥಿಸುತ್ತ ಕಾಲಕ್ಷೇಪ ಮಾಡುತ್ತಿದ್ದಳು. ಹೀಗಿರುವಲ್ಲಿ, ಶಾ. ಶ. ೧೫೪೯ನೆಯ (ಕ್ರಿ. ಶ. ೧೬೨೭) ಪ್ರಭವ ನಾಮ ಸಂವತ್ಸರ ವೈಶಾಖ ಶುದ್ಧ ಬಿದಿಗೆ ಗುರುವಾರದಲ್ಲಿ ಶಿವಾಜಿ ಹುಟ್ಟಿದನು.*

---

* ಈಚೆಗೆ ಪಂಡಿತರು ವಿಚಾರಮಾಡಿ ಶಿವಾಜಿಯು ಕ್ರಿ. ಶ. ೧೬೩೦ನೆಯ ಏಪ್ರಿಲ್ ತಿಂಗಳಲ್ಲಿ ಹುಟ್ಟಿದನೆಂದು ಹೇಳುವರು.

ಅಹಮುದ್ನಗರವು ದಿನ ದಿನಕ್ಕೆ ಬಲಹೀನವಾಗುತ್ತ ಬಂದು ಕ್ರಿ. ಶ. ೧೬೩೭ರಲ್ಲಿ ದಿಳ್ಳಿಯ ಪಾದಷಾಹನಿಗೂ ಬಿಜಾಪುರದ ಸುಲ್ತಾನನಿಗೂ ಹಸುಗೆಯಾಯಿತು. ಆಗ ಷಾಹಜಿ ಬಿಜಾಪುರ ಸಂಸ್ಥಾನವನ್ನು ಸೇರಿದನು. ಸುಲ್ತಾನನ ಮಂತ್ರಿಯಾದ ಮುರಾರಿಪಂತನು ಅವನ ಶೌರ್ಯ ಸಾಮರ್ಥ್ಯಗಳಿಗೆ ಮೆಚ್ಚಿ ಅವನನ್ನು ಉನ್ನತ ಪದವಿಗೆ ತಂದನು.

ಕರ್ಣಾಟಕದಲ್ಲಿಯೂ ದ್ರಾವಿಡ ದೇಶದಲ್ಲಿಯೂ ಬಿಜಾಪುರ ಸಂಸ್ಥಾನದವರು ಅನೇಕ ನಾಡುಗಳನ್ನು ಗೆದ್ದಿದ್ದರು. ರಣದುಲ್ಲಾಖಾನ ನೆಂಬವನು ಆ ನಾಡುಗಳಿಗೆಲ್ಲಕ್ಕೂ ಆ ಸಂಸ್ಥಾನದವರ ಕಡೆಯ ಅಧಿಕಾರಿ ಯಾಗಿದ್ದನು. ಅವನು ೧೬೩೮ರಲ್ಲಿ ದಂಡೆತ್ತಿ ಬಂದು ಯಲಹಂಕ ನಾಡಿನ ಪ್ರಭುವಾದ ಕೆಂಪೇಗೌಡನಿಂದ ಬೆಂಗಳೂರನ್ನು ತೆಗೆದುಕೊಂಡನು. ಅವನ ತರುವಾಯ ಸುಲ್ತಾನನು ರಣದುಲ್ಲಾಖಾನನ ಸ್ಥಾನದಲ್ಲಿ ಷಾಹಜಿ ಯನ್ನು ನೇಮಿಸಿ, ಅವನು ಕರ್ಣಾಟಕ ಯುದ್ಧದಲ್ಲಿ ತೋರಿಸಿದ ಪರಾ ಕ್ರಮಕ್ಕೆ ಮೆಚ್ಚಿ ಕೋಲಾರ, ಹೊಸಕೋಟೆ, ಬೆಂಗಳೂರು, ಬಳ್ಳಾಪುರ, ಶೀರ್ಯ ಎಂಬೀ ಊರುಗಳನ್ನು ಜಹಗೀರನ್ನಾಗಿ ಕೊಟ್ಟನು. ಮೊದಲು ಷಾಹಜಿ ಬೆಂಗಳೂರಲ್ಲಿ ವಾಸಮಾಡುತ್ತಿದ್ದು, ತರುವಾಯ ಯುದ್ಧಕಾಲ ಗಳಲ್ಲಿ ಹೊರತು ಮಿಕ್ಕ ಕಾಲಗಳಲ್ಲಿ ಕೋಲಾರದಲ್ಲಿಯಾಗಲಿ ದೊಡ್ಡ ಬಳ್ಳಾಪುರದಲ್ಲಿಯಾಗಲಿ ವಾಸಮಾಡುತ್ತಿದ್ದನು. ಈ ರೀತಿಯಲ್ಲಿ ಷಾಹಜಿ ಯು ಸುಲ್ತಾನನ ಅನುಗ್ರಹವನ್ನು ಸಂಪಾದಿಸಿ ದಿನ ದಿನಕ್ಕೆ ವೃದ್ಧಿಗೆ ಬಂದು ಕಡೆಗೆ ರಾಜನೆಂಬ ಬಿರುದನ್ನೂ ಪಡೆದು ತಂಜಾವೂರನ್ನು ಗೆದ್ದು ಅಲ್ಲಿಯೇ ತನ್ನ ಮಗ ವೆಂಕೋಜಿಗೆ ಬೇರೊಂದು ರಾಜ್ಯವನ್ನು ಕಟ್ಟಿದನು.

ಶಿವಾಜಿ ತಂದೆಗೆ ಪ್ರೀತಿಪಾತ್ರನಾಗಿರಲಿಲ್ಲ. ಷಾಹಜಿಗೆ ಶಂಭೂಜಿಯ ಮೇಲೆ ಅಧಿಕವಾಗಿ ಪ್ರೀತಿಯಿದ್ದಿತು. ಆದುದರಿಂದ ಷಾಹಜಿಯು ಶಂಭೂಜಿ ಯನ್ನು ಯಾವಾಗಲೂ ಹತ್ತಿರವೇ ಇಟ್ಟುಕೊಂಡಿದ್ದನು. ಶಿವಾಜಿಯು ತಾಯಿಯ ಸಂಗಡ ಇರುತ್ತಿದ್ದನು. ಅವನು ಹುಟ್ಟಿದ ಮೂರು ವರ್ಷಗಳ ಮೇಲೆ ಷಾಹಜಿಯು ಮೋಹಿತೆ ಮನೆತನಕ್ಕೆ ಸೇರಿದವಳಾದ ತುಕಾಬಾಯಿ ಯನ್ನು ಮದುವೆಯಾದನು. ಈ ಎರಡನೆಯ ಸಂಬಂಧದಿಂದ ಷಾಹ

ಜಿಗೂ ಜೀಜಾಬಾಯಿಗೂ ವಿರೋಧವು ಹುಟ್ಟಿತು. ಶಿವಾಜಿ ಆರು ವರ್ಷ ಕಾಲ ತಂದೆಯ ಮುಖವನ್ನು ಕಾಣದಿದ್ದನು. ೧೬೩೭ರಲ್ಲಿ ಜೀಜಾಬಾಯಿಯು ಮಗನನ್ನು ಬಿಜಾಪುರಕ್ಕೆ ಕರೆದುಕೊಂಡು ಹೋದಳು. ಅಲ್ಲಿ ಷಾಹಜಿಯು ಸಯಿಾಬಾಯಿ ಎಂಬ ಹೆಣ್ಣನ್ನು ತಂದು ಮಗನಿಗೆ ಮದುವೆ ಮಾಡಿದನು. ತರುವಾಯ ಷಾಹಜಿಯು ಮಗನ ಪಾಲನೆಗೂ ಶಿಕ್ಷಣಕ್ಕೂ ಹೆಂಡತಿಯ ರಕ್ಷಣ ವೀಕ್ಷಣಕ್ಕೂ ದಾದಾಜಿ ಕೊಂಡದೇವನೆಂಬ ಬ್ರಾಹ್ಮಣನನ್ನು ನೇಮಿಸಿ, ಪುಣೆಯ ಜಹಗೀರಿಯ ಕಾರ್ಯಭಾರವನ್ನು ಅವನಿಗೊಪ್ಪಿಸಿದನು. ದಾದಾಜಿ ಶಕ್ತನು, ರಾಜತ್ವಕ್ಕೆ (ಕಂದಾಯ) ಸಂಬಂಧಪಟ್ಟ ಕಾರ್ಯಗಳಲ್ಲಿ ಅಭಿಜ್ಞನು. 'ಅವನು ಜೀಜಾಬಾಯಿಯ ವಾಸಕ್ಕೆ ಪುಣೆಯಲ್ಲೊಂದು ದೊಡ್ಡ ಮನೆಯನ್ನು ಕಟ್ಟಿಸಿದನು. ಆ ಮನೆಯಲ್ಲಿ ಶಿವಾಜಿಯು ದಾದಾಜಿಯಿಂದ ಶಿಕ್ಷಿತನಾಗಿ ತಾಯಿಯ ಲಾಲನೆ ಪಾಲನೆಯಲ್ಲಿ ಬಾಲ್ಯವನ್ನು ಕಳೆದನು.

ಆ ಕಾಲದಲ್ಲಿ ಮರಾಟೆಯವರು ಓದು ಬರೆಹವನ್ನು ಕಲಿವುದರಲ್ಲಿ ಅಷ್ಟು ಅಕ್ಕರೆಯುಳ್ಳವರಾಗಿರಲಿಲ್ಲ. ವೀರ ಪುರುಷರಿಗೆ ಬೇಕಾದ ವಿದ್ಯೆಯಲ್ಲಿ ಮಾತ್ರ ಅವರು ಆಸಕ್ತಿಯುಳ್ಳವರಾಗಿದ್ದರು. ಶಿವಾಜಿಗೆ ತನ್ನ ಹೆಸರನ್ನು ಬರೆವುದಕ್ಕೂ ಬಾರದಿದ್ದಿತು. ಆದರೆ ಅವನು ಧನುರ್ವಿದ್ಯೆಯಲ್ಲಿ ಪಾರದರ್ಶಿ, ಕತ್ತಿಯ ಸಾಮಿನಲ್ಲಿ ಜಾಣನು, ಕುದುರೆಯ ಸವಾರಿಯಲ್ಲಿ ಎಲ್ಲರನ್ನೂ ಮಿಾರಿಸಿದ್ದನು. ಅವನು ಸ್ವಧರ್ಮದಲ್ಲಿ ನಿಷ್ಠನು. ದಾದಾಜಿಯು ಶಿವಾಜಿಗೆ ಸ್ವಧರ್ಮದಲ್ಲಿ ಆಸ್ಥೆಯನ್ನು ಹುಟ್ಟಿಸುವುದಕ್ಕೆ ವಿಶೇಷವಾಗಿ ಪ್ರಯಾಸಪಟ್ಟನು. ಅವನ ಪ್ರಯಾಸವು ಸರ್ವಾಂಶದಲ್ಲಿಯೂ ಸಫಲವಾಯಿತು.

ಈ ವೀರ ಬಾಲಕನ ಪುರೋವೃದ್ಧಿಗಾಗಿ ದಾದಾಜಿಗಿಂತಲೂ ಅತಿಶಯವಾಗಿ ಜೀಜಾಬಾಯಿಯು ಪ್ರಯಾಸಪಟ್ಟಳು. ಅವಳು ಮಗನಿಗೆ ಪುರಾಣ ಪ್ರಸಿದ್ಧರಾದ ಪುಣ್ಯಶ್ಲೋಕರ ಕಥೆಗಳನ್ನು ಹೇಳಿ ರಾಮಾಯಣ ಮಹಾಭಾರತಗಳೊಳಗಿನ ವೀರರಸವನ್ನು ಪಾನಮಾಡಿಸಿ ಅವನನ್ನು ತೇಜಸ್ವಿಯೂ ಸಾಹಸಿಯೂ ಆಗುವಂತೆ ಮಾಡಿದಳು. ದೇವರ ಮೇಲೆ

ಭಾರ ಹಾಕಿ ಮಗನನ್ನು ಸಾಹಸ ಕಾರ್ಯಗಳ ಮೇಲೆ ನಿರ್ಭಯವಾಗಿ ಕಳುಹಿಸುತ್ತಿದ್ದಳು. ಅವನ ಜೀವಿತ ಕಾಲದಲ್ಲೆಲ್ಲ ತಾಯಿಯೇ ಅವನಿಗೆ ಮಂತ್ರಿಯಾಗಿಯೂ ಮಾರ್ಗದರ್ಶಿನಿಯಾಗಿಯೂ ಇದ್ದಳು. ತಾಯಿಯ ಉಪದೇಶ ಪ್ರಭಾವದಿಂದ ಅವನಲ್ಲಿ ಸ್ವಜಾತಿ ಪ್ರೇಮವೂ ಸ್ವದೇಶ ಹಿತೈಷಿತೆಯೂ ದೃಢವಾದುವು. ಸ್ವಧರ್ಮದಲ್ಲಿ ನಿಶ್ಚಲವಾದ ಭಕ್ತಿಯನ್ನೂ ಸ್ವಧರ್ಮ ಸಮ್ಮತವಾದ ಕಾರ್ಯಗಳಲ್ಲಿ ಆಂತರವಾದ ಶ್ರದ್ಧೆಯನ್ನೂ ಉಳ್ಳವನಾಗಿ ಆ ವೀರನು ಹಿಂದೂಗಳ ಧರ್ಮವನ್ನುಳಿಸಲು ದೃಢ ಪ್ರತಿಜ್ಞೆ ಮಾಡಿದನು. ಅವನ ಆ ದೃಢ ಪ್ರತಿಜ್ಞೆ ಯಾವುದರಿಂದಲೂ ಕದಲಲಿಲ್ಲ; ಹಗೆಯ ಗಂಟುಹುಬ್ಬಿಗೆ ಬೆದರಿಯಾಗಲಿ, ಆಪತ್ಕಾಲದ ಕಷ್ಟಗಳಿಗಂಜಿಯಾಗಲಿ, ಅವನು ಮಾಡಿದ ಸಂಕಲ್ಪವನ್ನು ಬಿಡಲಿಲ್ಲ. ಪ್ರಾಣವಿರುವವರೆಗೂ ನಿರ್ಭಯ ಹೃದಯದಿಂದಲೂ ಅವಿಚಲಿತ ಚಿತ್ತದಿಂದಲೂ ತನ್ನ ಪ್ರತಿಜ್ಞೆಯನ್ನು ಪಾಲಿಸಿದನು. ಅವನ ಅಪೂರ್ವ ವೀರತ್ವದಿಂದ ಮೊಗಲರ ವಿಜಯ ಶಕ್ತಿ ವಿಲುಪ್ತವಾಗುತ್ತ ಬಂದಿತು. ಬಹು ದಿನಗಳ ತರುವಾಯ ಹಿಂದೂಗಳ ಕೀರ್ತಿ ಗೌರವವು ಮತ್ತೆ ತೊಳಗಿ ಬೆಳಗಿತು.

ಶಿವಾಜಿಗೆ ಹಾಗೂ ಹೀಗೂ ಹದಿನಾರು ವರ್ಷವಾಯಿತು. ಆಗ ಅವನು ತುಂಟರ ಜೊತೆಯಲ್ಲಿ ಬಿದ್ದು, ಸ್ವತಂತ್ರನಾದ ಪಾಳೆಯಗಾರನಾಗುವೆನೆಂದು ಸಿಕ್ಕಿದವರ ಸಂಗಡ ಹೇಳಿಕೊಳ್ಳಲಾರಂಭಿಸಿದನು. ಹಾಗಾಡುವುದು ಸರಿಯಲ್ಲವೆಂದು ದಾದಾಜಿಯು ಶಿವಾಜಿಗೆ ಆಗಾಗ ಹೇಳುತ್ತಿದ್ದನು. ಗುರುವಿನೆದುರಿಗೆ ಮಾತನಾಡುವಾಗ ಜೋಕೆಯಾಗಿದ್ದರೂ ಶಿವಾಜಿ ತನ್ನ ಚೇಷ್ಟೆಯನ್ನು ಬಿಡಲಿಲ್ಲ. ಅವನು ಅಡಿಗಡಿಗೆ ಹೇಳದೆ ಕೇಳದೆ ಕೊಂಕಣ ದೇಶಕ್ಕೆ ಓಡಿಹೋಗುತ್ತಿದ್ದನು. ಅವನ ಅಲೆತವನ್ನು ನಿಲ್ಲಿಸುವ ನಿಮಿತ್ತನಾಗಿ ದಾದಾಜಿ ಜಹಗೀರಿಯ ಕೆಲಸಗಳನ್ನೆಲ್ಲವನ್ನೂ ಅವನ ಮೇಲೆ ಹೊರಿಸಿದನು. ಈ ರೀತಿಯಾಗಿ ಅಷ್ಟಿಷ್ಟು ಅಧಿಕಾರವು ಕೈಗೆ ಬರುತ್ತಲೆ ಶಿವಾಜಿ ದೊಡ್ಡ ದೊಡ್ಡ ಮನುಷ್ಯರಲ್ಲಿ ಹೋಗಿ ಬರುತ್ತ ಅವರಿಗೆ ವಿನಯವನ್ನು ತೋರಿಸುತ್ತ ಅವರ ಪ್ರೀತಿಗೆ ಪಾತ್ರನಾದನು. ಅಷ್ಟೇ ಹೊರತು ಅವನೆಂತೂ ದಾರಿಗೆ ಬರಲಿಲ್ಲ. ಕಡೆಗೆ ಕಳ್ಳಕಾಕರ ಜೊತೆಗೆ ಬಿದ್ದು, ಕೊಂಕಣಕ್ಕೆ ಹೋಗಿ ಕೊಳ್ಳೆಹೊಡೆದು

ಬಂದವರ ಸಂಗಡ ಷಾಹಜಿಯ ಮಗನೂ ಪಾಲಿಗೆ ಸೇರುವನೆಂದು ಊರ ವರೆಲ್ಲರೂ ಗುಟ್ಟು ಗುಟ್ಟಾಗಿ ಆಡಿಕೊಳ್ಳುವಂತಾಯಿತು.

ಶಿವಾಜಿಗೆ ಬಾಲ್ಯದಿಂದಲೂ. ಮುಸಲ್ಮಾನರ ಚರ್ಯೆಯನ್ನು ಕಂಡರೆ ಆಗುತ್ತಿರಲಿಲ್ಲ. ವಯೋವೃದ್ಧಿಯೊಂದಿಗೆ ಅವರ ಮೇಲಣ ದ್ವೇಷವು ಬೆಳೆ ಯಿತು. ಷಾಹಜಿ ಮಗನನ್ನು ಬಿಜಾಪುರದ ಸುಲ್ತಾನನ ದರ್ಶನಕ್ಕೆ ಕರೆದುಕೊಂಡು ಹೋಗಬೇಕೆಂದು ಒಂದೆರಡು ಸಾರಿ ಪ್ರಯತ್ನಮಾಡಿ ದನು. ಆದರೆ ಹುಡುಗನು ಸುಲ್ತಾನನ ಬಳಿಗೆ ಹೋಗುವುದು ಅವ ಮಾನವೆಂದೆಣಿಸಿ ಬರುವುದಿಲ್ಲವೆಂದು ಹೇಳಿದನು; ಕಡೆಗೆ ೧೬೩೭ರಲ್ಲಿ ಒಂದು ದಿನ ತಂದೆಯ ಮಾತನ್ನು ಮೀರಲಾರದೆ ಅವನ ಸಂಗಡ ಸುಲ್ತಾನನ ದರ್ಬಾರಿಗೆ ಹೋದನು. ಆದರೆ ಪದ್ಧತಿಯ ಪ್ರಕಾರ ಅವನು ಮಂಡಿಯೂರಿ ಸಲಾಮು ಮಾಡಿಯಾಗಲಿ ಮತ್ತೆ ಯಾವ ವಿಧದಿಂ ದಾಗಲಿ ಸುಲ್ತಾನನಿಗೆ ಸನ್ಮಾನಮಾಡದೆ ನಿರ್ಭಯವಾಗಿ ವೀರಾಸನದಲ್ಲಿ ಕುಳಿತನು ಈ ಹುಡುಗನ ಧೈರ್ಯವನ್ನು ನೋಡಿ ಸುಲ್ತಾನನು ವಿಸ್ಮಿತ ನಾದನು. ಮನೆಗೆ ಹೋದ ಬಳಿಕ ತಂದೆ ಕೋಪಿಸಿಕೊಂಡು, "ನಿನ್ನ ನಡತೆ ನನಗಾಗುವುದಿಲ್ಲ; ಇನ್ನುಮೇಲೆ ಹೀಗೆ ಮಾಡಿದರೆ ನಾನು ಸುಮ್ಮನಿರೆನು. ಸುಲ್ತಾನನು ನಮ್ಮೊಡೆಯನು; ಅವನಿಗೆ ಯಥೋಚಿತ ಮರ್ಯಾದೆಯನ್ನು ಮಾಡದೆಹೋದರೆ ನಮ್ಮನ್ನು ನಾಶಮಾಡದೆ ಬಿಡನು" ಎಂದು ಹೇಳಿದನು. ಅದಕ್ಕೆ ಶಿವಾಜಿಯು, "ಸುಲ್ತಾನನು ಮುಸಲ್ಮಾನನು, ನಾವು ಹಿಂದೂಗಳು. ಮುಸಲ್ಮಾನರು ಗೋಹತ್ಯ ವನ್ನು ಮಾಡುವರು. ಸುಲ್ತಾನನಿಗೆ ನಾನೆಂದಿಗೂ ಸನ್ಮಾನಮಾಡೆನು. ನಾನು ತಮ್ಮ ಭೃತ್ಯನು; ತಾವೇ ನನಗೆ ಪ್ರಭುಗಳು" ಎಂದು ಹೇಳಿ ದನು. ಷಾಹಜಿಯು ಮಗನ ಇಂಗಿತವನ್ನರಿತು ಹೆದರಿ ವೀರ ಬಾಲನ ಭಾವವು ಸುಲ್ತಾನನಿಗೆ ತಿಳಿದರೇನುಗತಿಯೆಂದು ತೊಳಲುತ್ತ ಹುಡುಗ ನನ್ನು ಕೆಲವು ಕಾಲ ಸುಲ್ತಾನನ ಕಣ್ಮರೆಯಾಗಿಟ್ಟಿದ್ದನು.

ಶಿವಾಜಿ ಪದೇ ಪದೇ ಕುದುರೆಯ ಸವಾರರೊಡಗೂಡಿ ಬೆಟ್ಟಗುಟ್ಟ ಗಳನ್ನೆಲ್ಲ ಅಲೆಯುತ್ತಿದ್ದನು. ಈ ರೀತಿಯಲ್ಲಿ ದುರ್ಗಮವಾದ ಬೆಟ್ಟ

ಗುಟ್ಟಗಳ ದಾರಿಗಳೆಲ್ಲವೂ ಅವನಿಗೆ ಗೊತ್ತಾದುವು. ಮಹಾರಾಷ್ಟ್ರದಲ್ಲಿ ಅನೇಕ ಗಿರಿ ದುರ್ಗಗಳಿದ್ದುವು. ಶಿವಾಜಿ ಉಪಾಯದಿಂದ ಆ ದುರ್ಗಗಳನ್ನು ತನ್ನ ವಶಮಾಡಿಕೊಳ್ಳುತ್ತಹೋದನು. ಕ್ರಿ. ಶ. ೧೬೪೬ನೆಯ ಸಂವತ್ಸರದಲ್ಲಿ ತೋರಣವೆಂಬ ದುರ್ಗವು ಅವನ ಕೈಸೇರಿತು. ಆ ದುರ್ಗದಲ್ಲಿ ಒಂದು ಹಾಳು ನೆಲವನ್ನು ಅಗೆಯಿಸುತ್ತಿರುವಲ್ಲಿ ಶಿವಾಜಿಗೆ ಯಥೇಚ್ಛವಾಗಿ ನಿಧಿಯು ಸಿಕ್ಕಿತು. ಆದರಿಂದ ಅವನು ಬೇಕಾದ ಆಯುಧಗಳನ್ನೂ ಮದ್ದುಗುಂಡುಗಳನ್ನೂ ಕೊಂಡು ತೋರಣದ ಹತ್ತಿರ ಇನ್ನೊಂದು ಹೊಸ ಕೋಟೆಯನ್ನು ಕಟ್ಟಿಸಿ ಅದಕ್ಕೆ ರಾಜಗಡವೆಂಬ ಹೆಸರಿಟ್ಟನು. ಈ ಕೋಟೆಯ ಕೆಲಸವು ನಡೆಯುತ್ತಿರುವಾಗ ಬಿಜಾಪುರದ ಸುಲ್ತಾನನು ಅದನ್ನು ಕಟ್ಟಿಸಕೂಡದೆಂದು ಅಡ್ಡಿಮಾಡಿ, ಶಿವಾಜಿ ಹೀಗೆಲ್ಲ ನಡೆವುದಕ್ಕೆ ಕಾರಣವೇನೆಂದು ಷಾಹಜಿಗೆ ಕಾಗದಗಳನ್ನು ಬರೆಯಿಸಿದನು. ಷಾಹಜಿಯು ಮಗನು ಈ ವಿಷಯಲ್ಲಿ ತನ್ನ ಆಲೋಚನೆಯನ್ನು ಕೇಳಲಿಲ್ಲವೆಂದು ಹೇಳಿ ತನ್ನ ಕುಟುಂಬಕ್ಕೆ ಸೇರಿದವರೆಲ್ಲರೂ ಸುಲ್ತಾನನಿಗೆ ಆಪ್ತ ಸೇವಕರಾಗಿರುವುದರಿಂದ, ಶಿವಾಜಿ ಯಾವ ಕೆಲಸವನ್ನು ಮಾಡಿದರೂ ಜಹಗೀರಿಯ ರಕ್ಷಣೆಗೂ ವೃದ್ಧಿಗೂ ಅಲ್ಲದೆ ಬೇರೆಯಲ್ಲವೆಂದು ಸುಲ್ತಾನನನ್ನು ಸಮಾಧಾನಗೊಳಿಸಲು ಯತ್ನಿಸಿದನು: ಇತ್ತ, ಶಿವಾಜಿ ಮಾಡುವ ಕಾರ್ಯಗಳು ಸರಿಯಲ್ಲವೆಂದೂ ಮುಂದೆ ಹಾಗೆ ಮಾಡಕೂಡದೆಂದೂ ಮಗನಿಗೂ ದಾದಾಜಿಗೂ ಬರೆದನು. ದಾದಾಜಿಯು ಷಾಹಜಿಗೆ ಪರಮಾಪ್ತನು; ತನ್ನೊಡೆಯನ ಹಿತಚಿಂತಕನು. ಅವನು ಶಿವಾಜಿ ಮಾಡಿಕೊಂಡಿದ್ದ ಆಲೋಚನೆಗಳನ್ನು ಬಿಡುವಂತೆ ಅವನಿಗೆಷ್ಟೋ ವಿಧವಾಗಿ ಹೇಳಿದನು. ಸುಲ್ತಾನನ ಇಷ್ಟಕ್ಕೆ ವಿರೋಧವಾಗಿ ನಡೆಯುವುದರಿಂದ ತನಗೂ ತನ್ನ ತಂದೆಗೂ ಹಾನಿಯೂ, ಅವನ ಇಷ್ಟಕ್ಕನುಸಾರವಾಗಿ ನಡೆಯುವುದರಿಂದ ಲಾಭವೂ ಉಂಟೆಂದು ದಾದಾಜಿ ಕೋಂಡದೇವನು ಶಿಷ್ಯನಿಗೆ ಉಪದೇಶಮಾಡಿದನು. ಶಿವಾಜಿಯು ತಂದೆಯ ಆಜ್ಞೆಯನ್ನೂ ಗುರುವಿನ ಉಪದೇಶವನ್ನೂ ಕೇಳಿ ಹೆಚ್ಚು ಮಾತಾಡದೆ ಸ್ವಲ್ಪ ಕಾಲ ಸುಮ್ಮನಿದ್ದನು. ಅಂದಿಗೆ ಕ್ರಿ. ಶ. ೧೬೪೭ನೆಯ ಸಂವತ್ಸರವಾಯಿತು. ದಾದಾಜಿಗೆ ಎಪ್ಪತ್ತನೆಯ ವರ್ಷವು ನಡೆಯ

ಲಾರಂಭಿಸಿತು. ಆ ವೃದ್ಧನ ಶರೀರವು ತಾರಿ ಬಡವಾಗಿ ರೋಗದ ಪಾಲಾಯಿತು ಮರಣ ಕಾಲವು ಸಮೀಪಿಸಲು, ಒಂದು ದಿನ ಶಿವಾಜಿ ಯನ್ನು ಹತ್ತಿರ ಕರೆದು ದಾದಾಜಿ ಈ ವಿಧವಾಗಿ ಬುದ್ಧಿ ಹೇಳಿದನು.—

"ಶಿವಾ, ನಾನಿನ್ನು ಬದುಕುವ ಆಸೆಯಿಲ್ಲ; ಇಷ್ಟರಲ್ಲೇ ಇಹ ಲೋಕವನ್ನು ಬಿಟ್ಟು ಹೋಗಬೇಕಾಗುವುದು. ನಾನು ಬಹು ಕಾಲ ಬದುಕಿ ಪ್ರಪಂಚದಲ್ಲಿ ಬಗೆ ಬಗೆಯ ಕಷ್ಟ ಸುಖಗಳನ್ನನುಭವಿಸಿದೆನು. ನನ್ನ ಅನುಭವವನ್ನು ನೀನರಿತು ಅದಕ್ಕನುಸಾರವಾಗಿ ಕಾರ್ಯಗಳನ್ನು ಮಾಡುವನಾದರೆ ಇಹ ಪರಗಳೆರಡರಲ್ಲೂ ನಿನಗೆ ಸುಖವುಂಟು. ಉಷಃ ಕಾಲಕ್ಕೆ ಸರಿಯಾಗಿ ಎದ್ದು ಜಗದೀಶ್ವರನ ನಾಮಸ್ಮರಣೆಮಾಡಿ, ಪ್ರಪಂಚವು ಅಸ್ಥಿರವೆಂದು ತಿಳಿದು, ಸುಖದಲ್ಲಾಗಲಿ ದುಃಖದಲ್ಲಾಗಲಿ ಭಾವ ವಿಕಲ್ಪಕ್ಕೆಡೆಗೊಡದೆ ಕಾರ್ಯವನ್ನು ಮಾಡತೊಡಗು ಕ್ರೋಧಕ್ಕೂ ಮೋಹಕ್ಕೂ ವಶನಾಗಿ ಪಕ್ಷಪಾತ ಬುದ್ಧಿಯಿಂದ ವಿಚಾರ ಮಾಡ ಬೇಡ. ಏಕ ಪಕ್ಷವನ್ನು ಕೇಳಿ ಎಂದಿಗೂ ನಿನ್ನ ಅಭಿಪ್ರಾಯವನ್ನು ಕೊಡಬೇಡ. ಸತ್ಯವನ್ನೆಂದಿಗೂ ಬಿಡಬೇಡ. ಸತ್ಯವೇ ಸಕಲ ಧರ್ಮದ ಸಾರವು. ಸತ್ಯಕ್ಕೆ ಮೇರೆಯುಂಟು, ಮಿಥ್ಯೆಗಿಲ್ಲ; ಅದು ಹೇಳು ವವನ ಇಚ್ಛಾನುಸಾರವಾಗಿ ಬೆಳೆಯುತ ಹೋಗುವುದು. ಅಹಂಕಾರ ಪಡಬೇಡ. ಸರ್ವ ಗುಣ ಸಂಪನ್ನನಾದರೂ ಅಹಂಕಾರಿಯಾದರೆ ಅವನನ್ನೆಲ್ಲರೂ ಧಿಕ್ಕರಿಸುವರು. ವಿಚಾರ ಸ್ಥಾನದಲ್ಲಿ ನಿನ್ನ ಅಭಿಪ್ರಾಯ ವನ್ನೇ ಸ್ಥಾಪಿಸಲೆಣಿಸಿ ದುರಾಗ್ರಹ ಮಾಡಬೇಡ. ಎಲ್ಲರಂತೆ ನೀನೂ ಭ್ರಾಂತಿಗೊಳ್ಳಬಹುದು. ನಾನೆಲ್ಲವನ್ನೂ ಬಲ್ಲೆನೆಂಬ ಭಾವವನ್ನು ಯಾವ ಬಗೆಯಲ್ಲೂ ತಿಳಿಸಬೇಡ. ಇದು ಬುದ್ಧಿವಂತರಲ್ಲಿ ಅತಿ ನಿಂದ ನೀಯವಾದ ದೋಷ. ಹೊಗಳುವವರ ಮಾತಿಗೆ ಹಿಗ್ಗಬೇಡ; ಇವರು ಹಣವುಳ್ಳವರಿಗೆ ಕಡು ಹಗೆಗಳು. ಯಥಾರ್ಥವಾದಿಗಳೇ ಮಿತ್ರರು. ಆದುದರಿಂದ ಇದ್ದುದನ್ನಿದ್ದಂತೆ ಹೇಳುವ ಪಂಡಿತರಿಗೆ ಸನ್ಮಾನವನ್ನೂ ಧನವನ್ನೂ ಕೊಟ್ಟು ಪೂಜಿಸು. ಸಾಧ್ಯವಾದಷ್ಟು ದೇಶಸಂಚಾರ ಮಾಡು. ಆಯಾ ದೇಶದಲ್ಲಿ ಪ್ರತಿ ವಿಷಯವನ್ನೂ ಚೆನ್ನಾಗಿ ಪರ್ಯಾಲೋಚಿಸು; ಇಲ್ಲದೆಹೋದರೆ ದೇಶಪರ್ಯಟನದಿಂದ ಫಲವಿಲ್ಲ. ಸೂಕ್ಷ್ಮದರ್ಶಿಗಳಾದ

ದೇಶಚಾರಿಗಳಿಂದ ಸಕಲ ತತ್ತ್ವವನ್ನೂ ಅರಿ. ಅವರು ನಿನ್ನ ದೇಶವನ್ನು ಪರದೇಶಕ್ಕೆ ಹೋಲಿಸಿ ಹೇಳುವ ಗುಣ ದೋಷಗಳನ್ನು ಕಿವಿಗೊಟ್ಟು ಕೇಳು. ಊಟದಲ್ಲೂ ಉಡಿಗೆ ತೊಡಿಗೆಗಳಲ್ಲೂ ಆಡಂಬರವು ಬೇಡ. ಮದ್ಯವೇ ಮೊದಲಾದ ಮಾದಕ ದ್ರವ್ಯಗಳನ್ನು ಹತ್ತಿರ ಬರಗೊಡಬೇಡ. ಇವು ಮನು ಷ್ಯರ ಪಾಪವೃತ್ತಿಗಳನ್ನು ಹೆಚ್ಚಿಸುವುವು. ಮಾದಕ ಸೇವನವೂ ಪರಸ್ತ್ರೀ ಗಮನವೂ ಗುರುತರ ಪಾಪಗಳು. ನಿದ್ರಾಹಾರಗಳಲ್ಲಿ ಮಿತವಿರಲಿ. ಊಟ ವಾದ ಕೂಡಲೆ ಹತ್ತು ಗಾವುದ ಕುದುರೆಯ ಮೇಲೆ ಸವಾರಿ ಮಾಡುವಂ ತಿರಬೇಕು. ಎಷ್ಟು ಅಲ್ಪ ಕಾರ್ಯವಾದರೂ ಇತರರ ಮೇಲೆ ಹಾಕಿ ನಿಶ್ಚಿಂತನಾಗಬೇಡ. ಅದನ್ನು ನಿನ್ನ ಕಣ್ಣಿಂದ ನೋಡುವ ಅಭ್ಯಾಸ ಮಾಡು. ನಿನ್ನ ಕೈಯ ಕೆಳಗಿನವರು ಕ್ಷಮಿಸಬಹುದಾದ ಅಪರಾಧ ವನ್ನು ಮಾಡಿದರೆ ಅವರ ಹೊಟ್ಟೆಯಮೇಲೆ ಹೊಡೆಯದೆ ಬೇರೆ ಬಗೆಯಲ್ಲಿ ಅವರನ್ನು ದಂಡಿಸು ಕೆಲವರಿಗೆ ವಾಗ್ದಂಡನೆ ಪ್ರಾಣದಂಡನೆಗಿಂತ ಕ್ಲೇಶ ಕರವಾಗಿರುವುದು. ಆದುದರಿಂದ ಅಪರಾಧವು ಒಂದೇ ಆದರೂ ಅಪ ರಾಧಿಗಳ ಸ್ವಭಾವವನ್ನರಿತು ದಂಡನೆಯನ್ನು ವಿಧಿಸು. ಪ್ರಜೆಗಳಿಗೆ ರಾಜನೇ ತಂದೆ, ರಾಜನೇ ತಾಯಿ; ಆದುದರಿಂದ ಅವರ ಏಳಿಗೆಯ ನಿಮಿತ್ತವಾಗಿ ಯತ್ನಮಾಡು. ಪ್ರಜೆಗಳು ಧನವಂತರೂ ಬುದ್ಧಿವಂತರೂ ಆದರೆ ರಾಜ ನಿಗೆ ಶುಭವುಂಟು. ಯಾವ ರಾಜನ ಪ್ರಜೆಗಳು ದರಿದ್ರರೂ ಮೂಢರೂ ಆಗಿರುವರೊ ಆ ರಾಜನಿಗೆ ರಾಜಪದವು ಸಲ್ಲದು. ಆಯವನ್ನರಿತು ವ್ಯಯ ಮಾಡು. ಕೃಪಣನಂತೆ ಆರ್ಜನೆಮಾಡಿ ವಿರಕ್ತನಂತೆ ಯಥಾ ಕಾಲದಲ್ಲಿ ವೆಚ್ಚಮಾಡು. ಕೊಂಡು ಮಾರುವ ಕಾಲವು ಔದಾರ್ಯಕ್ಕೆ ಸಮಯವಲ್ಲ. ರಾಜರು ವಿಷಯಾಸಕ್ತಿಯನ್ನು ತೀರಿಸಿಕೊಳ್ಳುವ ನಿಮಿತ್ತವಾಗಿ ಪ್ರಜೆಗಳ ಹಣದಲ್ಲೊಂದು ಕವಡೆಯನ್ನೂ ಪೋಲುಮಾಡಬಾರದು. ಎಂತಹ ದುರವಸ್ಥೆಯಲ್ಲಿ ಬಿದ್ದರೂ ಸಂತುಷ್ಟನಾಗಿದ್ದು ಸ್ಥೈರ್ಯದಿಂದ ಕಷ್ಟವನ್ನು ಕಳೆಯಲು ಯತ್ನಿಸು. ವಿಶ್ವಾಸಕ್ಕೆ ಯೋಗ್ಯರಾದ ಬುದ್ಧಿವಂತರ ಮತ ವನ್ನೇ ಸರ್ವದಾ ಅವಲಂಬಿಸು. ಸರ್ವ ಗುಣ ಸಂಪನ್ನನಾದರೂ ರಾಜ ನಿಗೆ ಸುಮಂತ್ರಿಗಳಿರಬೇಕು. ಸುಮಂತ್ರಿಗಳ ಸಹಾಯದಿಂದ ಅವರು ತಮಗೆ ಬರುವ ಬಾಧೆಗಳನ್ನೂ ವಿಪತ್ತುಗಳನ್ನೂ ಪರಿಹರಿಸಿಕೊಂಡು ಸೌಭಾಗ್ಯ

ವನ್ನು ಪಡೆಯಬಹುದು. ಆಬಾಜಿಸೋನದೇವ, ಶಾಮರಾಯಪಂತ ಮೊದಲಾದವರು ವಿದ್ಯಾ ವಿನಯ ಸಂಪನ್ನರು, ಪ್ರಭು ಭಕ್ತರು, ಕಷ್ಟ ಸಹಿಷ್ಣುಗಳು, ಸ್ವಧರ್ಮ ಪರಾಯಣರು, ದೂರದರ್ಶಿಗಳು, ಸ್ವದೇಶಾಭಿ ಮಾನಿಗಳು; ಅಲ್ಲದೆ ಅವರು ಗೋ ಬ್ರಾಹ್ಮಣರಿಗಾಗಿಯೂ ಧರ್ಮಕ್ಕಾ ಗಿಯೂ ಪ್ರಾಣವನ್ನಾದರೂ ತೆರುವರು; ಅವರೆಲ್ಲರೂ ಶೂರರು, ಯುದ್ಧ ಪ್ರಿಯರು. ಅವರನ್ನು ನೀನು ಸರಿಯಾಗಿ ವಿನಿಯೋಗಿಸಿದರೆ ಅಸಾ ಧಾರಣ ಕಾರ್ಯಗಳನ್ನೂ ಸಾಧಿಸಬಹುದು. ಸ್ವಾರ್ಥಕ್ಕಾಗಿ ದೇಶದ ಹಿತವನ್ನು ಬಲಿಗೊಡುವವನು ನರರಾಕ್ಷಸನು. ಆ ಕುಲಗೇಡಿಯನ್ನು ಎಲ್ಲರೂ ಧಿಕ್ಕರಿಸುವರು. ಈ ವಿಷಯದಲ್ಲಿ ನಿನಗೆಚ್ಚರಿಕೆಯಿರಲಿ. ಮಹಾ ಭಾರತ ರಾಮಾಯಣ ಮೊದಲಾದ ಗ್ರಂಥಗಳಲ್ಲಿ ವಂದನೀಯರಾದ ಅನೇಕ ಮಹಾತ್ಮರ ಚರಿತ್ರವು ವರ್ಣಿತವಾಗಿರುವುದು. ಮಹಾ ಭಾರತದ ಕಥೆಯನ್ನು ಮನಸ್ಸಿಟ್ಟು ಪ್ರತಿ ದಿನವೂ ಸಾಧ್ಯವಾದಷ್ಟು ಮಟ್ಟಿಗೆ ಕೇಳು ತ್ತಿರು. ವಿದೇಶಿಯರ ಇತಿಹಾಸವನ್ನೂ ವೀರ ಪುರುಷರ ಚರಿತ್ರವನ್ನೂ ಕೇಳುವುದು ಒಳ್ಳೆಯದು. ಒಂದು ದೇಶವು ಹೀನ ಸ್ಥಿತಿಯಿಂದ ಉನ್ನತ ಸ್ಥಿತಿಗೆ ಯಾವ ಉಪಾಯದಿಂದ ಬಂದಿತು, ಯಾವ ಯಾವ ಕಾರಣಗಳಿಂದ ಅವನತಿ ಹೊಂದಿತು—ಇವೇ ಮೊದಲಾದ ವಿಷಯಗಳನ್ನು ಸಾವಧಾನ ವಾಗಿ ಚಿಂತನೆಮಾಡು. ಹಗೆಗಳು ಮುತ್ತಿದ ಸಮಯದಲ್ಲಿ ಮಹಾ ತ್ಮರು ಯಾವ ಉಪಾಯಗಳನ್ನು ಮಾಡಿ ವಿಪತ್ತನ್ನು ತೊಲಗಿಸಿ ಕೊಂಡರು, ಯಾವ ವಿಧವಾಗಿ ಸುಶಿಕ್ಷಿತ ಬಲದಿಂದ ಕೂಡಿದ ಸೇನಾಪತಿ ಗಳನ್ನು ಅಶಿಕ್ಷಿತವಾದ ತಮ್ಮ ಅಲ್ಪ ಸೇನೆಯಿಂದ ಜಯಿಸಿದರು— ಇತ್ಯಾದಿ ವಿಷಯಗಳನ್ನು ವಿಶೇಷ ಶ್ರದ್ಧೆಯಿಂದ ಕೇಳಿ ತಿಳಿ ಇತಿ ಹಾಸದಿಂದ ಮನುಷ್ಯರಿಗೆ ಲೋಕ ವ್ಯವಹಾರ ಜ್ಞಾನವು ಹುಟ್ಟುವುದು. ರಾಜನೀತಿಯಲ್ಲಿ ಪಂಡಿತರಾಗಲು ಇಚ್ಛಿಸುವವರು ಅವಶ್ಯವಾಗಿ ಇತಿಹಾಸ ವನ್ನು ಓದಬೇಕು. ಯೋಧರಾಗಲೆಣಿಸುವವರೂ ಇತಿಹಾಸವನ್ನು ತಿಳಿಯ ಬೇಕು. ಮಿಕ್ಕ ಮಾತೇನು? ಇತಿಹಾಸವೇ ದೃಷ್ಟಾಂತ ಸಹಿತವಾದ ಶಾಸ್ತ್ರವು. ತಂದೆ ತಾಯಿಗಳನ್ನು ಮನುಷ್ಯ ರೂಪದಲ್ಲಿರುವ ದೇವತೆ ಗಳೆಂದರಿ. ಅವರ ಇಚ್ಛೆಗೆ ವಿರೋಧವಾಗಿ ಮನಸ್ಸಿನಲ್ಲಿ ಯೋಚಿಸುವುದೂ

ಪಾಪವು. ಅವರ ಇಷ್ಟವನ್ನು ಮೀರಿ ನಡೆಯಬೇಡ. ಯಾರಾದರೂ ಯಾವುದಾದರೊಂದಾಸೆಯಿಂದ ನಿನ್ನ ಹತ್ತಿರ ಬಂದರೆ ಒಂದೇ ಸಾರಿ ಅವರ ಆಸೆಯನ್ನು ಮುರಿಯಬೇಡ. ಅವರ ಕೋರಿಕೆಯನ್ನು ತೀರಿಸ ಲಾಗದೆ ಹೋದರೆ ನಿನ್ನಿಂದ ಆಗುವುದಿಲ್ಲವೆಂದು ಒಳ್ಳೆಯ ಮಾತಿನಿಂದ ಹೇಳು. ಕನಸಿನಲ್ಲೂ ಯಾರಿಗೂ ಕಟು ಭಾಷೆಯನ್ನಾಡಬೇಡ. ಶತ್ರು ವನ್ನು ಸಂಹಾರ ಮಾಡುವಾಗಲೂ ಒಳ್ಳೆಯ ಮಾತನಾಡು. ಯುದ್ಧದಲ್ಲಿ ಸತ್ತವರ ಹೆಂಡತಿ ಮಕ್ಕಳನ್ನು ಸಲಹು. ಇದರಿಂದ ಸೈನಿಕರಿಗೆ ಪ್ರಭುವಿ ನಲ್ಲಿ ಭಕ್ತಿ ಹೆಚ್ಚುವುದು. ದೇಶ ವಿದೇಶಗಳಲ್ಲಿ ಮುಖ್ಯರಾಗಿರುವವರ ಅಭಿ ಪ್ರಾಯಗಳನ್ನೂ ಸಾಧಾರಣ ಜನರ ಅಭಿಪ್ರಾಯಗಳನ್ನೂ ಚಾರರ ಮೂಲಕ ವಾಗಿ ತಿಳಿ. ತಕ್ಕ ಸಮಯಗಳಲ್ಲಿ ನೀನೂ ಗುಪ್ತವಾಗಿ ಜನಗಳ ರೀತಿ ನೀತಿಗಳನ್ನು ತಿಳಿಯಲು ಯತ್ನಿಸು. ಹಗೆಗಳನ್ನು ಗೆದ್ದ ಬಳಿಕ ನೋಯಿಸ ಬೇಡ. ಗಾಯವಟ್ಟ ಶತ್ರುಗಳನ್ನು ಔಷಧ ಪಥ್ಯ ಶುಶ್ರೂಷೆಗಳಿಂದ ಆರಯ್ಕೆ ಮಾಡಿಸಿ ಗುಣವಾದಮೇಲೆ ಆದರದಿಂದ ಕಳುಹಿಸಿಕೊಡು. ನಾನು ೨೫–೩೦ ವರ್ಷಗಳ ಕಾಲ ಕೆಲಸ ಮಾಡಿದೆನು. ಈ ದೀರ್ಘ ಕಾಲದಲ್ಲಿ ಮಾವಳಿಗಳ ನಡತೆ ನನಗೆ ಬಹು ಸಂತೋಷವನ್ನುಂಟುಮಾಡಿರುವುದು. ಅವರು ನಿಷ್ಕಪಟಿಗಳು, ಸತ್ಯವಾದಿಗಳು, ಪ್ರಭು ಭಕ್ತರು, ಪರಿಶ್ರಮಿಗಳು, ಕ್ಲೇಶ ಸಹಿಷ್ಣುಗಳು. ಇಂತಹ ಗುಣ ಸಂಪನ್ನರಾದರೂ ಅವರು ಜಮೀನ್ದಾರರ ವೇಧೆಯಿಂದ ತಿನ್ನುವುದಕ್ಕನ್ನವಿಲ್ಲದೆಯೂ ಹೊದೆಯುವುದಕ್ಕೆ ಬಟ್ಟೆಯಿಲ್ಲದೆಯೂ ಶ್ರಮಪಡುತ್ತಲಿರುವರು. ಬಡತನದ ದೆಸೆಯಿಂದ ಅವರು ಕಾಡು ಕಾಡುಗಳಲ್ಲೂ ಬೆಟ್ಟ ಗುಟ್ಟಗಳಲ್ಲೂ ಅಲೆಯುತ್ತಿರುವರು. ಸೈನಿಕ ಕಾರ್ಯಕ್ಕೆ ಅವರು ತಕ್ಕವರು; ಒಡೆಯನಿಗಾಗಿ ತಲೆಯನ್ನು ತೆರು ವರು; ಎಂದಿಗೂ ದ್ರೋಹವನ್ನೆಣಿಸರು. ಅವರನ್ನು ನೀನು ಪ್ರೀತಿಯಿಂದ ಪಾಲಿಸು. ಅವರಿಂದ ನೀನು ಅನೇಕ ಕಾರ್ಯಗಳನ್ನು ಸಾಧಿಸಬಹುದು. ಇನ್ನು ಹೇಳತಕ್ಕುದೇನಿದೆ? ದೇಶ ಕಾಲ ಪಾತ್ರಗಳನ್ನರಿತು ಕಾರ್ಯಗಳನ್ನು ಮಾಡು. ಧರ್ಮಮಾರ್ಗವನ್ನು ಬಿಡದಿರು. ಯಾವ ಜಾತಿಯವರೇ ಆಗಲಿ ಪ್ರಜೆಗಳನ್ನು ಮಕ್ಕಳಂತೆ ಸಲಹು. ರಾಜನು ಧರ್ಮ ಸ್ವರೂಪನು; ಆದುದರಿಂದ ಪ್ರಜೆಗಳ ಧರ್ಮಕ್ಕೆ ವಿಘ್ನವನ್ನು ತರಬೇಡ. ದ್ರವ್ಯವನ್ನು

ಜೋಕೆಯಾಗಿ ಪಾಲಿಸು. ಕೆಟ್ಟವರ ಸಹವಾಸವನ್ನು ಮಾಡದಿರು. ಯಾವ ಕಾರ್ಯವನ್ನು ಮಾಡಬೇಕೆಂದು ನೀನು ಪ್ರತಿಜ್ಞೆ ಮಾಡಿದ್ದೀಯೋ ಅದಕ್ಕಿಂತ ಶ್ರೇಷ್ಠವಾದ ಕಾರ್ಯವಿನ್ನಿಲ್ಲ. ಗೋ ಬ್ರಾಹ್ಮಣ ರಕ್ಷಣೆಗೂ ದೇಶ ಕ್ಷೇಮಕ್ಕೂ ಸ್ವಾರ್ಥ ತ್ಯಾಗವನ್ನು ಮಾಡುವುದಕ್ಕಿಂತ ಉತ್ತಮವಾದ ಸಂನ್ಯಾಸವು ಬೇರೆಯಿಲ್ಲ. ಸ್ವಧರ್ಮದ ಉದ್ಧಾರಕ್ಕಾಗಿ ನೀನು ಅವಲಂಬಿಸಿರುವ ಉತ್ಕಟ ದಾರಿದ್ರ್ಯಕ್ಕಿಂತ ಘೋರವಾದ ತಪಸ್ಸಿಲ್ಲ. ನಿನ್ನ ಈ ಮಂಗಳಕರವಾದ ಕಾರ್ಯಗಳಿಗೆ ಪರಮ ಮಂಗಳಮಯನಾದ ಪರಮೇಶ್ವರನು ನೆರವಾಗಲಿ. ನೀನು ಕೈಕೊಂಡಿರುವ ಶುಭ ಕಾರ್ಯಗಳಲ್ಲಿ ನಾನಾ ಪ್ರಕಾರವಾದ ವಿಘ್ನ ವಿಪತ್ತುಗಳೂ ಕ್ಲೇಶ ದುಃಖಗಳೂ ಬರಬಹುದು; ಹೆದರದೆ ಸಾವಧಾನವಾಗಿರು. ಅಂತಹ ಪರೀಕ್ಷೆಯ ಕಾಲಗಳಲ್ಲಿ ಧೈರ್ಯಗೆಡಬೇಡ. ಭಗವಂತನಲ್ಲಿ ಚಿತ್ತವಿಡು. ಅವನ ಕೃಪೆಯಿಂದ ಸಕಲ ಬಾಧೆಗಳೂ ವಿಪತ್ತುಗಳೂ ತೊಲಗುವುವು ಮಾಡುವ ಕಾರ್ಯಗಳನ್ನು ಕರ್ತವ್ಯಗಳೆಂದೆಣಿಸಿ ಮಾಡು. ಕಾರ್ಯ ಸಫಲವಾದರೆ ಹಿಗ್ಗದಿರು, ವಿಫಲವಾದರೆ ಕುಂದದಿರು. ಈ ವಿಧವಾದ ಸಾಧನೆಯನ್ನು ಮಾಡು.''

ಇಂತೆಂದು ದಾದಾಜಿ ಕೋಂಡದೇವನು ಉಪದೇಶ ಮಾಡಿದನು. ಶಿವಾಜಿಯ ಮುಖಮಂಡಲದಲ್ಲೊಂದು ಅಪೂರ್ವವಾದ ಕಾಂತಿ ಹುಟ್ಟಿತು. ಗುರುವಿನ ಹಿತೋಪದೇಶದಿಂದ ಅವನ ಹೃದಯವು ಆನಂದಭರಿತವಾಯಿತು. ಆದರೆ ಶಿವಾಜಿಯ ಪರಮ ಶ್ರದ್ಧಾಸ್ಪದನಾದ ಗುರುವು ಮೃತ್ಯುಶಯ್ಯೆಯಲ್ಲಿ ಮಲಗಿದ್ದನು. ಇಂತಹ ಕರುಣಾಳುವಾದ ಗುರುವು ಇನ್ನು ದುರ್ಲಭ, ಸಕಲ ಶಾಸ್ತ್ರ ಸಾರದಿಂದ ಕೂಡಿದ ಈ ವಿಧವಾದ ಉಪದೇಶವು ಇನ್ನು ಶ್ರುತಿಗೋಚರವಾಗಲರಿಯದು ಎಂದು ಮನಸ್ಸಿಗೆ ಬರುತ್ತಲೆ ಅವನ ಕೆಂಪೇರಿದ ಮುಖವು ಬೆಳ್ಳಗಾಯಿತು; ಕಣ್ಣೀರುಕ್ಕಿತು: ಮುಖದ ಕಾಂತಿ ಅಡಗಿತು. ದಾದಾಜಿ ಅಡಿಗಡಿಗೆ ಮೂರ್ಛೆಹೋಗಲಾರಂಭಿಸಿದನು; ಮಾತನಾಡಲು ಕಷ್ಟವಾಯಿತು; ಪಕ್ಕದಲ್ಲಿ ಕುಳಿತಿದ್ದ ಹೆಂಡತಿಯನ್ನು ಕುರಿತು, ತಲೆಯನ್ನು ಕೊಂಚ ಎತ್ತಿ ಹಿಡಿಯೆಂದು ಹೇಳಿದನು. ಸಹಧರ್ಮಿಣಿಯು ತಲೆಯನ್ನು ಎತ್ತಿಹಿಡಿದಳು. ಕೂಡಲೆ ಮೃತ್ಯುವಿನ ಚಿಹ್ನೆಗಳೆಲ್ಲ ಕಂಡುವು. ಆಗಲೂ ಅವನಿಗೆ ಪ್ರಜ್ಞೆ ತಪ್ಪಲಿಲ್ಲ. ''ಅಂತ

ಕಾಲೇಚ ಮಾಮೇವ ಸ್ಮರ್ರ ಮುಕ್ತ್ವಾ ಕಳೇಬರಮ್” ಎಂಬೀ ಗೀತಾ ವಾಕ್ಯವನ್ನು ನುಡಿದು ದಾದಾಜಿ ಕೊಂಡದೇವನು ಕಣ್ಣು ಮುಚ್ಚಿದನು.

ದಾದಾಜಿ ಪುಣೆಯ ಪ್ರದೇಶದಲ್ಲಿರುವ ಮಲ್ಹನವೆಂಬ ಗ್ರಾಮದಲ್ಲಿ ಹುಟ್ಟಿದ ಒಬ್ಬ ದೇಶಸ್ಥ ಬ್ರಾಹ್ಮಣನು. ಅವನ ಪೂರ್ವಿಕರು ಈ ಗ್ರಾಮದ ಕುಲಕರ್ಣಿಗಳು. ಷಾಹಜಿಯು ದಾದಾಜಿಯ ಬುದ್ಧಿ, ಕಾರ್ಯತತ್ಪರತೆ, ಧರ್ಮಪರಾಯಣತೆ ಮೊದಲಾದ ಗುಣಗಳಿಗೆ ಮೆಚ್ಚಿ ಪುಣೆ ಮತ್ತು ಸೂಪ ವೆಂಬ ತನ್ನ ಜಹಗೀರಿಗಳ ಕಾರ್ಯಗಳನ್ನು ನೋಡುವುದಕ್ಕಾಗಿ ಅವನನ್ನು ಕರೆಯಿಸಿಕೊಂಡನು. ದಾದಾಜಿ ಅಲ್ಪಕಾಲದೊಳಗೆ ಜಹಗೀರಿಯನ್ನು ಶ್ರಯಕ್ಕೆ ತಂದನು. ಅವನು ಭೂಮಿಯ ಹುಟ್ಟುವಳಿಗೆ ತಕ್ಕ ಹಾಗೆ ಕಂದಾಯವನ್ನು ಹಾಕಿ ಜಹಗೀರಿಯ ಉತ್ಪತ್ತಿಯನ್ನು ಹೆಚ್ಚಿಸಿದನು. ಅದ ರಿಂದ ಷಾಹಜಿಯು ಹೆಚ್ಚಾಗಿ ಕಾಲಾಳುಗಳನ್ನೂ ಬಾರ್ಗೀರುಗಳನ್ನೂ ಇಟ್ಟು ಗಿರಿ ದುರ್ಗಗಳನ್ನು ಭದ್ರಪಡಿಸಿದನು. ಅವನ ಪಾರುಪತ್ಯವು ಪ್ರಜೆ ಗಳಿಗೆ ಹಿತವಾಗಿದ್ದುದಲ್ಲದೆ ಷಾಹಜಿಗೂ ಅಚ್ಚುಮೆಚ್ಚಾಗಿದ್ದಿತು. ಅವನ ಕಾಲದಲ್ಲಿ ಪುಣೆ, ಸೂಪ, ಇಂದಾಪುರ, ಬಾರಾಮತಿ, ಮಾವಳ—ಇವುಗಳು ಯಾವ ಬಾಧೆಯೂ ಇಲ್ಲದೆ ಸುರಕ್ಷಿತವಾಗಿದ್ದುವು.

ಷಾಹಜಿಯು ಮಗನ ಹತ್ತಿರವಿರುತ್ತಿರಲಿಲ್ಲ. ಪರಂತು, ದಾದಾಜಿಯು ಮಗನ ಬಳಿ ತಂದೆ ಇರಲಿಲ್ಲವೆಂದೆನಿಸಲಿಲ್ಲ. ತಂದೆಯು ಹತ್ತಿರವಿದ್ದು ಮಗ ನನ್ನು ಎಷ್ಟು ಮಮತೆಯಿಂದ ಸಾಕಿ ಸಲಹುತ್ತಿದ್ದನೊ ಅಷ್ಟು ಮಮತೆ ಯಿಂದ ದಾದಾಜಿಯು ಶಿವಾಜಿಯನ್ನು ಪಾಲಿಸುತ್ತಿದ್ದನು. ಆ ಬಾಲಕನು ಬೆಟ್ಟಗಳಲ್ಲಿ ಸ್ವೇಚ್ಛೆಯಾಗಿ ಅಲೆಯುತ್ತಿದ್ದುದು ಅವನಿಗೆ ಇಷ್ಟವಾಗಿರಲಿಲ್ಲ. ಆದರೂ ಅದರಿಂದ ಆ ವೀರ ಬಾಲಕನಲ್ಲಿ ಅವನಿಗಿದ್ದ ಪ್ರೀತಿಯು ಲೇಶ ವಾದರೂ ಕಡಿಮೆಯಾಗಲಿಲ್ಲ. ಶಿಷ್ಯನು ಸ್ವರಾಜ್ಯವನ್ನು ಕಟ್ಟಲು ಮಾಡು ತ್ತಿದ್ದ ಆಲೋಚನೆಗಳೆಲ್ಲವೂ ಹುಡುಗಾಟವೆಂದು ದಾದಾಜಿಯು ಊಹಿ ಸಿದ್ದನು; ಕಡೆ ಕಡೆಗೆ ಅವನ ಅದ್ಭುತ ಸಾಮರ್ಥ್ಯವನ್ನು ಕಂಡು ಅವನಿಗೆ ದಿಗ್ವಿಜಯವಾಗಲೆಂದು ಹರಸಿ ಸುಮ್ಮನಾದನು. ಅವನು ರಾಜ ಕಾರ್ಯ ಗಳಲ್ಲಾಗಲಿ ಗೃಹ ಕಾರ್ಯಗಳಲ್ಲಾಗಲಿ ನ್ಯಾಯವನ್ನು ಬಿಟ್ಟು ಹೋಗುತ್ತಿರ

ಲಿಲ್ಲ. ಒಂದಾನೊಂದು ದಿನ ಅವನು ಷಾಹಜಿಯ ತೋಟದಲ್ಲಿ ಒಂದು ಮಾವಿನ ಕಾಯನ್ನು ಕಿತ್ತನು. ಕೂಡಲೆ ತಾನು ಮಾಡಬಾರದ ಕೆಲಸ ವನ್ನು ಮಾಡಿದೆನೆಂದು ಭಾವಿಸಿ ಹತ್ತಿರವಿದ್ದವರಿಗೆ ತನ್ನ ಬಲಗೈಯನ್ನು ಕತ್ತರಿಸಿ ಹಾಕಿರೆಂದು ಹೇಳಿದನು. ಅವರು ಎಷ್ಟೋ ಬಗೆಯಲ್ಲಿ ಬೇಡಿ ಕೊಂಡಮೇಲೆ ಆ ಯೋಚನೆಯನ್ನು ಬಿಟ್ಟನು. ಆದರೂ ತಾನು ಮಾಡಿದ ಅಪರಾಧಕ್ಕೆ ದಂಡನೆಯಾಗಿ ಬಲಗೈಗೆ ಅಂಗಿಯ ತೋಳನ್ನು ಹಾಕಿ ಕೊಳ್ಳುತ್ತಿರಲಿಲ್ಲ. ಕಡೆಗೆ ಷಾಹಜಿಯೇ ಬಲಾತ್ಕಾರಮಾಡಿ ಬಲಗೈಗೆ ತೋಳನ್ನು ಹಾಕಿಸಿದನು.

———

## ಮೂರನೆಯ ಪ್ರಕರಣ

---

## ಶಿವಾಜಿಯ ಅಭೀಷ್ಟ, ಸಾಧನ ಸಂಪತ್ತಿ.

ಆಂಧ್ರ ರಾಷ್ಟ್ರಕೂಟ ಚಾಳುಕ್ಯ ಸಾಮ್ರಾಜ್ಯಗಳು ಪರಸ್ಪರ ಕಲಹಗಳಿಂದ ಛಿನ್ನಭಿನ್ನವಾಗಿ ಹೋದುವು. ಯಾದವರ ದೇವಗಿರಿ, ಕಾಕತೀಯರ ಓರಗಲ್ಲು, ಹೊಯ್ಸಳರ ದ್ವಾರಸಮುದ್ರ—ಇವು ಪರಸ್ಪರ ವೈಷಮ್ಯದಿಂದ ನಿಸ್ತೇಜವಾಗಿ ಅನ್ಯಾಕ್ರಾಂತವಾದುವು. ಉತ್ತರ ಹಿಂದೂಸ್ಥಾನದಿಂದ ಮೇಲೆ ಮೇಲೆ ಬರುತ್ತಿದ್ದ ಮುಸಲ್ಮಾನರ ದಂಡುದಾಳಿಗಳ ಕಾಟದಿಂದ ಹತವೀರ್ಯರೂ ಹತಾಶರೂ ಆಗಿದ್ದ ಹಿಂದೂಗಳನ್ನು ಸಂಜೀವಿತರನ್ನಾಗಿ ಮಾಡಿ ವಿಪತ್ಕಲ್ಲೋಲದಿಂದ ಅವರನ್ನು ಉದ್ಧಾರಮಾಡಿದ ವಿಜಯನಗರ ಸಾಮ್ರಾಜ್ಯವು ನಾಮಾವಶಿಷ್ಟವಾಯಿತು. ತರುವಾಯ ಬಹು ಕಾಲ ಪರ್ಯಂತವಾಗಿ ದಕ್ಷಿಣದಲ್ಲಿ ಹಿಂದೂಗಳ ರಕ್ಷಣಾ ವೀಕ್ಷಣಕ್ಕೆ ಅಂತಹ ಇನ್ನೊಂದು ರಾಜ್ಯ ಹುಟ್ಟಲಿಲ್ಲ ಹೀಗಿರುವಲ್ಲಿ ಮೊಗಲರು ಅಡಿಗಡಿಗೆ ದಿಗ್ವಿಜಯಾರ್ಥವಾಗಿ ದಕ್ಷಿಣ ಹಿಂದೂಸ್ಥಾನಕ್ಕೆ ಬರುತ್ತಿದ್ದರು. ದಾಕ್ಷಿಣಾತ್ಯರು ಮುನ್ನೂರು ವರ್ಷಗಳ ಹಿಂದೆ ತಮ್ಮ ಹಿರಿಯರು ವಿದೇಶಿಗಳಿಂದ ಪಟ್ಟ ಕಷ್ಟ ನಷ್ಟಗಳನ್ನು ಮರೆಯಲಿಲ್ಲ. ಅವರು ಆ ಸಂಕಟಗಳು ದಕ್ಷಿಣ ದೇಶಕ್ಕೆ ಮರುಕೊಳಿಸುವ ಸಂಭವವನ್ನು ಕಂಡು ತಮ್ಮ ಕಷ್ಟ ವಿಮೋಚನಾರ್ಥವಾಗಿ ವೀರವಸಂತರಾಯನು ಹುಟ್ಟುವ ಸಮಯವು ಬಂದಿತೆಂದು ಅವನ ಅವತಾರವನ್ನು ನಿರೀಕ್ಷಣೆ ಮಾಡುತ್ತಿದ್ದರು. ಶಿವಾಜಿಯ ಕಾರ್ಯ ಕಲಾಪವನ್ನು ಕಂಡು ಕೇಳಿದವರೆಲ್ಲರೂ ಅವನನ್ನೇ ವೀರವಸಂತರಾಯನೆಂದು ಭಾವಿಸಲಾರಂಭಿಸಿದರು. ಶಿವಾಜಿಯು ಕೂಡ ತಾನು ಜನ್ಮವೆತ್ತಿರುವುದು ದೇಶೋದ್ಧಾರಕ್ಕಾಗಿಯೇ ಎಂದು ಸಂಪೂರ್ಣವಾಗಿ ನಂಬಿ ತನಗೆ ದೈವಾನುಗ್ರಹವೂ ದೈವ ಬಲವೂ ಇವೆಯೆಂಬ ದೃಢ ವಿಶ್ವಾಸದಿಂದ ಶತ್ರುಗಳ ನಡುವೆ ಕಾರ್ಯಭಾಗ ಮಾಡುತ್ತಿದ್ದನು. ಹಿಂದೂಗಳ ರಕ್ಷಣಾರ್ಥವಾಗಿ ಒಂದು ರಾಜ್ಯವನ್ನು ನಿರ್ಮಾಣಮಾಡಿ, ಆಗ ಉಳಿದಿದ್ದ ಬಿಜಾಪುರ ಮತ್ತು ಗೋಲ್ಕೊಂಡದ ಮುಸಲ್ಮಾನ ಸಂಸ್ಥಾನಾಧಿಪತಿಗಳ

ಸಹಾಯದಿಂದ ಮೊಗಲರನ್ನು ವಿಂಧ್ಯಾದ್ರಿಗಾಚೆ ತಡೆದಿಟ್ಟು ದಕ್ಷಿಣ ದೇಶಕ್ಕೆ ಅವರ ಸಂಪರ್ಕವಿಲ್ಲದಂತೆ ಮಾಡುವುದೇ ಶಿವಾಜಿಯ ಜೀವನೋದ್ದೇಶವು. ಕಾರಣಗಳು ಬೇರೆಯಾದರೂ ದಕ್ಖನಿನ ಮುಸಲ್ಮಾನರ ಅಭೀಷ್ಟವೂ ಅದೇ ಆಗಿದ್ದಿತು. ಹಿಂದೂಗಳು ಸ್ವಧರ್ಮರಕ್ಷಣಾರ್ಥವಾಗಿಯೂ ಮುಸಲ್ಮಾನರು ಸ್ವರಾಜ್ಯರಕ್ಷಣಾರ್ಥವಾಗಿಯೂ ಒಬ್ಬರೊಡನೊಬ್ಬರು ಕಲೆತು ಒಂದಾಗುವರಾಗಿದ್ದರು. ಅಲ್ಲದೆ, ದಕ್ಖನಿನ ಸುಲ್ತಾನರು ಉತ್ತರ ಹಿಂದೂಸ್ಥಾನದಿಂದ ವೇತನಾರ್ಥವಾಗಿ ಬರುತ್ತಿದ್ದ ಹಲವು ಬಗೆಯ ಮುಸಲ್ಮಾನರನ್ನು ವಿದೇಶಿಗಳನ್ನಾಗಿ ಎಣಿಸಿ, ಕೇಡಿಗರೆಂದು ಅವರಿಗೆ ಆಸ್ಪದ ಕೊಡದೆ, ಮರಾಟೆಯವರನ್ನೇ ಯುದ್ಧಕ್ಕೂ ತಮ್ಮ ವೈಗಾವಲಿಗೂ ಇಟ್ಟುಕೊಳ್ಳುತ್ತಿದ್ದರು. ಸುಲ್ತಾನರ ಆಸ್ಥಾನದಲ್ಲಿದ್ದ ಮುಸಲ್ಮಾನ ಸರದಾರರು ತಮ್ಮ ತಮ್ಮ ಪ್ರಯೋಜನಾರ್ಥವಾಗಿ ಕಾದಾಡುತ್ತ ಒಬ್ಬರ ಮೇಲೊಬ್ಬರು ಮೊಗಲ್ ಪಾದಷಾಹರ ಸಹಾಯವನ್ನು ಕೋರುತ್ತಿದ್ದರೂ ಒಟ್ಟಿನಲ್ಲಿ ದಕ್ಖಣ ಮುಸಲ್ಮಾನರೂ ಹಿಂದೂಗಳೂ ಒಂದಾಗಿ ಮೊಗಲರನ್ನು ದೂರವಿಡುವ ಸಂಭವವು ಹೆಚ್ಚಾಗಿದ್ದಿತು.

ಶಿವಾಜಿಯು ಪ್ರತಿಭಾಶಾಲಿಯೆಂಬುದರಲ್ಲಿ ಸಂಶಯವಿಲ್ಲ. ಆದರೂ ಅವನು ಹಿಡಿದ ಕಾರ್ಯವು ಒಬ್ಬನ ಸಾಮರ್ಥ್ಯದಿಂದ ಸಾಧ್ಯವಾಗತಕ್ಕುದಾಗಿರಲಿಲ್ಲ. ಭಾಗ್ಯವಶದಿಂದ ಅವನು ಕಾರ್ಯಕ್ಷೇತ್ರವನ್ನು ಪ್ರವೇಶ ಮಾಡುವ ಸಮಯಕ್ಕೆ ಹಲವರು ಸಮರ್ಥರು ಅವನ ಸಹಾಯಾರ್ಥವಾಗಿ ಸಿದ್ಧರಾಗಿದ್ದರು. ಅವನ ಸಹಯೋಗಿಗಳೆಲ್ಲರೂ ಷಾಹೀ ಸಂಸ್ಥಾನದಲ್ಲಿ ರಾಜಕಾರ್ಯಗಳಲ್ಲಿ ಪ್ರವೇಶಮಾಡಿ ಪರಿಣತರಾದವರು. ಉತ್ತರ ಹಿಂದೂಸ್ಥಾನದಲ್ಲಿ ಹಿಂದೂಗಳಿಗೂ ಮುಹಮ್ಮದೀಯರಿಗೂ ಇದ್ದಷ್ಟು ವೈಷಮ್ಯವು ದಕ್ಷಿಣದಲ್ಲಿರಲಿಲ್ಲ. ನಡುನಡುವೆ ಒಬ್ಬೊಬ್ಬರು ಹಿಂದೂ ಮತ ದ್ವೇಷಿಗಳಾಗಿದ್ದರೂ, ಒಂದೊಂದು ವೇಳೆ ಅತ್ಯಾಚಾರಗಳು ನಡೆದರೂ, ಸಾಮಾನ್ಯವಾಗಿ ಷಾಹೀ ಸುಲ್ತಾನರು ಅನ್ಯಮತ ಸಹಿಷ್ಣುಗಳಾಗಿದ್ದರು. ರಾಜಕಾರ್ಯಗಳಲ್ಲಿ ಮುಸಲ್ಮಾನರು ಹಿಂದೂಗಳನ್ನು ಅನ್ಯಮತದವರೆಂದು ದ್ವೇಷಿಸದೆ ಅವರನ್ನು ಉನ್ನತ ಪದವಿಯಲ್ಲಿಡುತ್ತಿದ್ದರು. ಅವರ ಆಳಿಕೆಯಲ್ಲಿ ಶಿವಾಜಿಯ ಪೂರ್ವಿಕರು ಮಾತ್ರವೇ ಅಲ್ಲ, ಇನ್ನೂ ಹಲವು ಮರಾಟೆಯ ಮನೆತನ

ದವರು ಏಳಿಗೆಗೆ ಬಂದರು. ಅವರ ಆಸ್ಥಾನದಲ್ಲಿ ಮಂತ್ರಿಗಳು, ನ್ಯಾಯ ಸ್ಥಾನದಲ್ಲಿ ನ್ಯಾಯಾಧಿಪತಿಗಳು, ಭಂಡಾರದಲ್ಲಿ ಕೋಶಾಧ್ಯಕ್ಷರು, ರಣ ರಂಗದಲ್ಲಿ ಭಟರೂ ಸೇನಾಧಿಪತಿಗಳೂ—ಇವರೆಲ್ಲರೂ ಮಹಾರಾಷ್ಟ್ರರಾಗಿದ್ದರು. ಸಂಸ್ಥಾನದ ಆಯ ವ್ಯಯಕ್ಕೆ ಸಂಬಂಧಪಟ್ಟ ವಿಚಾರವೆಲ್ಲವೂ ಅವರದಾಗಿಯೇ ಇದ್ದಿತು. ಹೀಗೆ ಸುಲ್ತಾನರು ಹಿಂದೂಗಳನ್ನು, ವಿಶೇಷವಾಗಿ ಮರಾಟಿಯವರನ್ನು, ಕಂಡರೆ ಅಭಿಮಾನಶಾಲಿಗಳಾಗಿರುವುದನ್ನೂ ಹಿಂದೂಗಳು ರಾಜಕೀಯ ಕಾರ್ಯಗಳಲ್ಲಿ ದಿನ ದಿನಕ್ಕೆ ಪ್ರಬಲಿಸುತ್ತಿರುವುದನ್ನೂ ಕಂಡು ಮುಸಲ್ಮಾನ ಸರದಾರರು ಅಸೂಯಾಪರರಾಗಿ ಅವರನ್ನು ಮುರಿಯುವುದಕ್ಕೆ ಆಸ್ಥಾನದಲ್ಲಿ ಸಂಧಾನಗಳನ್ನು ಮಾಡತೊಡಗಿದರು. ಗೋಲ್ಕೊಂಡದ ಸುಲ್ತಾನ ಅಬೂಹಸನ ಕುತುಬ್‌ಷಾಹನು ಹಿಂದೂಗಳ ಪಕ್ಷಪಾತಿಯಾಗಿದ್ದನು ಅವನು ಅಕ್ಕನ್ನ ಮಾದನ್ನರೆಂಬಿಬ್ಬರು ಬ್ರಾಹ್ಮಣರನ್ನು ಮುಖ್ಯ ಮಂತ್ರಿಯನ್ನಾಗಿಯೂ ಸೇನಾಧಿಪತಿಯನ್ನಾಗಿಯೂ ಇಟ್ಟುಕೊಂಡು ಮಾದನ್ನನಿಗೆ ಸರ್ವಾಧಿಕಾರವನ್ನು ಕೊಟ್ಟಿದ್ದನು. ಈ ಸಂದರ್ಭದಲ್ಲಿ ಒಬ್ಬ ಮುಸಲ್ಮಾನನನ್ನು ತೆಗೆದುಹಾಕಿಯೇ ಮಾದನ್ನನಿಗೆ ಮಂತ್ರಿ ಪದವಿಯನ್ನು ಕೊಡಬೇಕಾಗಿ ಬಂದಿತು. ಗೋಲ್ಕೊಂಡ ಸಂಸ್ಥಾನವನ್ನು ಆಕ್ರಮಿಸಬೇಕೆಂದು ಹೊಂಚುಹಾಕುತ್ತಿದ್ದ ದಿಳ್ಳಿಯ ಪಾದಷಾಹನಾದ ಅವರಂಗಜೇಬನು ಸುಲ್ತಾನನು ಬ್ರಾಹ್ಮಣರನ್ನು ಮಂತ್ರಿ ಪದವಿಯಲ್ಲಿಟ್ಟುದೇ ಮಹಾಪರಾಧವೆಂದಾರೋಪಿಸಿ ಆ ರಾಜ್ಯದ ಮೇಲೆ ದಂಡನ್ನು ಕಳುಹಿಸಿದನು. ಈ ಸುಲ್ತಾನನ ಉದಾರ ಭಾವವನ್ನು ನೋಡಿ ಹಿಂದೂಗಳು ಈತನು ಪೂರ್ವ ಜನ್ಮದಲ್ಲಿ ಬ್ರಾಹ್ಮಣನಾಗಿದ್ದು ಯೋಗಭ್ರಷ್ಟನಾದುದರಿಂದ ಈ ಜನ್ಮದಲ್ಲಿ ಮುಸಲ್ಮಾನನಾಗಿ ಹುಟ್ಟಿದನೆಂದು ಭಾವಿಸುವಷ್ಟು ಅವನನ್ನು ಪ್ರೀತಿಸುತ್ತಿದ್ದರು. ಭದ್ರಾಚಲದ ರಾಮದಾಸನ ಕಥೆಯಲ್ಲಿ ಬರುವ ತಾನೀಷಾಹನೇ ಈ ಸುಲ್ತಾನನು. ಈ ರೀತಿಯಾಗಿ ಷಾಹಿ ಸಂಸ್ಥಾನಗಳಲ್ಲಿ ಮಹಾರಾಷ್ಟ್ರರು ಸಣ್ಣ ಕೆಲಸದಿಂದ ದೊಡ್ಡ ಕೆಲಸದವರೆಗೂ ವ್ಯಾಪಕರಾಗಿ ರಾಜಕಾರ್ಯಗಳಲ್ಲಿ ಅನುಭವಶಾಲಿಗಳೂ ಸಮರ್ಥರೂ ಆದರು.

ದಾದಾಜಿ ಕೋಂಡದೇವನು ಕಡೆಕಡೆಗೆ ತನ್ನ ಶಿಷ್ಯನ ಭವಿಷ್ಯವನ್ನರಿತು ಮುಂದೆ ಅವನ ಪ್ರಯೋಜನಾರ್ಥವಾಗಿ ಅನೇಕ ಮಂದಿ ಕಾರಕೂನರನ್ನು ಕೆಲಸಕ್ಕೆ ಸಿದ್ಧಪಡಿಸಿಟ್ಟಿದ್ದನು. ಅಲ್ಲದೆ, ಕೆಲವರು ಸೇನಾನಾಯಕರೂ ಉದ್ಯೋಗಸ್ಥರೂ ಅವನಿಂದ ಶಿಕ್ಷಿತರಾಗಿದ್ದರು.

ರಾಜ್ಯದ ಹುಟ್ಟುವಳಿ ಮುಟ್ಟುವಳಿಯ ಅಧಿಕಾರವೆಲ್ಲವೂ ಹಿಂದೂಗಳ ಕೈಗೆ ಬಂದುದು ಮಾತ್ರವಲ್ಲದೆ ಬಹಮನಿಯವರ ಆಳಿಕೆಯಲ್ಲಿ ಉರ್ದು ಅಥವಾ ಪಾರ್ಸಿಯ ಭಾಷೆಯಲ್ಲಿ ಇಡುತ್ತಿದ್ದ ಗ್ರಾಮ ಮತ್ತು ಮಹಲ್ ಲೆಕ್ಕಪತ್ರಗಳನ್ನು ಮರಾಟಿಯಲ್ಲಿ ಇಡುವಂತೆ ಏರ್ಪಾಡಾಯಿತು. ಇದರಿಂದ ಭಾಷೆಯು ಪ್ರಚಾರಕ್ಕೆ ಬಂದುದಲ್ಲದೆ ಮರಾಟಿಯವರ ಪ್ರಾಶಸ್ತ್ಯವೂ ಹೆಚ್ಚುವಂತಾಯಿತು.

ಹೀಗೆ ಹದಿನೇಳನೆಯ ಶತಾಬ್ದದ ಪ್ರಾರಂಭದಲ್ಲಿ ಷಾಹಿ ಸಂಸ್ಥಾನಗಳ ರಾಜ್ಯಭಾರವು ವಸ್ತುಗತಿಯಲ್ಲಿ ಮಹಾರಾಷ್ಟ್ರ ಮಂತ್ರಿಗಳ ಮತ್ತು ರಣಕುಶಲರ ಅಧೀನವಾಗಿದ್ದಿತು. ಸುಲ್ತಾನರು ಅಲಂಕಾರಕ್ಕೆ ಸುಲ್ತಾನರಾಗಿದ್ದರು. ಗಟ್ಟದ ಸುತ್ತಮುತ್ತಲಿನ ಗಿರಿದುರ್ಗಗಳೆಲ್ಲವೂ ಮರಾಟಿ ಜಹಗೀರದಾರರ ವಶದಲ್ಲಿದ್ದುವು. ಜಹಗೀರದಾರರು ಹೆಸರಿಗೆ ಮಾತ್ರ ಸುಲ್ತಾನರ ಸೇವಕರೆಂದುಕೊಂಡು ಕಾರ್ಯತಃ ಸ್ವತಂತ್ರರಾಗಿ ವರ್ತಿಸುತ್ತಿದ್ದರು

ಮೇಲೆ ಸೂಚಿಸಿದ ರೀತಿಯಲ್ಲಿ ಉನ್ನತಿಗೆ ಬಂದು ವಂಶದಲ್ಲಿಯೂ ಸಂಪತ್ತಿನಲ್ಲಿಯೂ ಆಢ್ಯರೆನಿಸಿಕೊಂಡವರೊಳಗೆ ಅನೇಕರು ಆರಂಭದಲ್ಲಿ ಶಿವಾಜಿಯ ಉದ್ದೇಶ ಪ್ರಯತ್ನಗಳಿಗೆ ಪ್ರತಿಕೂಲರಾಗಿ ಅವನಿಗೆ ಅಡ್ಡಿ ಬರುತ್ತಿದ್ದರು. ಅವನ ಪ್ರಯತ್ನಗಳು ಸಫಲವಾಗುತ್ತ ಬಂದಹಾಗೆಲ್ಲ ಅವರು ಒಬ್ಬೊಬ್ಬರಾಗಿ ಅವನಿಗೆ ಅಭಿಮತರಾಗುತ್ತ ಬಂದರು. ಅವರ ಮಕ್ಕಳು ಮೊಮ್ಮಕ್ಕಳಾದರೋ ಯೌವನೋಚಿತವಾದ ಉತ್ಸಾಹದಿಂದ ತಾವಾಗಿಯೇ ಅವನ ಪಕ್ಷವನ್ನು ವಹಿಸುವರಾದರು.

ಶಿವಾಜಿಯು ಬಾಲ್ಯದಲ್ಲಿ ಮಾವಳಿಗಳೆಂಬ ಮಲೆಯರ ಜೊತೆಯಲ್ಲಿ ವಿಶೇಷವಾಗಿ ಓಡಾಡುತ್ತಿದ್ದನು. ಅವರು ನೋಡುವುದಕ್ಕೆ ಅಷ್ಟು ಲಕ್ಷಣ

ವಾಗಿಲ್ಲದಿದ್ದರೂ ಕಾರ್ಯದಲ್ಲಿ ಶಕ್ತರು, ಸಾಹಸಿಗಳು, ಹಿಡಿದ ಕಾರ್ಯವನ್ನು ಬಿಡುವರಲ್ಲ. ಅಲ್ಲದೆ, ವಿಶ್ವಾಸಕ್ಕೆ ಯೋಗ್ಯರು, ಸ್ವಾಮಿ ಕಾರ್ಯ ಪರಾಯಣರು, ಅಲ್ಪ ಸಂತುಷ್ಟರು ದಾದಾಜಿ ಕೋಂಡದೇವನು ಅವರ ಸುಗುಣಗಳಿಗೆ ಮೆಚ್ಚಿ ದಂಡಿನಲ್ಲಿ ಅವರನ್ನು ನಾಯಕರನ್ನಾಗಿಯೂ ಭಟರನ್ನಾಗಿಯೂ ನೇಮಿಸುತ್ತಿದ್ದನು. ಅವರು ಶಿವಾಜಿಗೆ ಚಿಕ್ಕಂದಿನಲ್ಲಿ ಒಡನಾಡಿಗಳಾಗಿದ್ದಂತೆಯೇ ಅವನು ದೊಡ್ಡವನಾದಮೇಲೆ ಅವನ ಆಪ್ತ ಭಟರೂ ಆದರು.

ಮೇಲೆ ಹೇಳಿದ ರೀತಿಯಲ್ಲಿ ರಾಜ್ಯ ಪರಿಪಾಲನೆಗೂ ರಕ್ಷಣೆಗೂ ಬೇಕಾದ ಬುದ್ಧಿಬಲವೂ ಬಾಹುಬಲವೂ ಶಿವಾಜಿ ಹುಟ್ಟುವುದಕ್ಕೆ ಮುಂಚೆಯೇ ಅಣಿಯಾಗಿದ್ದುವು. ಪರಂತು, ಈ ಎರಡು ಬಗೆಯ ಬಲಗಳೂ ಧರ್ಮಾಯತ್ತವಾಗಿಲ್ಲದ ಪಕ್ಷದಲ್ಲಿ ರಾಜ್ಯವು ಊರ್ಜಿತವಾಗಿರದು. ಸಾಮರ್ಥ್ಯವಾಗಲಿ ಸಂಪತ್ತಾಗಲಿ ಪರೋಪಕಾರಕ್ಕಲ್ಲದೆ ಕೇವಲ ಸ್ವಾರ್ಥಕ್ಕಲ್ಲವೆಂದು ಆಗಿನ ರಾಜರಿಗೂ ಅವರ ಅಧಿಕಾರಿಗಳಿಗೂ ಉಪದೇಶ ಮಾಡುತ್ತ ಕಾಲ ಕಾಲಕ್ಕೆ ಬುದ್ಧಿವಾದವನ್ನು ಹೇಳುತ್ತಿದ್ದ ಸಾಧುಗಳನೇಕರು ಆ ಕಾಲದಲ್ಲಿದ್ದರು

ಮುಹಮ್ಮದೀಯರು ಹಿಂದೂಸ್ಥಾನವನ್ನು ಪ್ರವೇಶಮಾಡಿದಂದಿನಿಂದ ಅವರಿಗೆ ರಾಜ್ಯಾಕಾಂಕ್ಷೆಯೊಂದೇ ಅಲ್ಲದೆ ಸ್ವಮತವನ್ನು ಪ್ರಚಾರಗೊಳಿಸಬೇಕೆಂಬ ದುರಾಗ್ರಹವೂ ಇದ್ದಿತು. ಈ ದುರಾಗ್ರಹದಿಂದ ಪೀಡಿತರಾಗಿ ಅನ್ಯ ಮತ ಸಹಿಷ್ಣುತೆಯಿಲ್ಲದೆ ಅವರು ಹಿಂದೂಗಳನ್ನು ಛಲದಿಂದಲೊ ಬಲದಿಂದಲೊ ಧರ್ಮಭ್ರಷ್ಟರನ್ನಾಗಿಮಾಡಿ ಅವರ ದೇವಾಲಯಗಳನ್ನೂ ತೀರ್ಥಕ್ಷೇತ್ರಗಳನ್ನೂ ಹಾಳುಮಾಡುತ್ತಿದ್ದರು. ಹಿಂದೂಗಳು ಸ್ವಧರ್ಮವನ್ನು ಬಿಡಲೊಲ್ಲದೆ ಅನೇಕ ಸಮಯಗಳಲ್ಲಿ ಪ್ರಾಣತ್ಯಾಗ ಮಾಡಿಕೊಳ್ಳುತ್ತಿದ್ದರು. ಶೋಚನೀಯವಾದ ಈ ಸ್ಥಿತಿಯಲ್ಲಿ ಹಲವರು ಭಗವದ್ಭಕ್ತರೂ ಸಾಧುಗಳೂ ಹಿಂದೂಗಳಾದ ಸಕಲ ವರ್ಣದವರಲ್ಲಿಯೂ ಐಕಮತ್ಯವನ್ನು ಕಲ್ಪಿಸಿ ಹಿಂದೂಗಳಿಗೂ ಮುಸಲ್ಮಾನರಿಗೂ ಇದ್ದ ವೈರವನ್ನು ಹೋಗಲಾಡಿಸುವ ಉದ್ದೇಶದಿಂದ ಧರ್ಮೋಪದೇಶವನ್ನು ಮಾಡತೊಡಗಿದರು.

ಶಿವಾಜಿಯು ಹುಟ್ಟುವುದಕ್ಕೆ ಬಹು ಕಾಲದ ಹಿಂದೆಯೇ ಉತ್ತರ ದೇಶದಲ್ಲಿ ರಾಮಾನಂದನು (ಕ್ರಿ. ಶ. ೧೩೦೦-೧೪೦೦) ಜಗತ್ತಿನಲ್ಲಿರುವ ಸಕಲ ಜೀವರಲ್ಲಿಯೂ ಶ್ರೀಹರಿಯು ಸಮಾನದೃಷ್ಟಿಯುಳ್ಳವನು, ಸರ್ವಪ್ರಾಣಿಗಳೂ ಅವನ ದಯೆಗೆ ಪಾತ್ರರು—ಇತ್ಯಾದಿ ಧರ್ಮಗಳನ್ನು ಬ್ರಾಹ್ಮಣಾದಿ ಸಕಲ ವರ್ಣದವರಿಗೂ ಬೋಧಿಸಿ ಧರ್ಮ ಪ್ರಚಾರ ಮಾಡುವುದಕ್ಕೆ ಹನ್ನೆರಡು ಮಂದಿ ಶಿಷ್ಯರನ್ನು ನೇಮಿಸಿದನು. ಅವರು ಸಂಸಾರ ಸುಖವನ್ನು ತ್ಯಜಿಸಿ ಭಿಕ್ಷಾಟನ ಮಾಡುತ್ತ ಚಂಡಾಲಾದಿ ಸಕಲ ವರ್ಣದವರಲ್ಲಿಯೂ ಹರಿ ಮಾಹಾತ್ಮ್ಯವನ್ನು ಪ್ರಚಾರಮಾಡಿದರು. ಅನಂತರ ಈ ವೈಷ್ಣವ ಧರ್ಮ ತರಂಗವು ವಂಗದೇಶಕ್ಕೆ ತಿರುಗಿ ವಂಗದೇಶದಿಂದ ಓಢ್ರದೇಶಕ್ಕೆ ಹಬ್ಬಿತು. ರಾಮಾನಂದನ ಶಿಷ್ಯನಾದ ಕಬೀರದಾಸನು (ಕ್ರಿ ಶ ೧೩೮೦-೧೪೨೦) ಆ ಎರಡು ದೇಶಗಳಲ್ಲಿಯೂ ಧರ್ಮೋಪದೇಶವನ್ನು ಮಾಡಿದನು. ರಾಮಾನಂದನು ಹಿಂದೂಗಳಿಗೂ ಕಬೀರನು ಮುಸಲ್ಮಾನರಿಗೂ ವೈಷ್ಣವ ಧರ್ಮವನ್ನು ಉಪದೇಶ ಮಾಡಿದರು. ಹಿಂದೂಗಳು ಯಾವನನ್ನು ಶ್ರೀರಾಮನೆನ್ನುವರೊ, ಮುಸಲ್ಮಾನರು ಯಾವನನ್ನು ಅಲ್ಲಾ ಎನ್ನುವರೊ, ಅವನೇ ಸರ್ವಾಂತರ್ಯಾಮಿ, ಅವನೇ ಸಕಲ ಸಂಪ್ರದಾಯದವರಲ್ಲಿಯೂ ಅವತರಿಸಿರುವನು; ಸಮಸ್ತ ಪ್ರಾಣಿಗಳಿಗೂ ಪ್ರಾಣದಾತನೂ ಅವನೇ; ಆದುದರಿಂದ ಜೀವ ಹತ್ಯವು ಕೂಡದು—ಎಂಬೀ ಧರ್ಮಗಳನ್ನು ಕಬೀರನು ಹಿಂದೂಗಳಿಗೂ ಮುಸಲ್ಮಾನರಿಗೂ ಘಂಟಾಘೋಷವಾಗಿ ಮೊರೆಯಿಟ್ಟು ಎರಡು ಮತದವರ ಶ್ರದ್ಧಾಭಕ್ತಿಗಳಿಗೂ ಪಾತ್ರನಾದನು. ಕಬೀರನ ತರುವಾಯ ನವದ್ವೀಪದಲ್ಲಿ ಚೈತನ್ಯನು (೧೪೮೬ ೧೫೨೭) ಜನ್ಮವೆತ್ತಿ ಗೀತೋಕ್ತ ಭಕ್ತಿ ಮಾರ್ಗವನ್ನು ಹಿಡಿದು ಸಕಲರಿಗೂ ಕೃಷ್ಣೋಪಾಸನೆಯನ್ನು ಬೋಧಿಸುತ್ತ ಶಕ್ತಿಪೂಜೆಯನ್ನು ನಿಷೇಧಿಸಿ, ಭಗವದ್ಭಕ್ತಿಯನ್ನೂ ಸರ್ವಭೂತ ಹಿತೈಷಿತೆಯನ್ನೂ ಬಲವಾಗಿ ಬೋಧಿಸಿದನು. ಅವನ ಉಪದೇಶ ಪ್ರಭಾವದಿಂದ ವಂಗದೇಶವೆಲ್ಲವೂ ಭಕ್ತಿವಶವಾಯಿತು. ಹೀಗೆಯೇ ಪಂಜಾಬಿನಲ್ಲಿ ನಾನಕ್ ಷಾಹನು (೧೪೬೯) ಮುಸಲ್ಮಾನರಿಗೂ ಹಿಂದೂಗಳಿಗೂ ಇದ್ದ ಜಾತಿ ವೈರವನ್ನು ಅಡಗಿಸುವ ಉದ್ದೇಶದಿಂದ, ಇಂದ್ರಿಯ ದಮನವೂ ಚಿತ್ತ ಸಂಯಮವೂ ಅತ್ಯಂತ ಶ್ರೇಯಸ್ಕರವಾದ ಧರ್ಮಗಳು; ಶುದ್ಧ ಚಿತ್ತದಿಂದ ಈಶ್ವ

ರೋಪಾಸನೆ ಮಾಡುವುದೇ ಧರ್ಮಾಚರಣೆ; ಸರ್ವರೂ ಸತ್ಕಾರ್ಯ ಸದಾಚಾರಗಳಿಂದ ಈಶ್ವರನ ದಯೆಗೆ ಪಾತ್ರರಾಗಬಹುದು; ಸಹೃದಯನೇ ಹಿಂದುವು, ಶುದ್ಧ ಚರಿತ್ರನೇ ಮುಸಲ್ಮಾನನು—ಎಂದು ಹಿಂದೂಗಳಿಗೂ ಮುಸಲ್ಮಾನರಿಗೂ ಬೋಧಿಸಿದನು. ಕೆಲವರು ಮುಸಲ್ಮಾನರು ಅವನ ಶಿಷ್ಯರಾಗಿ ಅವನಿಂದ ದೀಕ್ಷೆಯನ್ನು ಕೈಕೊಂಡರು

ಈ ವಿಧ ಧರ್ಮಪ್ರಚಾರವು ಅದೇ ಸಮಯದಲ್ಲಿ ಮಹಾರಾಷ್ಟ್ರ ದೇಶದಲ್ಲೂ ನಡೆಯುತ್ತಿದ್ದಿತು. ಹೀಗೆ ಬೋಧೆಯನ್ನು ಹೊಂದಿ ಪ್ರವರ್ತಿಸಿದವರೊಳಗೆ - ಉತ್ತರ ದೇಶದಲ್ಲಿ ಕ್ಷತ್ರಿಯ ವೈಶ್ಯರ ಸಂಖ್ಯೆಯೂ, ದಕ್ಷಿಣ ದೇಶದಲ್ಲಿ ಬ್ರಾಹ್ಮಣರ ಸಂಖ್ಯೆಯೂ ಅಧಿಕವು. ಪರಂತು, ಎಲ್ಲ ಜಾತಿಯವರೂ ಅದರಲ್ಲಿ ಭಾಗಿಗಳಾಗಿದ್ದರು. ಅಕ್ಕಸಾಲಿಗರು, ಚಿಪ್ಪಿಗರು, ಕುಂಬಾರರು, ಹೊಲೆಯರು, ಮಾದಿಗರು ಮೊದಲಾದವರೆಲ್ಲರೂ ಉಪದಿಷ್ಟರಾದರು. ಅವರೊಳಗೆ ಸ್ತ್ರೀಯರನೇಕರು ಪ್ರಸಿದ್ಧರಾಗಿದ್ದರು. ಮುಸಲ್ಮಾನರು ಆ ಕೂಟಕ್ಕೆ ಸೇರದಿರಲಿಲ್ಲ. ಹದಿಮೂರನೆಯ ಶತಮಾನದಲ್ಲಿ ದೇವಗಿರಿಯಲ್ಲಿ, ಯಾದವ ರಾಜರು ಆಳುತ್ತಿದ್ದ ಸಮಯದಲ್ಲಿ, ಜ್ಞಾನದೇವನೆಂಬವನು ಭಗವದ್ಗೀತೆಗೆ ಮಹಾರಾಷ್ಟ್ರ ಭಾಷೆಯಲ್ಲಿ ವ್ಯಾಖ್ಯಾನವನ್ನು ಬರೆದು ಧರ್ಮ ಪ್ರಚಾರ ಕಾರ್ಯವನ್ನು ಉಪಕ್ರಮಿಸಿದನು. ಚಂಗದೇವ, ಮುಕ್ತಾಬಾಯಿ, ವೇಣೂಬಾಯಿ, ಬೈರಾವ್ ಭಟ್ಟ, ಷೇಕ್ ಮಹಮ್ಮದ್, ಭಾನುದಾಸ ಪ್ರಭೃತಿಗಳು ದಾಸರಾಗಿ ದೀಕ್ಷೆಗೊಂಡು ಸಕಲರಿಗೂ ಧರ್ಮೋಪದೇಶವನ್ನು ಮಾಡಲಾರಂಭಿಸಿದರು. ಈ ರೀತಿಯಲ್ಲಿ ಮುಸಲ್ಮಾನರು ರಾಜ್ಯೋಪಾರ್ಜನೆಯಲ್ಲಿ ತೋರಿಸುತ್ತಿದ್ದ ಕ್ಷಾತ್ರ ಗುಣವನ್ನೇ ಸ್ವಮತ ಪ್ರಚಾರದಲ್ಲೂ ತೋರಿಸುತ್ತಿದ್ದ ಸಮಯದಲ್ಲಿ ಕ್ಲೇಶ ಸಹಿಷ್ಣುಗಳೂ ಕ್ಷಮಾವಂತರೂ ಜಿತಕ್ರೋಧರೂ ಆದ ಸಾಧುಗಳು ದಿಕ್ಕು ದಿಕ್ಕುಗಳಲ್ಲೂ ಧರ್ಮೋಪದೇಶವನ್ನು ಮಾಡುತ್ತ ಭಿನ್ನ ಜಾತಿಗಳೂ ಭಿನ್ನ ಭಾಷಿಗಳೂ ಭಿನ್ನ ಮತಾವಲಂಬಿಗಳೂ ಆದ ಹಿಂದೂಗಳಲ್ಲೂ ಮುಸಲ್ಮಾನರಲ್ಲೂ ಭಗವದ್ಭಕ್ತಿಯನ್ನೂ ಪರಸ್ಪರ ಪ್ರೇಮಭಾವವನ್ನೂ ಹುಟ್ಟಿಸುವ ನಿಮಿತ್ತವಾಗಿ ಪ್ರಯಾಸಪಡುತ್ತಿದ್ದರು. ಹೀಗೆ ಲೋಕ ಹಿತಾರ್ಪಿತ ಪ್ರಾಣರಾಗಿ ಶಿವಾಜಿಯ ಕಾಲದಲ್ಲಿ ಅನೇಕ ಸಾಧುಗಳಿದ್ದರು. ಅವ

ರೊಳಗೆ ರಾಮದಾಸಸ್ವಾಮಿ, ತುಕಾರಾಮ ಬಾವ, ವಾಮನ ಪಂಡಿತ, ಕೇಶವಸ್ವಾಮಿ—ಇವರೇ ಮುಖ್ಯರು. ಪರ ಹಿತವೂ ಈಶ್ವರ ಪ್ರೀತಿಯೂ ಅವರ ಜೀವನೋದ್ದೇಶಗಳು; ಆತ್ಮಸುಖವಲ್ಲ. ಅವರ ಉಪದೇಶ ಪ್ರಭಾವ ದಿಂದ ಬ್ರಾಹ್ಮಣಾದಿ ಸಕಲ ವರ್ಣದವರಲ್ಲೂ ದೇವಭಕ್ತಿ, ಕರ್ತವ್ಯ ನಿಷ್ಠೆ, ಸ್ವಧರ್ಮ ಪ್ರೀತಿ—ಇವೇ ಮೊದಲಾದ ಸುಗುಣಗಳು ವೃದ್ಧಿಗೊಂಡುವು. ಐಕ ಮತ್ಯ, ಸ್ವಾರ್ಥ ತ್ಯಾಗ, ಕರ್ತವ್ಯ ನಿಷ್ಠೆ—ಇವು ರಾಮದಾಸನ ಮೂಲ ಮಂತ್ರಗಳು. ಗುರುವಿನ ಮಂತ್ರೋಪದೇಶ ಬಲದಿಂದ ಶಿವಾಜಿಯು "ರಾಜ ಸುಖ ಸನ್ನಿಪಾತ ನಿದ್ರೆ"ಯಿಂದ ಪೀಡಿತನಾಗದೆ. ತಾನು ರಾಮದಾಸನ ಭಂಟನೆಂದು ಭಾವಿಸುತ್ತ, ರಾಜಕಾರ್ಯ ತತ್ಪರನಾಗಿದ್ದನು ಸರ್ವ ಸುಖ ತ್ಯಾಗ ಸೂಚಕವಾದ ಕಾಷಾಯ ವಸ್ತ್ರವು ಅವನ ಸಂಸ್ಥಾನಕ್ಕೆ ರಾಜ ಚಿಹ್ನೆಯಾಗಿದ್ದಿತು. ಅವನ ಸಹಯೋಗಿಗಳ ಪ್ರಭು ಪರಾಯಣತೆಯೂ ಧೈರ್ಯೋತ್ಸಾಹಗಳೂ ಪೂರ್ವ ಸೂಚಿತ ಸಂಸ್ಕಾರ ಫಲವಾಗಿದ್ದುವು.

ಈ ವಿಧದಲ್ಲಿ ಬಹು ಕಾಲ ಪರಿಶ್ರಮದಿಂದ ದೇಶದಲ್ಲಿ ಉತ್ಪನ್ನವಾಗಿ ಕೈಗೆ ಬಂದ ಬುದ್ಧಿಬಲ ಬಾಹುಬಲ ಧರ್ಮಬಲಗಳನ್ನೂ ಜನ ಜನಿತವಾದ ಸ್ವಾತಂತ್ರ್ಯ ಪ್ರೇಮವನ್ನೂ ವಿನಿಯೋಗಿಸುವುದರಲ್ಲಿ ಶಿವಾಜಿಯ ಸುಗುಣ ಗಳು ಕಾರ್ಯೋನ್ಮುಖವಾದುವು; ಅವನ ಪ್ರತಿಭೆಯು ಪ್ರಕಾಶಕ್ಕೆ ಬಂದಿತು.

ಆದರೂ ತನ್ನ ಇಷ್ಟ ಸಿದ್ಧಿಗೆ ದೈವಬಲವೇ ಬಲವೆಂಬ ದೃಢ ವಿಶ್ವಾಸ ದಿಂದ ತನಗೆ ಪ್ರಾಪ್ತವಾಗುತ್ತಿದ್ದ ಸಂಕಟ ಕಾಲದಲ್ಲೆಲ್ಲ ತನ್ನ ಕುಲದೇವತೆ ಭವಾನಿಯ ಆದೇಶವನ್ನು ಪಡೆಯದೆ ಶಿವಾಜಿಯು ಅಡಿಯಿಡುತ್ತಿರಲಿಲ್ಲ. ಅಂತಹ ಸಮಯಗಳಲ್ಲಿ ಭವಾನಿಯು ಅವನ ಮೈಯ ಮೇಲೆ ಬಂದು ಇತಿ ಕರ್ತವ್ಯವನ್ನು ಹೇಳುತ್ತಿದ್ದಳು. ಶಿವಾಜಿಯ ಮುತ್ಸದ್ದಿಗಳು ಅವನು ಆವೇಶದಲ್ಲಿದ್ದಾಗ ಆಡಿದ ಮಾತುಗಳನ್ನು ಬರೆದು ಅವನು ಎಚ್ಚರವಾಗು ತ್ತಲೆ ಓದಿ ಹೇಳುತ್ತಿದ್ದರು. ಆ ಪ್ರಕಾರವೇ ಅವನು ನಡೆಯುತ್ತಿದ್ದನು. ಹೀಗೆ ತಾನು ಮಾಡುವ ಕಾರ್ಯವು ದೇವತಾ ಕಾರ್ಯವೆಂದೂ ಅದನ್ನು ತಾನು ದೇವತಾ ಪ್ರೇರಣೆಯಿಂದಲೂ ದೇವತಾ ಬಲದಿಂದಲೂ ಮಾಡು ತ್ತಿದ್ದೆನೆಂದೂ ಅವನು ನಂಬಿದ್ದನು.

———

## ನಾಲ್ಕನೆಯ ಪ್ರಕರಣ

---

# ಶಿವಾಜಿಯ ಜನ ವಶೀಕರಣ ಶಕ್ತಿ, ದೂರಾಲೋಚನೆ, ಆತ್ಮ ರಕ್ಷಣೆ.

ದಾದಾಜಿಯ ಮರಣಾನಂತರ ಪಿತ್ರಾರ್ಜಿತವಾಗಿ ಬಂದ ಜಹಗೀರಿಯ ಯಾಜಮಾನ್ಯವು ಸಂಪೂರ್ಣವಾಗಿ ಶಿವಾಜಿಯ ಮೇಲೆ ಬಿದ್ದಿತು. ಅಂದಿನಿಂದ ಅವನ ಕಾರ್ಯಕ್ಷೇತ್ರವು ವಿಶಾಲವಾಯಿತು. ಅಲ್ಲದೆ, ಅವನು ಸಂಪೂರ್ಣ ಸ್ವಾತಂತ್ರ್ಯವನ್ನು ವಹಿಸಿ ಎಲ್ಲ ಕಾರ್ಯಗಳನ್ನೂ ತಾನೇ ಮಾಡಲಾರಂಭಿಸಿದನು ದೇಶವು ಪರಾಧೀನವಾಗಿದ್ದಿತು. ಈ ಸ್ಥಿತಿಯಲ್ಲಿ ಯಾವ ಮಾರ್ಗವನ್ನು ಹಿಡಿದು ಹೋದರೆ ತಾನು ಕೃತಕಾರ್ಯನಾಗಬಹುದು, ಯಾವ ಮಾರ್ಗದಲ್ಲಿ ತನ್ನ ಉದ್ದೇಶಕ್ಕೆ ವಿಘ್ನಗಳುಂಟಾಗಬಹುದು, ಇತ್ಯಾದಿ ಸಂಗತಿಗಳನ್ನು ಕುರಿತು ಅವನು ಸರ್ವದಾ ಹಂಬಲಿಸಿ ಮರುಗುತ್ತಿದ್ದನು.

ದಾದಾಜಿ ಸತ್ತ ತರುವಾಯ ಜಹಗೀರಿಯಿಂದ ಬರಬೇಕಾಗಿದ್ದ ಹಣಕಾಸುಗಳನ್ನು ತೆಗೆದುಕೊಂಡು ಬರುವ ನಿಮಿತ್ತವಾಗಿ ಷಾಹಜಿ ಆಳುಗಳನ್ನು ಕಳುಹಿಸಿದನು. ಆದರೆ, ಕೂಡಿಟ್ಟ ಹಣವನ್ನು ಕೈಯಿಂದ ಬಿಡುವುದಕ್ಕೆ ಅದು ಸಮಯವಲ್ಲವೆಂದೆಣಿಸಿ—ದೇಶವು ದರಿದ್ರಾವಸ್ಥೆಯಲ್ಲಿರುವುದು, ಕಂದಾಯ ಮೊದಲಾದ ರಾಜಕೀಯ ವಿಷಯಗಳಲ್ಲಿ ಮಾಡಿದ ತಿದ್ದುಪಾಟುಗಳಿಂದ ವೆಚ್ಚವು ಹೆಚ್ಚಿರುವುದು, ಈ ಅವಸ್ಥೆಯಲ್ಲಿ ಹಣವನ್ನು ಕಳುಹಿಸಿಕೊಡುವುದಕ್ಕಾಗುವುದಿಲ್ಲ, ಎಂದು ಹೇಳಿ ಶಿವಾಜಿಯು ದಾದಾಜಿ ಸತ್ತ ವರ್ತಮಾನವನ್ನು ಮಾತ್ರ ತಂದೆಗೆ ಬರೆಯಿಸಿ ಕಳುಹಿಸಿದನು.

ಶಿವಾಜಿಯು ಕೇವಲ ಯೋಚನೆಯಲ್ಲೇ ಕಾಲವನ್ನು ಕಳೆದವನಲ್ಲ; ಮಾಡಿದ ಯೋಚನೆಯನ್ನು ಕಾರ್ಯಕ್ಕೆ ತರುವ ಪ್ರಯತ್ನಗಳನ್ನೂ ಮಾಡಿದನು. ಅವನು ಎಲ್ಲ ಹಿಂದೂಗಳ ಹೃದಯದಲ್ಲೂ ಸ್ವಧರ್ಮವನ್ನೂ ಸ್ವದೇಶವನ್ನೂ ರಕ್ಷಿಸಬೇಕೆಂಬ ಇಚ್ಛೆಯನ್ನು ಹುಟ್ಟಿಸುವ ಸಲುವಾಗಿ ದೇಶದ

ದುರವಸ್ಥೆಯನ್ನು ಕುರಿತು ಚೆನ್ನಾಗಿ ಯೋಚಿಸಿರೆಂದು ಎಲ್ಲರಿಗೂ ಸಾರಿದನು. ಇಂತಹ ಶೋಚನೀಯ ಸ್ಥಿತಿಯಲ್ಲಿ ಕೈಜೋಡಿಸಿಕೊಂಡು ನಿಶ್ಚೇಷ್ಟರಾಗಿರುವುದರಿಂದ ದುಃಖವು ಘನೀಭೂತವಾಗುವುದು; ಆದುದರಿಂದ ಹೆಂಡತಿ ಮಕ್ಕಳ ಮೇಲೂ ಜನ್ಮಭೂಮಿಯ ಮೇಲೂ ದೃಷ್ಟಿಯಿಟ್ಟು ದೇಶಕ್ಕೆ ಬಂದ ವಿಪತ್ತನ್ನು ತೊಲಗಿಸುವುದಕ್ಕೆ ಯತ್ನಿಸಿರೆಂದು ಎಲ್ಲರನ್ನೂ ಪ್ರೋತ್ಸಾಹಪಡಿಸಿದನು.

ಮೊದಲು ಮೊದಲು ಜಹಗೀರಿಯ ಕೆಲವು ಪ್ರದೇಶಗಳ ಅಧಿಕಾರಿಗಳು ಶಿವಾಜಿಯ ಆಜ್ಞೆಗೊಳಗಾಗಲಿಲ್ಲ. ಆದರೆ ಸ್ವದೇಶದ ಅಭ್ಯುದಯವನ್ನು ಸಾಧಿಸುವುದರಲ್ಲಿ ಅವನಿಗಿದ್ದ ಇಚ್ಛೆಯನ್ನೂ ಯವನರ ಕೊಬ್ಬನ್ನು ಮುರಿವುದರಲ್ಲಿ ಅವನಿಗಿದ್ದ ಹಾರಯ್ಕೆಯನ್ನೂ ಕಂಡು ವೀರ ರಸ ಪೂರ್ಣವಾದ ಅವನ ವಾಕ್ಯನ್ನು ಕೇಳಿ ಒಬ್ಬೊಬ್ಬರಾಗಿ ಅವನ ವಶವಾಗುತ್ತ ಬಂದರು. ಅವರಲ್ಲಿ ಚಾಕಣ ದುರ್ಗಕ್ಕೆ ನಾಯಕನಾದ ಫರಂಗಜಿ ನರಸಾಲನೆಂಬವನೂ, ಸೂಪವೆಂಬ ಪ್ರದೇಶಕ್ಕೆ ವಿಚಾರಣಕರ್ತನಾದ ಬಾಜಿ ಮೋಹಿತನೆಂಬವನೂ ಮುಖ್ಯರಾದವರು ಈ ಎರಡನೆಯವನು ಶಿವಾಜಿಯ ಬಲತಾಯಿಯಾದ ತುಕ್ಕಾಬಾಯಿಯ ಒಡಹುಟ್ಟಿದವನು. ೧೬೪೮ರಲ್ಲಿ ಫರಂಗಜಿಯು ಚಾಕಣ ದುರ್ಗವನ್ನು ಶಿವಾಜಿಗೆ ಒಪ್ಪಿಸಿದನು. ಶಿವಾಜಿಯು ಅವನ ನಡತೆಗೆ ಮೆಚ್ಚಿ ಅವನನ್ನೇ ದುರ್ಗಕ್ಕೆ ನಾಯಕನನ್ನಾಗಿಟ್ಟನು; ಚಾಕಣ ದುರ್ಗವು ಕೈಸೇರಿದ ತರುವಾಯ ಸೂಪವೆಂಬ ಪ್ರದೇಶವನ್ನು ಉಪಾಯದಿಂದ ತನ್ನಧೀನಮಾಡಿಕೊಂಡನು. ಆದರೆ ಬಾಜಿಮೋಹಿತನು ಜಹಗೀರಿಯ ಉದ್ಯೋಗದಲ್ಲಿದ್ದವನಾದರೂ ಶಿವಾಜಿಯ ಕೈಯ ಕೆಳಗಿರುವುದಕ್ಕೆ ಎಷ್ಟು ಬಗೆಯಲ್ಲಿ ಹೇಳಿದರೂ ಒಪ್ಪಲಿಲ್ಲ; ಆದುದರಿಂದ ರಾತ್ರಿಯ ವೇಳೆಯಲ್ಲಿ ಅವನನ್ನು ಸೆರೆಹಿಡಿದು ಯಥೋಚಿತ ಗೌರವದಿಂದ ಷಾಹಜಿಯ ಬಳಿಗೆ ಕಳುಹಿಸಿಬಿಟ್ಟನು. ಅಂದಿನಿಂದ ಶಿವಾಜಿ ತಾನೇ ಉದ್ಯೋಗಸ್ಥರನ್ನು ನೇಮಿಸುವುದಕ್ಕೆ ಮೊದಲ್ಮಾಡಿದನು. ಅಲ್ಲದೆ, ಸಾಹಸಿಗಳಾಗಿಯೂ ಆಪ್ತರಾಗಿಯೂ ಇದ್ದವರಿಗೆಲ್ಲ ಬಿರುದುಗಳನ್ನು ಕೊಡಲಾರಂಭಿಸಿದನು. ಯಾವ ನಾಡು ತನ್ನ ಕೈಸೇರಿದರೂ ಮೊತ್ತಮೊದಲು ಅದರ ಪಾಲನೆಯ ವಿಷಯವನ್ನು ಪರ್ಯಾಲೋಚಿಸುತ್ತಿದ್ದನು.

ಬಾಜಿಮೋಹಿತನಿಗಾದ ಪಾಡನ್ನು ಕೇಳಿ ಬಾರಾಮತಿ, ಇಂದಾಪುರ ಮೊದಲಾದ ಪ್ರದೇಶಗಳ ಅಧಿಕಾರಿಗಳು ಸದ್ದುಮಾಡದೆ ಶಿವಾಜಿಗೊಳಗಾಗಿ ಕಂದಾಯುಗಳನ್ನು ಸಲಿಸುತ್ತ ಬಂದರು.

ಶಿವಾಜಿಯ ಅದ್ಭುತ ಕಾರ್ಯಗಳನ್ನು ಕೇಳಿ ತಾನಾಜಿಯೆಂಬ ವೀರನೊಬ್ಬನು ಅವನ ಬಳಿಗೆ ಬಂದನು ಆಗ ಕೊಂಡನವೆಂಬ ದುರ್ಗವು ಒಬ್ಬ ಮುಸಲ್ಮಾನ ಕಿಲ್ಲೇದಾರನ ವಶದಲ್ಲಿದ್ದಿತು. ಅಪ್ಪಣೆಯಾದರೆ ಈ ದುರ್ಗವನ್ನು ತಮ್ಮ ಕೈಸೇರಿಸುವೆನೆಂದು ತಾನಾಜಿ ಶಿವಾಜಿಗೆ ಹೇಳಲು ಅದಕ್ಕೆ ಶಿವಾಜಿ ಒಪ್ಪಿದನು. ಒಂದು ದಿವಸ ರಾತ್ರಿ ಎಲ್ಲರೂ ನಿದ್ದೆ ಹೋಗುತ್ತಿದ್ದ ಸಮಯದಲ್ಲಿ ತಾನಾಜಿ ಸೇನಾ ಸಮೇತನಾಗಿ ಹೋಗಿ ಆ ಕೋಟೆಗೆ ಮುತ್ತಿಗೆ ಹಾಕಿದನು ಯುದ್ಧ ಮಾಡುವುದು ಅಸಾಧ್ಯವೆಂದು ಮುಸಲ್ಮಾನ ಕಿಲ್ಲೇದಾರನು ಕೋಟೆಯನ್ನು ಒಪ್ಪಿಸಿಬಿಟ್ಟನು. ಶಿವಾಜಿ ಆ ದುರ್ಗಕ್ಕೆ ಸಿಂಹಗಡವೆಂದು ಹೆಸರಿಟ್ಟು ತಾನಾಜಿಯನ್ನೇ ಅದಕ್ಕೆ ನಾಯಕನನ್ನಾಗಿ ನೇಮಿಸಿದನು. ಅಂತು, ಮಾವಳ ಪ್ರಾಂತವೆಲ್ಲವನ್ನೂ ತನ್ನ ಅಧಿಕಾರಕ್ಕೊಳಪಡಿಸಿಕೊಂಡು ದೃಢ ಕಾಯರೂ ಕಷ್ಟಸಹಿಷ್ಣುಗಳೂ ಆದ ಮಾವಳಿಗಳನ್ನು ಅವರಲ್ಲಿ ಪ್ರಮುಖರಾದವರ ಕೈಯ ಕೆಳಗಿಟ್ಟನು.

ಶಿವಾಜಿಯು ಮುಸಲ್ಮಾನರಿಗೂ ತನಗೂ ಯುದ್ಧವು ಘಟಿಸಬಹುದೆಂದು ಯೋಚಿಸಿ ದುರ್ಗಗಳಲ್ಲೆಲ್ಲ ಧಾನ್ಯಾದಿ ಸಮಸ್ತ ಪದಾರ್ಥಗಳನ್ನೂ ಯುದ್ಧೋಪಯುಕ್ತವಾದ ಆಯುಧಗಳನ್ನೂ ಕೂಡಿಸಿಟ್ಟನು; ಶಿಥಿಲವಾದ ಕೋಟೆಗಳನ್ನು ಸರಿಮಾಡಿಸಿ ಬಲಪಡಿಸಿದನು; ಎಡೆಬಿಡದೆ ಕಾವಲಿರುವಂತೆ ಸೈನಿಕರಿಗೆ ಆಜ್ಞೆಮಾಡಿದನು; ಅಷ್ಟೇ ಅಲ್ಲದೆ, ಮೂರು ಸಾವಿರ ಸವಾರರನ್ನೂ ಹತ್ತು ಸಾವಿರ ಕಾಲಾಳುಗಳನ್ನೂ ಸೇರಿಸಿದನು. ಈ ರೀತಿಯಾಗಿ ದುರ್ಗಗಳ ರಕ್ಷಣೆಗೆ ಬೇಕಾದ ಉಪಾಯುಗಳನ್ನು ಮಾಡಿ ಶಿವಾಜಿಯು ತಾಯಿಯನ್ನು ನೋಡುವ ನಿಮಿತ್ತವಾಗಿ ಪುಣೆಗೆ ಹೋದನು.

ಪುಣೆಗೆ ಬರುತ್ತಲೆ ಪುರಂದರ ದುರ್ಗದ ನಾಯಕನಾದ ನೀಲಕಂಠರಾಯನು ಮೃತನಾದನೆಂದು ಶಿವಾಜಿ ಕೇಳಿದನು. ನೀಲಕಂಠರಾಯನ ಮರಣಾನಂತರ ಅವನ ಮಕ್ಕಳಿಗೆ ದುರ್ಗಾಧಿಕಾರದ ವಿಷಯದಲ್ಲಿ ವಿವಾ

ದವು ಹುಟ್ಟಿತು. ಶಿವಾಜಿ ಅವರಿಗೆ ಮಧ್ಯಸ್ಥನಾಗಿ ನಿಂತನು. ದುರ್ಗವು ಬಲವಾಗಿದ್ದಿತು. ಹೇಗಿದ್ದರೂ ನೀಲಕಂಠರಾಯನ ಮಕ್ಕಳು ದುರ್ಗವನ್ನು ಅನ್ಯರ ಪಾಲು ಮಾಡತಕ್ಕವರೆಂದೆಣಿಸಿ ಶಿವಾಜಿ ಅದನ್ನು ತನ್ನ ವಶಮಾಡಿ ಕೊಂಡನು. ಜಗಳವಾಡುತ್ತಿದ್ದ ಅಣ್ಣ ತಮ್ಮಂದಿರಿಗೆ ಮಾನ್ಯಗಳನ್ನೂ ದೊಡ್ಡ ಅಧಿಕಾರಗಳನ್ನೂ ಕೊಟ್ಟು, ಮೋರೋಪಂತ ಪಿಂಗಳೆಯೆಂಬವನ ಕೈಯಲ್ಲಿ ಆ ದುರ್ಗದ ಆಧಿಪತ್ಯವನ್ನಿಟ್ಟನು.

ದಾದಾಜಿ ಸತ್ತ ಕೆಲವು ತಿಂಗಳೊಳಗೆ ಶಿವಾಜಿ ಚಾಕಣ ದುರ್ಗದಿಂದ ನೀರಾರವೆಂಬ ಪ್ರದೇಶದ ವರೆಗಿರುವ ನಾಡಿಗೆ ರಕ್ತಪಾತಕ್ಕೆಡೆಗೊಡದೆ ಒಡೆಯನಾದನು.

ತೋರಣ ದುರ್ಗವನ್ನು ಸಾಧಿಸಿದಾಗ ಶಿವಾಜಿಯು ಹತ್ತೊಂಬತ್ತು ವರ್ಷದ ಹುಡುಗನಾಗಿದ್ದನು. ಅಂದಿಗೆ ದಕ್ಷಿಣದ ಮುಸಲ್ಮಾನರು ಪಶ್ಚಿಮ ಮಹಾರಾಷ್ಟ್ರವನ್ನು ವಾಸ್ತವವಾಗಿ ಜಯಿಸಿದ್ದರೆಂದು ಹೇಳಲಾಗು ವುದಿಲ್ಲ. ಬೈಲು ಸೀಮೆಗಳನ್ನುಮಾತ್ರ ಗೆದ್ದುಕೊಂಡು ಮಲೆನಾಡುಗಳನ್ನು ಆಗಾಗ ದಂಡೆತ್ತಿಹೋಗಿ ಬಾಧಿಸುತ್ತಿದ್ದರು. ದುರ್ಗಗಳಿಗೆ ತಕ್ಕಷ್ಟು ಕಾವಲಿರಲಿಲ್ಲ. ಕೇಳುವರಿಲ್ಲದೆ ಹೋಗಲು ಕಿಲ್ಲೇದಾರರು ಕಾದಾಡುತ್ತ, ಯುದ್ಧಗಳನ್ನು ಮಾಡಿ ಅನ್ಯರ ಗ್ರಾಮ ಭೂಮಿಗಳನ್ನು ಆಕ್ರಮಿಸುತ್ತ, ತಮ್ಮ ಮನಸ್ಸು ಬಂದಂತೆಲ್ಲ ನಡೆಯುತ್ತಿದ್ದರು. ಮೊಗಲರೂ ಬಿಜಾಪುರ ಸಂಸ್ಥಾನದವರೂ ಸೇರಿ ಅಹಮದ್ನಗರ ಸಂಸ್ಥಾನವನ್ನು ಒಡೆದು ಹಂಚಿ ಕೊಂಡು ಆ ಸಂಸ್ಥಾನದ ಹುಟ್ಟುಗೆಡಿಸಿದರು. ಅಲ್ಲದೆ, ಅವರು ಮಹಾರಾಷ್ಟ್ರದ ಗಡಿಯ ಸೀಮೆಯಲ್ಲಿಯೇ ಎಡೆ ಬಿಡದೆ ಹೊಡೆದಾಡುತ್ತಿದ್ದರು. ಈ ದುರ ವಸ್ಥೆಯಲ್ಲಿ ಶಿವಾಜಿ ತನ್ನ ಪಿತ್ರಾರ್ಜಿತ ಗ್ರಾಮ ಭೂಮಿಗಳ ಯಾಜ ಮಾನ್ಯವನ್ನು ವಹಿಸಿ ಅವುಗಳ ರಕ್ಷಣಾರ್ಥವಾಗಿ ಹಳೆಯ ದುರ್ಗಗಳನ್ನು ಸರಿಮಾಡಿಸಿ ಹೊಸವನ್ನು ಕಟ್ಟಿಸಹೊರಟನು. ಪುಣೆಯ ಸಮೀಪದಲ್ಲಿದ್ದ ದುರ್ಗಾಧಿಕಾರಿಗಳೂ ಮಾವಳ ಪ್ರಾಂತದಲ್ಲಿದ್ದ ಬಿಜಾಪುರ ಸಂಸ್ಥಾನದ ಕಡೆಯವರಾದ ಕೆಲವರು ಅಧಿಕಾರಿಗಳೂ ಅವನಿಗೆ ವಿರೋಧಿಗಳಾಗಿದ್ದರು. ಅವರೆಲ್ಲರನ್ನೂ ನಯ ಭಯಗಳಿಂದ ಒಂದುಮಾಡಿ ತನ್ನ ವಶಮಾಡಿ

ಕೊಳ್ಳಲು ಪ್ರಯಾಸಪಟ್ಟನು. ಅಂತು, ಅವನು ೧೬೪೬ರಲ್ಲಿ ತೋರಣ ದುರ್ಗವನ್ನು ವಶಮಾಡಿಕೊಂಡುದು ಮೊದಲ್ಗೊಂಡು ಆರು ವರ್ಷಗಳ ಕಾಲ ಆತ್ಮ ರಕ್ಷಣಾರ್ಥಕ್ಕೂ ತನ್ನ ಸಮೀಪವರ್ತಿಗಳೂ, ಆದರೆ ಕಲಹ ಪ್ರಿಯರೂ, ಆಗಿದ್ದ ಮಹಾರಾಷ್ಟ್ರರನ್ನು ಒಟ್ಟುಗೂಡಿಸುವುದಕ್ಕೂ ಪ್ರಯತ್ನ ಮಾಡುತ್ತಿದ್ದನು. ಅಷ್ಟೇ ಹೊರತು ಅವರಂಗಬಾದಿನಲ್ಲಿ ನೆಲಸಿದ್ದ ಮೊಗಲರ ಮೇಲಾಗಲಿ ಬಿಜಾಪುರದ ಸೇನಾಧಿಪತಿಗಳ ಮೇಲಾಗಲಿ ಪ್ರಕೃತ ಸ್ಥಿತಿಯಲ್ಲಿ ಕೈಮಾಡಬೇಕೆಂಬ ಯೋಚನೆಯು ಅವನಿಗಿರಲಿಲ್ಲ. ಮೊಗಲರು ಪಶ್ಚಿಮ ಮಹಾರಾಷ್ಟ್ರವನ್ನು ಕಟ್ಟಿಕೊಳ್ಳುವುದಕ್ಕೆ ಆಸೆಪಡದೆ ಉತ್ತರ ಹಿಂದೂಸ್ಥಾನವನ್ನು ಅತಿಕ್ರಮಿಸದೆಯೂ ಬಿಜಾಪುರ ಸಂಸ್ಥಾನದವರು ಕರ್ಣಾಟಕದ ಗಡಿಯನ್ನು ಮೀರದೆಯೂ ಇದ್ದಿದ್ದ ಪಕ್ಷದಲ್ಲಿ ಶಿವಾಜಿ ಅವರಿಬ್ಬರ ಗೋಜಿಗೂ ಹೋಗುತ್ತಿರಲಿಲ್ಲ; ಅವರ ಎಲ್ಲೆಯನ್ನೂ ಮುಟ್ಟುತ್ತಿರಲಿಲ್ಲ.

---

## ಐದನೆಯ ಪ್ರಕರಣ

---

# ಶಿವಾಜಿಗೂ ಬಿಜಾಪುರದ ಸುಲ್ತಾನನಿಗೂ ಯುದ್ಧಾರಂಭ.

ಶಿವಾಜಿಯು ಆರಂಭದಲ್ಲಿ ತನ್ನ ಜಹಗೀರಿಯನ್ನು ಭದ್ರಪಡಿಸಿಕೊಳ್ಳುವ ಯೋಚನೆ ಎಷ್ಟೋ ಅಷ್ಟರಲ್ಲಿಯೇ ಇದ್ದನು. ಆದರೆ ಜಹಗೀರಿಯ ಸಮೀಪದಲ್ಲಿದ್ದ ದುರ್ಗಗಳು ನವ ನಾಯಕರ ಪಾಳೆಯಗಳಾಗಿರುವ ವರೆಗೂ ಜಹಗೀರಿಗೆ ಕ್ಷೇಮವಿಲ್ಲವೆಂದೆಣಿಸಿ ಆ ದುರ್ಗಾಧಿಕಾರಿಗಳ ದೆಸೆಯಿಂದ ಜಹಗೀರಿಗೆ ಬಾಧೆಯುಂಟಾಗದಂತೆ ಅವರನ್ನು ನಯಭಯಗಳಿಂದ ತನ್ನ ಕೈಯ ಕೆಳಗೆ ತೆಗೆದುಕೊಂಡನು. ಅವನು ತೋರಣ ದುರ್ಗವನ್ನು ಹಿಡಿದುದು ಈ ಉದ್ದೇಶದಿಂದಲೆ. ಅದಕ್ಕೆ ಬಿಜಾಪುರ ಸಂಸ್ಥಾನದವರು ಆಕ್ಷೇಪಿಸಲು, ದುರ್ಗವು ಅನಾಯಕವಾಗಿದ್ದುದರಿಂದ ತನ್ನ ಕ್ಷೇಮಾರ್ಥವಾಗಿಯೂ ಸಂಸ್ಥಾನದ ಹಿತಾರ್ಥವಾಗಿಯೂ ತಾನು ಆ ಕೆಲಸವನ್ನು ಮಾಡಬೇಕಾಯಿತೆಂದು ಹೇಳಿ ಅವರನ್ನು ಸಮಾಧಾನಪಡಿಸಿದನು. ಅವನು ಆ ಉದ್ದೇಶದಿಂದಲೇ ರಾಜಗಡವನ್ನು ಕಟ್ಟಿಸಿದನು, ಸಿಂಹಗಡವನ್ನು ಕೊಂಡನು, ಪುರಂದರ ದುರ್ಗವನ್ನು ವಶಮಾಡಿಕೊಂಡನು. ಈ ದುರ್ಗಗಳಿಂದ ಅವನು ಜಹಗೀರಿಯ ದಕ್ಷಿಣದ ಕಡೆ ದಿಗ್ಬಂಧನ ಮಾಡಿದನು. ಕ್ರಿ. ಶ. ೧೬೪೭ಕ್ಕೆ ಶಿವಾಜಿಗೆ ಇಪ್ಪತ್ತು ವರ್ಷ ವಯಸ್ಸಾಯಿತು. ಬಿಜಾಪುರ ಸಂಸ್ಥಾನದವರು ತನ್ನ ಆಡಳಿತಕ್ಕೆ ಮುನಿದು ತನ್ನ ಮೇಲೆ ದಂಡೆತ್ತಿ ಬರಬಹುದೆಂದು ಯೋಚಿಸಿ ಅವನು ಆತ್ಮರಕ್ಷಣೆಗಾಗಿ ಬೇಕಾದ ಪರಿಕರಗಳನ್ನು ಹವಣಿಸಿಕೊಳ್ಳುತ್ತ ಎಚ್ಚರವಾಗಿದ್ದನು. ಮೊದಲು ಸಾಮಾನ್ಯನಾಗಿದ್ದು ಬುದ್ಧಿಬಲದಿಂದ ಅಲ್ಪ ವಯಸ್ಸಿನಲ್ಲಿಯೇ ಉನ್ನತಿಗೆ ಬಂದು ಗಣ್ಯನಾಗಿ ಅವನು ಪರಾಕ್ರಮಶಾಲಿಯಾದ ಮೊಗಲ್ ಚಕ್ರವರ್ತಿಗೆ ಸಮದಂಡಿಯಾಗಿ ನಿಂತನು. ಅವನ ಸೂಕ್ಷ್ಮ ಬುದ್ಧಿಯನ್ನೂ ದೂರ ದೃಷ್ಟಿಯನ್ನೂ ನೋಡಿ ನೆರೆಬಂದವರೂ ಆಶ್ಚರ್ಯಪಡುತ್ತಿದ್ದರು; ಅವನ ಯುದ್ಧ ನಿಪುಣತೆಯನ್ನು

ಕಂಡು ಯುದ್ಧ ವಿದ್ಯಾ ವಿಶಾರದರೂ ಬೆರಗಾಗುತ್ತಿದ್ದರು; ಅವನ ಕ್ಷಿಪ್ರಕಾರಿತೆಗೆ ಎಲ್ಲರೂ ವಿಸ್ಮಯಪಡುತ್ತಿದ್ದರು. ತೆರಪಿಲ್ಲದೆ ಕೋಟೆಯ ಮೇಲೆ ಕೋಟೆಯನ್ನು ಹಿಡಿದನು; ನಗರದ ಮೇಲೆ ನಗರವನ್ನೂ ಗ್ರಾಮದ ಮೇಲೆ ಗ್ರಾಮವನ್ನೂ ಗೆದ್ದನು. ಈ ರೀತಿಯಾಗಿ ಅವನು ನಿಂತಲ್ಲಿ ನಿಲ್ಲದೆ ಗ್ರಾಮೈಕರಾತ್ರನಾಗಿ ಅಲೆಯುತ್ತ ಕಾರ್ಯಮಾಡುತ್ತಿರುವುದನ್ನು ಕಂಡು ಅವನು ಬಹು ರೂಪಗಳನ್ನು ತಾಳಿ ಏಕ ಕಾಲದಲ್ಲಿ ಅನೇಕ ಸ್ಥಳಗಳಲ್ಲಿ ಇರುವನೆಂದು ಎಲ್ಲರೂ ಭ್ರಾಂತಿಗೊಳ್ಳುತ್ತಿದ್ದರು.

ತೋರಣ ದುರ್ಗದಲ್ಲಿ ಸಿಕ್ಕಿದ ಹಣವೆಲ್ಲವೂ ವೆಚ್ಚವಾಗುತ್ತಲೆ ಶಿವಾಜಿಯು ಪಶ್ಚಿಮ ಘಟ್ಟವನ್ನು ದಾಟಿ ಕೊಂಕಣ ದೇಶಕ್ಕೆ ಸೇನಾ ಸಮೇತನಾಗಿ ಹೋದನು. ೧೬೩೬ರಲ್ಲಿ ಅಹಮದ್ನಗರವು ಮೊಗಲರಿಗೂ ಬಿಜಾಪುರ ಸಂಸ್ಥಾನದವರಿಗೂ ಹಂಚಿಕೆಯಾದಾಗ ಕೊಂಕಣದಲ್ಲಿರುವ ಕಲ್ಯಾಣ ಪ್ರಾಂತವು ಬಿಜಾಪುರದ ಸುಲ್ತಾನರ ಪಾಲಿಗೆ ಬಂದಿತು. ಆ ಪ್ರಾಂತದ ಉತ್ತರ ಭಾಗಕ್ಕೆ ಮೂಲಾನ ಅಹಮದ್ ಎಂಬವನು ಸುಬೇದಾರನಾಗಿದ್ದನು. ಆ ಪ್ರದೇಶಕ್ಕೆ ಕಲ್ಯಾಣವೆಂಬ ಸ್ಥಳವೇ ಮುಖ್ಯವಾದ ಠಾಣೆ. ಸುಬೇದಾರನು ತನ್ನ ಪ್ರಾಂತದ ಹುಟ್ಟುವಳಿಯ ಹಣವನ್ನು ಪಹರೆಯಿಟ್ಟು ಬಿಜಾಪುರಕ್ಕೆ ಕಳುಹಿಸಲು, ಶಿವಾಜಿ ಆ ಸುದ್ದಿಯನ್ನು ಕೇಳಿ ದಾರಿಯಲ್ಲಿ ಪಹರೆಯವರನ್ನು ಅಡ್ಡಹಾಕಿ ಹಣವೆಲ್ಲವನ್ನೂ ಕಸುಕೊಂಡನು. ಹೀಗೆ ಶಿವಾಜಿಯು ಮುಚ್ಚುಮರೆಯಿಲ್ಲದಂತೆಯೇ ಬಿಜಾಪುರ ಸಂಸ್ಥಾನದವರ ಮೇಲೆ ಯುದ್ಧಕ್ಕೆ ನಿಂತಂತೆ ಆಯಿತು.

ದುರ್ಗಗಳನ್ನು ಹಿಡಿಯುವುದರಲ್ಲಿ ಶಿವಾಜಿಯ ಚಾತುರ್ಯವು ಅತ್ಯದ್ಭುತವಾಗಿದ್ದಿತು. ಒಂದೊಂದು ಸಾರಿ ಅವನೂ ಅವನ ಜೊತೆಗಾರರೂ ಹುಲ್ಲಿನ ಹೊರೆಯಲ್ಲಿ ಕತ್ತಿಗಳನ್ನು ಬಚ್ಚಿಟ್ಟುಕೊಂಡು ಬೇಸಾಯಗಾರರ ವೇಷದಲ್ಲಿ ಕೋಟೆಗಳಿಗೆ ನುಗ್ಗಿ ದುರ್ಗವಾಸಿಗಳ ಮೇಲೆ ಬೀಳುವರು. ಕೂಡಲೆ ಮರೆಯಲ್ಲಿ ಅವಿತುಕೊಂಡಿದ್ದ ಸೈನಿಕರು ಹೋಗಿ ಅವರ ಸಂಗಡ ಸೇರಿ ಕೋಟೆಯನ್ನು ಗೆಲ್ಲುವರು; ಒಂದೊಂದು ಸಾರಿ ದುರ್ಗದ ಕಾವಲಿಗಿದ್ದ ಠಾಣೆಯವರು ತಿಂದು ತೇಗಿ ಮೈಮರೆ

ತಿರುವ ಸಮಯವನ್ನು ನೋಡಿಕೊಂಡಿದ್ದು ಇವನ ಕಡೆಯವರು ಅವ
ರನ್ನು ಮುತ್ತಿಗೆ ಹಾಕುವರು; ಮಳೆಯುಪ್ಪಳಿಸುತ್ತ ಗಾಳಿ ಹೊಡೆಯುತ್ತ
ಕತ್ತಲೆ ಕವಿದಿರುವ ಸಮ ರಾತ್ರಿಯಲ್ಲಿ ಸೈನಿಕರೊಳಗೆ ಕೆಲವರು ಮಾತ್ರ
ಕೋಟೆಗೆ ನುಗ್ಗಿ, ಬೇಕೆಂದು ಸೋತು ಓಡುವರು; ಆಗ ಗೆದ್ದೆವೆಂಬ
ಸಂತೋಷದಿಂದ ದುರ್ಗ ರಕ್ಷಕರು ಹೊರಗೆ ಬಂದು ಅವರನ್ನು ಬೆನ್ನಟ್ಟಿ
ಹೋಗುತ್ತಲೆ ಮತ್ತೊಂದು ದಳವು ಬಂದು ಆ ಕಾವಲಿಲ್ಲದ ಕೋಟೆ
ಯನ್ನು ಆಕ್ರಮಿಸುವುದು. ಈ ಬಗೆಯ ಉಪಾಯಗಳಿಂದ ಶಿವಾಜಿಯು
ಲೋಹಗಢ ಮೊದಲಾದ ಹಲವು ದುರ್ಗಗಳನ್ನು ತೆಗೆದುಕೊಂಡನು.

ಈ ತೆರದಲ್ಲಿ ಶಿವಾಜಿಯು ದುರ್ಗಗಳನ್ನು ಗೆಲ್ಲುತ್ತಿರಲು, ಅವನ
ಆಪ್ತ ಸೇನಾಪತಿಯಾದ ಆಬಾಜಿ ಸೋನದೇವನು ಕೆಲವು ಮಂದಿ
ರಾವುತರೊಡನೆ ಕಲ್ಯಾಣ ನಗರಕ್ಕೆ ಹೋಗಿ ಮೂಲಾನ ಅಹಮ್ಮದನನ್ನು
ಸೆರೆ ಹಿಡಿದು ಶಿವಾಜಿಯ ಬಳಿಗೆ ಕಳುಹಿಸಿದನು. ಶಿವಾಜಿಯು ಅವನನ್ನು
ಆದರಿಸಿ ಮಾನವಾಗಿ ಬಿಜಾಪುರಕ್ಕೆ ಕಳುಹಿಸಿಕೊಟ್ಟನು.

ಕಲ್ಯಾಣ ಪ್ರಾಂತದ ದಕ್ಷಿಣ ಭಾಗವು ಬೊಂಬಾಯಿಗೆ ದಕ್ಷಿಣ
ಕ್ಕಿರುವ ಜಿಂಜೀರ ದ್ವೀಪದಲ್ಲಿ ವಾಸಮಾಡುತ್ತಿದ್ದ ಸಿದ್ದಿಗಳಿಗೆ ನಾಯಕ
ನಾದ ಫತ್ತೆಖಾನನ ಅಧಿಕಾರಕ್ಕೊಳಪಟ್ಟಿದ್ದಿತು. ಆ ಸಿದ್ದಿಗಳು ಆಫ್ರಿಕಾ
ಖಂಡದಿಂದ ಬಂದು ಅಲ್ಲಿ ನೆಲಸಿದ್ದರು. ಅವರನ್ನು ಹಬ್ಸಿಗಳು (**Abyssini-
ans**) ಎಂದು ಕರೆಯುವುದೂ ಉಂಟು. ಫತ್ತೆಖಾನನ ಅಧಿಕಾರದಲ್ಲಿದ್ದ
ರಾಯರಿ ಮುಂತಾದ ದುರ್ಗಗಳನ್ನು ಆಯಾ ದುರ್ಗದ ನಾಯಕರು,
ಮುಸಲ್ಮಾನರ ಕೈಯ ಕೆಳಗೆ ಇರಲೊಲ್ಲದೆ, ತಾವಾಗಿಯೇ ಶಿವಾಜಿಯ
ಗೂಢಚಾರರಿಗೊಪ್ಪಿಸಿಬಿಟ್ಟರು. ಅವನ ಕಡೆಯ ಮಾವಳಿ ಭಟರು
ಕೊಂಕಣದಲ್ಲಿ ಅನೇಕ ಧನ ಸಮೃದ್ಧ ಪಟ್ಟಣಗಳನ್ನು ಸೂರೆಗೊಂಡು
ಅಪರಿಮಿತ ಧನವನ್ನು ರಾಯಗಡಕ್ಕೆ ಒಯ್ದರು. ತರುವಾಯ ಕೊಂಕಣ
ದಲ್ಲಿ ತಾನು ಗೆದ್ದ ಪ್ರದೇಶವು ಸಿದ್ದಿಗಳ ಬಾಧೆಯಿಲ್ಲದಂತೆ ಸುರಕ್ಷಿತ
ವಾಗಿರುವ ಉದ್ದೇಶದಿಂದ ಶಿವಾಜಿಯು ವೀರವಾಡಿ ಲಿಂಗಾಣ
ಎಂಬೂರುಗಳಲ್ಲಿ ದುರ್ಗಗಳನ್ನು ಕಟ್ಟಿಸಿದನು; ಸೋನದೇವನ
ಧೈರ್ಯಕ್ಕೂ ಚಾತುರ್ಯಕ್ಕೂ ಮೆಚ್ಚಿ ಕೊಂಕಣದಲ್ಲಿ ಸಂಪಾದಿಸಿದ

ಪ್ರದೇಶಕ್ಕೆ ಅವನನ್ನು ಸುಬೇದಾರನನ್ನಾಗಿಟ್ಟನು; ದೇಶಾಚಾರ ಪ್ರಕಾರವಾಗಿ ದೇವ ಬ್ರಾಹ್ಮಣರಿಗೆ ನಡೆಯುತ್ತಿದ್ದ ಮಾನ್ಯಗಳನ್ನೂ ವರ್ತನೆಗಳನ್ನೂ ಸ್ಥಿರಪಡಿಸಿ ಕಂದಾಯಕ್ಕೆ ಸಂಬಂಧಪಟ್ಟ ಪದ್ಧತಿಗಳನ್ನು ಕ್ರಮಪಡಿಸಿದನು.

ಶಿವಾಜಿಯು ಶುದ್ಧ ಚರಿತ್ರನು ಎಂಬುದಕ್ಕೆ ಕೊಂಕಣ ದೇಶದಲ್ಲಿ ನಡೆದ ಒಂದು ಸಂಗತಿಯು ಉಲ್ಲೇಖಾರ್ಹವಾಗಿರುವುದು. ಮೂಲಾನ ಅಹಮ್ಮದನಿಗೆ ರೂಪವತಿಯಾದ ಸೊಸೆಯೊಬ್ಬಳಿದ್ದಳು. ಸೋನದೇವನು ಆಕೆಯನ್ನು ಶಿವಾಜಿಗೊಪ್ಪಿಸಬೇಕೆಂದು ಕರೆದುಕೊಂಡು ಹೋದನು. ಶಿವಾಜಿಯು ಪರ ನಾರಿಯ ಸಹೋದರನು. ಇವನು ಸೋನದೇವನನ್ನೂ ಅವನು ಬಂದಿಯನ್ನಾಗಿ ಹಿಡಿದು ತಂದಿದ್ದ ಹೆಂಗಸನ್ನೂ ಸಭೆಯು ಕೂಡಿದ್ದ ಸಮಯದಲ್ಲಿ ಕರೆಯಿಸಿ, "ನನ್ನ ಹೆತ್ತ ತಾಯಿ ಈಕೆಯಂತೆ ಸುಂದರಿಯಾಗಿ ಹುಟ್ಟಿದ್ದ ಪಕ್ಷದಲ್ಲಿ ನಾನೂ ಚೆಲುವನಾಗಿಯೇ ಹುಟ್ಟುತ್ತಿದ್ದೆನು, ಸಂದೇಹವಿಲ್ಲ. ಯಾವನಿಗೆ ಯಶಸ್ಸನ್ನು ಕಾಪಾಡಿ ಕೊಳ್ಳಬೇಕೆಂಬ ಅಭಿಲಾಷೆಯು ಅಣುಮಾತ್ರವಾದರೂ ಇರುವುದೋ ಅವನು ಕನಸಿನಲ್ಲಿಯೂ ಪರಸ್ತ್ರೀಗೆ ಆಸೆಪಡನು. ಪೂರ್ವದಲ್ಲಿ ಪರಾ ಕ್ರಮಶಾಲಿಗಳಾದ ರಾವಣಾದಿಗಳು ಪರಸ್ತ್ರೀಯರಿಗೆ ಮೋಹಿಸಿ ಗತಿ ಗೆಟ್ಟರು. ಪ್ರಜೆಗಳು ರಾಜನಿಗೆ ಮಕ್ಕಳ ಸಮಾನರು. ಯಾವನು ಪಶು ಪ್ರವೃತ್ತಿಗೊಳಗಾಗಿ ರಾಜರಿಗೂ ಪ್ರಜೆಗಳಿಗೂ ಇರುವ ಈ ಪವಿತ್ರ ಸಂಬಂಧವನ್ನು ಉಲ್ಲಂಘಿಸುವನೋ ಅವನು ಗತಿಗೆಡುವನು. ಸ್ತ್ರೀಯ ರನ್ನು ಗೌರವಿಸುವಂತೆಯೂ ಅವರ ಮಾನವನ್ನು ಕಾಪಾಡುವಂತೆಯೂ ಶಾಸ್ತ್ರಕಾರರು ಮೊರೆಯಿಡುತ್ತಿರುವರು. ಅವರ ಆಜ್ಞೆಯನ್ನು ಮೀರು ವುದು ಯುಕ್ತವಲ್ಲ" ಎಂದು ಹೇಳಿ ಆ ಹೆಂಗಸಿಗೆ ಅಮೂಲ್ಯವಾದ ವಸ್ತ್ರಾಭರಣಗಳನ್ನು ಕೊಟ್ಟು ಕಾವಲಿಟ್ಟು ಬಿಜಾಪುರಕ್ಕೆ ಕಳುಹಿಸಿ ಕೊಟ್ಟನು.

ಶಿವಾಜಿಯು ಕೊಂಕಣದಲ್ಲಿ ನಡೆಯಿಸಿದ ಕೆಲಸಗಳೆಲ್ಲವೂ ಒಂದೊಂದಾಗಿ ಮಹಮ್ಮದ್ ಅದಿಲ್‌ಷಾಹನ ಕಿವಿಗೆ ಬೀಳುತ್ತ ಬರಲು, ಅವನ ಕೋಪಕ್ಕೆ ಪಾರವಿಲ್ಲವಾಯಿತು. ತನ್ನ ಕೈಯ ಕೆಳಗಿನ ಉದ್ಯೋ

ಗಸ್ಥನಾಗಿದ್ದು ಷಾಹಜಿಯು ತನ್ನ ಮಗನಿಗೆ ದುರ್ಬೋಧೆ ಮಾಡಿ ಈ ಕೆಲಸಗಳನ್ನು ಮಾಡಿಸುತ್ತಿರುವನೆಂದು ತೀರ್ಮಾನಮಾಡಿ ಕೋಪಾಟೋಪದಿಂದ ಷಾಹಜಿಗೆ ರಾಯಸವನ್ನು ಬರೆಯಿಸಿ ಕಳುಹಿಸಿದನು. ಷಾಹಜಿಯು ಕಾಗದವನ್ನು ನೋಡಿಕೊಂಡು, ದೇಹ ಸಂಬಂಧವೊಂದು ಹೊರತು ತನಗೂ ತನ್ನ ಮಗನಿಗೂ ಮತ್ತಾವ ಸಂಬಂಧವೂ ಇಲ್ಲವೆಂದೂ, ಮಗನು ತನಗೆ ತಿಳಿಸದೆಯೇ ಕಾರ್ಯಗಳನ್ನು ನಡೆಯಿಸುತ್ತಿರುವನೆಂದೂ, ಅದಕ್ಕೆ ಅವನು ದಂಡಾರ್ಹನೇ ಸರಿಯೆಂದೂ ವಿನಯಪೂರ್ವಕವಾಗಿ ಉತ್ತರವನ್ನು ಕೊಟ್ಟನು. ಆ ವಿನಯ ಪತ್ರವು ತಲುಪುತ್ತಲೆ ಸುಲ್ತಾನನ ಸಂದೇಹವು ಮತ್ತಷ್ಟು ಹೆಪ್ಪುಗಟ್ಟಿತು; ಅಲ್ಲದೆ ಕರ್ಣಾಟಕದಲ್ಲಿ ಷಾಹಜಿಯ ಏಳಿಗೆಯನ್ನು ನೋಡಿ ಸೈರಿಸಲಾರದೆ ಆಸ್ಥಾನದಲ್ಲಿ ಅವನಿಗೆ ವಿರೋಧಿಗಳಾಗಿದ್ದ ಸರ್ದಾರರು ಆ ಸಂದೇಹವನ್ನೇ ಬಲಪಡಿಸಿದರು. ಕಡೆಗೆ ಅವನು ಷಾಹಜಿಯನ್ನು ಮೋಸದಿಂದ ಕೈಸೆರೆಹಿಡಿದು ತರಿಸಬೇಕೆಂದು ನಿಶ್ಚಯಿಸಿದನು. ಅದಕ್ಕಾಗಿ ಬಾಜಿ ಘೋರ್ಪಡೆಯೆಂಬ ಸರ್ದಾರನಿಗೆ ಏನೇನೋ ಆಸೆಗಳನ್ನಿಟ್ಟು ಅವನನ್ನು ಒಳಹಾಕಿಕೊಂಡನು. ಆ ಸರ್ದಾರನು ಷಾಹಜಿಯ ಸ್ನೇಹಿತನು; ಅವನು ಒಂದು ದಿನ ರಾತ್ರಿ ಷಾಹಜಿಯನ್ನು ಊಟಕ್ಕೆ ಕರೆಯಲು, ಘೋರ್ಪಡೆ ತನ್ನ ಮಿತ್ರನೆಂದು ನಂಬಿ ಷಾಹಜಿಯು ಅವನ ಮನೆಗೆ ಊಟಕ್ಕೆ ಹೋದನು. ಕುಟಿಲ ಬುದ್ಧಿಯೂ ಮಿತ್ರ ದ್ರೋಹಿಯೂ ಆದ ಆ ಘೋರ್ಪಡೆಯು ೧೬೪೯ರಲ್ಲಿ ಷಾಹಜಿಯನ್ನು ಹಿಡಿದು ಕಾವಲಿಟ್ಟು ಸುಲ್ತಾನನ ಬಳಿಗೆ ಕಳುಹಿಸಿದನು. ಸುಲ್ತಾನನು ಅವನನ್ನು ಸೆರೆಯಲ್ಲಿಟ್ಟನು. ಆ ಬಳಿಕ ಶಿವಾಜಿಯು ಆಕ್ರಮಿಸಿದ ನಾಡುಗಳೆಲ್ಲವನ್ನೂ ಬೇಗ ಹಿಂದಕ್ಕೆ ಒಪ್ಪಿಸಿ ಬಿಟ್ಟರೆ ಸರಿ, ಇಲ್ಲದಿದ್ದರೆ ಅನ್ನ ನೀರನ್ನು ಕಾಣಿಸದೆ ಕೊಲ್ಲಿಸುವೆನೆಂದು ಷಾಹಜಿಯನ್ನು ಭಯಪಡಿಸಿದನು. ಷಾಹಜಿಯು ಮಗನು ತನ್ನ ಅಂಕೆಯಲ್ಲಿಲ್ಲವೆಂದೂ ಅವನು ಸಂಸ್ಥಾನದ ಮೇಲೆ ತಿರುಗಿಬಿದ್ದಿರುವಂತೆಯೇ ತನ್ನ ಮೇಲೆಯೂ ತಿರುಗಿಬಿದ್ದಿರುವನೆಂದೂ ಎಷ್ಟು ಬಗೆಯಲ್ಲಿ ಹೇಳಿದರೂ ಸುಲ್ತಾನನು ಕಿವಿಗೆ ಹಾಕಿಕೊಳ್ಳಲಿಲ್ಲ.

ತಂದೆಯ ದುರ್ಗತಿಯನ್ನು ಕೇಳಿ ತೊಳಲುತ್ತ ದಿಕ್ಕುಕಾಣದೆ ಶಿವಾಜಿ ಆ ಸಂಕಟ ಕಾಲದಲ್ಲಿ ತನ್ನ ಪ್ರಿಯೆಯಾದ ಸಯಿಬಾಯಿಯನ್ನು ಕರೆದು ವಿದ್ಯಮಾನವೆಲ್ಲವನ್ನೂ ಒಡೆದು ಹೇಳಿ ತಕ್ಕ ಯೋಚನೆಯನ್ನು ಹೇಳೆಂದು ಕೇಳಿದನು. ಅದಕ್ಕಾ ವೀರ ರಮಣಿ ವಿನಯ ಪೂರ್ವಕವಾಗಿ, "ನಮ್ಮ ಮಾವಂದಿರು ಪರಮ ಪೂಜ್ಯರು; ಅವರಿಗೆ ವಿಪತ್ತು ಬಂದರೇನು ನಮಗೆ ಬಂದರೇನು? ಈ ಕ್ಷಣವೆ ಅವರನ್ನು ಬಿಡಿಸಿಕೊಂಡು ಬರುವುದು ನಿಮ್ಮ ಕರ್ತವ್ಯವು. ಆದರೆ ಇನ್ನೊಂದು ವಿಜ್ಞಾಪನೆಯಿದೆ: ಜನ್ಮಭೂಮಿಯ ಉದ್ಧಾರ, ವರ್ಣಾಶ್ರಮ ಧರ್ಮ ರಕ್ಷಣೆ, ದೇವತಾ ಪ್ರೀತಿ ಸಂಪಾದನೆ ಮೊದಲಾದ ಉದ್ದೇಶಗಳಿಂದ ನೀವು ಆಯುಧಪಾಣಿಗಳಾಗಿ ನಿಂತಿರುತ್ತೀರಿ. ಸ್ವಾರ್ಥವನ್ನು ಸಾಧಿಸುವುದರಲ್ಲಿ ದೇಶಕ್ಕೆ ಹಾನಿ ಬರಬಾರದು ಇದಕ್ಕೇನು ಉಪಾಯವೆಂದು ಬುದ್ಧಿವಂತರಾದ ನಿಮ್ಮ ಮಂತ್ರಿಗಳನ್ನು ಕೇಳುವುದು ಉಚಿತವು. ಮಾವಂದಿರ ಬಿಡುಗಡೆಯೇನೊ ಆಗಬೇಕು; ಆದರೆ ಅದರಿಂದ ನೀವು ಪ್ರವರ್ತಿಸಿರುವ ಕಾರ್ಯಕ್ಕೆ ವಿಘ್ನಬಾರದಂತೆ ಮಾಡಿರಿ; ಇದು ಇಹಕ್ಕೂ ಸರಿ, ಪರಕ್ಕೂ ಸರಿ" ಎಂದು ಹೇಳಿದಳು. ಹೆಂಡತಿಯ ಯೋಚನೆ ಸರಿಯೆಂದು ಮಂತ್ರಿಗಳನ್ನು ಕರೆಯಿಸಿ ಅವರು ಹೇಳಿದುದನ್ನೆಲ್ಲ ಕೇಳಿ, "ಈ ಸಂಕಟದಲ್ಲಿ ಸಂಧಿ ಯುದ್ಧಗಳೆರಡೂ ನಮ್ಮ ಉದ್ದೇಶಕ್ಕೆ ಬಾಧಕಗಳಾಗುವುವು. ಯುದ್ಧಮಾಡಿದರೆ ಸುಲ್ತಾನನು ಕ್ರೋಧಾಂಧನಾಗಿ ನಮ್ಮ ತಂದೆಯನ್ನು ಹಿಂಸೆಮಾಡಿ ಕೊಲ್ಲುವನು; ಸಂಧಿಯ ಪ್ರಸ್ತಾವವನ್ನು ಮಾಡೋಣವೆಂದರೆ, ನಾವು ಕೈಯಲ್ಲಾಗದವರೆಂದು ಕಂಡುದನ್ನೆಲ್ಲ ಬೇಕೆನ್ನುವನು. ಆದುದರಿಂದ ನಮ್ಮ ತಂದೆಯನ್ನು ಬಿಡಿಸಬೇಕಾದರೆ ದಿಳ್ಳಿಯ ಚಕ್ರವರ್ತಿಯಾದ ಷಾಹಜಹಾನನನ್ನು ಕಟ್ಟಿಕೊಳ್ಳುವುದೇ ಉಪಾಯವಾಗಿದೆ" ಎಂದು ಹೇಳಿದನು. ಅದೇ ಸರ್ವೋತ್ತಮವಾದ ಉಪಾಯವೆಂದು ಮಂತ್ರಿಗಳೆಲ್ಲರೂ ಅಭಿಮತಿಸಿದರು. ಶಿವಾಜಿಯು ಷಾಹಜಹಾನನನ್ನು ಕಟ್ಟಿಕೊಳ್ಳುವ ನಿಮಿತ್ತದಿಂದ ಶೀಘ್ರವಾಗಿ ರಘುನಾಥ ಪಂತನೆಂಬವನನ್ನು ಕಳುಹಿಸಿದನು.

ಮುರಾರಿಪಂತ, ಸರ್ಜಾಖಾನ್ ಮೊದಲಾದವರು ಬಿಜಾಪುರದ ಸುಲ್ತಾನನ ಕೈಯ ಕೆಳಗೆ ಪ್ರಧಾನರಾದ ಉದ್ಯೋಗಸ್ಥರಾಗಿದ್ದರು.

ಅವರೆಲ್ಲರೂ ಷಾಹಜಿಗೆ ಬೇಕಾದವರು. ಅವರು ಸಮಯ ಸಿಕ್ಕಿದಾಗ ಲೆಲ್ಲ ಷಾಹಜಿ ದೋಷಿಯಲ್ಲವೆಂದು ಸುಲ್ತಾನನಿಗೆ ಹೇಳುತ್ತ ಕೂಡಿದ ಮಟ್ಟಿಗೆ ಅವನ ಸಂದೇಹವನ್ನು ಕರಗಿಸಿ ಕೋಪವನ್ನಿಳಿಸಿದ್ದರು. ಅಷ್ಟ ರೊಳಗೆ ರಾಯಸವನ್ನು ತೆಗೆದುಕೊಂಡು ಮೊಗಲಾಯಿ ಸಮ್ರಾಜನ ದೂತರೂ ಬಂದಿಳಿದರು. ರಾಯಸವನ್ನು ನೋಡುತ್ತಲೆ ಸುಲ್ತಾನನು ಹೆದರಿ ಷಾಹಜಿಯನ್ನು ಸೆರೆಯಿಂದ ಬಿಟ್ಟನು ; ಆದರೆ ನಾಲ್ಕು ವರ್ಷಗಳು ಬಿಜಾಪುರದಿಂದ ಆಚೆಗೆ ಹೋಗಕೂಡದೆಂದು ನಿರ್ಬಂಧಮಾಡಿದನು. ಈ ರೀತಿಯಾಗಿ ಶಿವಾಜಿಯ ತಂದೆಗೆ ಬಂಧ ವಿಮೋಚನೆಯಾಯಿತು. ಶಿವಾಜಿಯು ಗೆದ್ದ ಊರುಗಳೆಲ್ಲ ಅವನಿಗೇ ಉಳಿದುವು; ಮೊಗಲ್ ಸಮ್ರಾಜನ ನೆರಳೂ ಸಿಕ್ಕಿತು. ಆದರೂ ತಂದೆಯನ್ನು ಸುಲ್ತಾನನು ಕೊಲ್ಲಿಸಬಹುದೆಂಬ ಭಯದಿಂದ ಅವನ ರಾಜ್ಯಕ್ಕೊಳಪಟ್ಟ ಗ್ರಾಮ ಭೂಮಿಗಳನ್ನು ಆಕ್ರಮಿಸುವುದಕ್ಕೆ ಹೋಗದೆ ಶಿವಾಜಿಯು ೧೬೪೯ ರಿಂದ ೧೬೫೩ ರವರೆಗೆ ನಾಲ್ಕು ವರ್ಷಗಳಕಾಲ ಸುಮ್ಮನಿದ್ದನು. ಹಾಗೆ ಯೇ ಸುಲ್ತಾನನೂ ಮೊಗಲ್ ಚಕ್ರವರ್ತಿಗೆ ಭಯಪಟ್ಟು ಬಹಿರಂಗ ವಾಗಿ ಶಿವಾಜಿಯ ಮೇಲೆ ಯಾವ ಕಾರ್ಯ ಭಾಗವನ್ನೂ ಮಾಡಲಿಲ್ಲ.

ಯಾವ ಸಮಯದಲ್ಲಿ ಸಯಿಬಾಯಿಯಂತಹ ನಾರಿಯರು ಮನೆಯ ಮಕ್ಕಳ ಚಿಂತೆಯ ಜೊತೆಗೆ ದೇಶದ ಹಿತ ಚಿಂತೆಯನ್ನೂ ಕಟ್ಟಿ ಕೊಂಡು ತಮ್ಮ ಪ್ರಾಣಕಾಂತರನ್ನು ರಣರಂಗಕ್ಕೆ ಕಳುಹಿಸಲು ಹಿಂಜರಿ ಯುತ್ತಿರಲಿಲ್ಲವೋ, ಎದೆಯಾರಿ ಬಂದ ಪತಿ ಪುತ್ರರನ್ನು ತಮ್ಮ ವಾಕ್ಸಂ ಜೀವನದಿಂದ ಉತ್ಸಾಹಗೊಳಿಸುತ್ತಿದ್ದರೊ ಆ ಸಮಯದಲ್ಲಿ ಶಿವಾಜಿ ಯಂತಹ ವೀರನು ಆವಿರ್ಭೂತನಾದುದು ವಿಚಿತ್ರವಲ್ಲ.

ಬಿಜಾಪುರದ ಸುಲ್ತಾನನು ಷಾಹಜಿಯನ್ನು ಬಿಜಾಪುರದಲ್ಲಿಯೇ ಇಟ್ಟಿದ್ದ ನಾಲ್ಕು ವರ್ಷಗಳಲ್ಲಿ ಕರ್ಣಾಟಕ ದೇಶದ ಆಡಳಿತವು ಕರ್ತರಿಲ್ಲದೆ ಹೋದುದರಿಂದ ಹದಗೆಟ್ಟಿತು. ಷಾಹಜಿಯು ಪ್ರಯಾಸಪಟ್ಟು ಹಲವು ನಾಡುಗಳನ್ನು ಗೆದ್ದು ಬಿಜಾಪುರ ಸಂಸ್ಥಾನಕ್ಕೆ ಸೇರಿಸಿದ್ದನು. ಪ್ರಕೃತ ದಲ್ಲಿ ಆಯಾ ತುಂಡರಸರೂ ಪಾಳೆಯಗಾರರೂ ಸ್ವತಂತ್ರರಾಗಲು ಯತ್ನಿ ಸಿದರು. ಅವರೆಲ್ಲರನ್ನೂ ಅಡಗಿಸುವ ಸಲುವಾಗಿ ೧೬೫೩ರಲ್ಲಿ ಸುಲ್ತಾ

ನನು ಷಾಹಜಿಯನ್ನು ಕರ್ಣಾಟಕಕ್ಕೆ ಕಳುಹಿಸಿದನು. ಬಿಜಾಪುರ ವನ್ನು ಬಿಟ್ಟ ಕೂಡಲೆ ಷಾಹಜಿಯು ಘೋರ್ಪಡೆಗೆ ತಕ್ಕ ಶಾಸ್ತಿ ಮಾಡೆಂದು ಶಿವಾಜಿಗೆ ಆಜ್ಞೆಮಾಡಿ ಬೆಂಗಳೂರಿಗೆ ಬಂದು ಸೇರಿದನು. ಅವನು ಇಲ್ಲದ ಕಾಲದಲ್ಲಿ ಸುಲ್ತಾನನು ಷಾಹಜಿಗೆ ಕೊಟ್ಟಿದ್ದ ಕನಕಗಿರಿ ದುರ್ಗವನ್ನು ಮುಸಲ್ಮಾನನೊಬ್ಬನು ಆಕ್ರಮಿಸಿಕೊಂಡು ದುರ್ಗವನ್ನು ಹಿಡಿಸಿಕೊಳ್ಳುವುದಕ್ಕೆ ಹೋದ ಸಾಂಬಾಜಿಯನ್ನು ಕೊಂದನು. ಸುಲ್ತಾನನ ಆಸ್ಥಾನದಲ್ಲಿ ಸರ್ದಾರನಾಗಿದ್ದ ಅಫ್ಜುಲ್ಲಾಖಾನನೇ ಈ ಕೆಲಸವನ್ನು ಮಾಡಿಸಿದನೆಂಬ ವರ್ತಮಾನವು ಊರವರಿಗೆ ತಿಳಿಯಬಂದಿತು.

ಸುಲ್ತಾನನು ಷಾಹಜಿಯ ತೋಳನ್ನು ಬಿಗಿದರೆ ಶಿವಾಜಿ ಮಣಿಸುಕದಿರುವನೆಂದು ಯೋಚಿಸಿ ಮಾಡಿದ ಸನ್ನಾಹವು ದಾಯಗೆಡುತ್ತಲೆ ಬೇರೊಂದು ಉಪಾಯವನ್ನು ನೆನೆದನು. ಕೊಂಕಣದಲ್ಲಿ ಘಟ್ಟದ ಮೇಲಣ ಪ್ರದೇಶವನ್ನು ಘಾಟಿಮಾಥವೆಂದೂ ಘಟ್ಟದ ಕೆಳಗಣ ಪ್ರದೇಶವನ್ನು ತಲ ಕೊಂಕಣವೆಂದೂ ಕರೆಯುವರು. ವರುಣಾ ಕೃಷ್ಣಾ ನದಿಗಳ ನಡುವೆ ಇರುವ ಘಾಟಿಮಾಥವು ಬಿಜಾಪುರ ಸಂಸ್ಥಾನದವರಿಗೆ ಸೇರಿದ್ದಿತು. ಆ ನಾಡಿಗೆ ಸಮೀಪದಲ್ಲಿದ್ದ ಜಾವಲಿ ಎಂಬೊಂದು ಸಣ್ಣ ಸಂಸ್ಥಾನಕ್ಕೆ ಒಡೆಯನಾದ ಚಂದ್ರರಾವು ಮೋರೆ ಎಂಬವನು ಘಾಟಿಮಾಥಕ್ಕೂ ಬಿಜಾಪುರದವರ ಕೈಯ ಕೆಳಗೆ ಅಧಿಕಾರಿಯಾಗಿ ಆ ಕಾಲದಲ್ಲಿ ಪ್ರಬಲನಾಗಿದ್ದನು. ಅವನ ವಶದಲ್ಲಿ ಹನ್ನೆರಡು ಸಾವಿರ ಮಂದಿ ಸೈನಿಕರೂ ಅನೇಕ ದುರ್ಗಗಳೂ ಇದ್ದುವು. ಶಿವಾಜಿಯ ಸಂಗಡ ಬಹಿರಂಗವಾಗಿ ವೈರವನ್ನು ಬೆಳೆಯಿಸುವುದಕ್ಕೆ ಅಂಜಿ, ಸುಲ್ತಾನನು ಚಂದ್ರರಾಯ ಮೋರೆಯನ್ನು ಒಳಹಾಕಿಕೊಂಡು ಮಾಯೋಪಾಯದಿಂದ ಅವನನ್ನು ಹಿಡಿದು ತರಿಸಬೇಕೆಂದು ನಿಶ್ಚಯಿಸಿ ದಂಡನ್ನು ಕೊಟ್ಟು ಬಾಜಿ ಶಾಮರಾಯನನ್ನು ಜಾವಲಿಗೆ ಕಳುಹಿಸಿದನು. ಚಂದ್ರರಾಯನು ಅವನಿಗೆ ಆಶ್ರಯವನ್ನು ಕೊಟ್ಟನು. ಶಿವಾಜಿ ತಾನು ಕೊಂಕಣ ದೇಶದಲ್ಲಿ ಗೆದ್ದಿದ್ದ ಮಹಾಡ್ ಎಂಬ ಪಟ್ಟಣಕ್ಕೆ ಆಗಾಗ ಹೋಗುತ್ತಿದ್ದನು. ಶಾಮರಾಯನು ಶಿವಾಜಿಯ ಬರವನ್ನು ಕಾಯುತ್ತ ಜಾವಲಿಯ ಬೆಟ್ಟಗುಟ್ಟಗಳಲ್ಲಿ ಹೊಂಚು ಹಾಕುತ್ತಿದ್ದನು.

ಶಿವಾಜಿಯು ತೂಕಡಿಸುತ್ತಿರಲಿಲ್ಲ. ಈಯೊಳಸಂಚಿನ ವಾಸನೆ ಯನ್ನು ಹಿಡಿದು ಕೂಡಲೆ ಹಲವು ಮಂದಿ ಮಾವಳಿಗಳ ದಂಡನ್ನು ಕಟ್ಟಿ ಶಾಮರಾಯನ ಪಾಳಯಕ್ಕೆ ಹೊರಟನು. ಅಲ್ಲಿ ಶಾಮರಾಯನ ದಂಡು ಪುಡಿಪುಡಿಯಾಯಿತು; ಉಳಿದವರು ಜಾವಲಿಗೆ ಓಡಿದರು. ಸುಲ್ತಾನನೂ ಚಂದ್ರರಾಯನೂ ಈ ಸುದ್ದಿಯನ್ನು ಕೇಳಿ ಚಿಂತಾಕ್ರಾಂತ ರಾದರು.

ಶಿವಾಜಿಯು ಶತ್ರುಗಳನ್ನು ಮುರಿಯುತ್ತಿರುವಲ್ಲಿ ಏಳು ಸೂರು ಮಂದಿ ಮುಸಲ್ಮಾನ್ ಸೈನಿಕರು ಬಿಜಾಪುರ ಸಂಸ್ಥಾನದಲ್ಲಿ ಕೆಲಸ ವನ್ನು ಕಳೆದುಕೊಂಡು ಶಿವಾಜಿಯ ಬಳಿ ಕೆಲಸಕ್ಕೆ ಬಂದರು. ಬಿಜಾ ಪುರ ಸಂಸ್ಥಾನಕ್ಕೂ ತನಗೂ ವೈರವಿರುವುದು, ಬಂದಿರುವವರೆಲ್ಲರೂ ಮುಸಲ್ಮಾನರು, ಅವರನ್ನು ನಂಬುವುದು ಹೇಗೆ ಎಂದು ಕೇಳಲು, ಅದಕ್ಕೆ ಹವಾಲ್ದಾರ್ ಗೋಮಾಜಿನಾಯಕನೆಂಬವನು, ''ತಮಗೂ ಸುಲ್ತಾನನಿಗೂ ಶತ್ರುತ್ವವಿದ್ದ ಮಾತ್ರಕ್ಕೇ ತಮಗೂ ಮುಸಲ್ಮಾನಾ ಜಾತಿಗೂ ಶತ್ರುತ್ವವಿದೆಯೆಂದು ಹೇಳಲಾರೆನು. ಅವರು ನಿಮ್ಮ ಪ್ರಜೆಗಳಾದರೆ ಅವರನ್ನೂ ಮಕ್ಕಳಂತೆ ಸಲಹಬೇಕು. ರಾಜ್ಯದಲ್ಲಿ ಗುಣವಂತರಿಲ್ಲದೆ ಹೋದರೆ ರಾಜ್ಯವು ಏಳಿಗೆಯಾಗುವುದು ಹೇಗೆ?'' ಎಂದು ಹೇಳಿದನು. ಶಿವಾಜಿಯು ಹವಾಲ್ದಾರನು ಆಡಿದ ಮಾತು ನ್ಯಾಯವೆಂದೊಪ್ಪಿ, ಬಂದ ಮುಸಲ್ಮಾನರನ್ನು ಕೆಲಸಕ್ಕೆ ಸೇರಿಸಿ ಕೊಂಡು, ರಾಘೋಬಲ್ಲಾಲ್ ಅತ್ರೆ ಎಂಬ ಸುಚತುರ ವೀರನನ್ನು ಸೇನಾಪತಿಯನ್ನಾಗಿ ನೇಮಿಸಿದನು. ಶಿವಾಜಿಯು ವಿರೋಧಿಗಳು ಹಿಂದೂಗಳಾಗಿದ್ದರೂ ಮುಸಲ್ಮಾನರಾಗಿದ್ದರೂ ನಿರ್ವಂಚನೆಯಾಗಿ ಅವರ ಸಂಗಡ ಕಾಳಗಮಾಡಿ ಆ ಮುಸಲ್ಮಾನಾ ಸೈನಿಕರು ತಮ್ಮ ಪ್ರಭು ಪರಾಯಣತೆಯನ್ನು ತೋರಿಸಿದರು.

ತರುವಾಯ ಕೆಲವು ದಿನಗಳು ಶಿವಾಜಿ ಹರಿಹರೇಶ್ವರಕ್ಕೆ ಹೋಗಿ ಅಲ್ಲಿ ಇದ್ದನು. ಅದು ಸಮುದ್ರ ತೀರಸ್ಥವಾಗಿ ಮೂರು ಕಡೆ ಗಳಲ್ಲೂ ಬೆಟ್ಟಗಳಿಂದ ಕೂಡಿ ಅಡಕೆ ತೆಂಗು ತಾಳೆಗಳ ನೆಳಲಿನಿಂದ ತಂಪಾಗಿ ಶಾಂತಿಗೆ ನೆಲೆಯಾಗಿ ಅತ್ಯಂತ ರಮಣೀಯವಾಗಿರುವುದು.

ಅದರೊಳಗೂ ಸಮ್ಮುಖದಲ್ಲಿರುವ ಸುನೀಲ ವಾರಿಧಿಯು ಒಯ್ಯಾರಕ್ಕೆ ವಿಮುಲ ಚಂದ್ರಿಕೆಯು ಸೊಂಪು ಸೇರಿದಲ್ಲಿ ನೋಡುವವರು ಆನಂದ ಪರವಶರಾಗದಿರರು. ಶಿವಾಜಿ ಅಲ್ಲಿ ಭಗವಾನ್ ಅಗಸ್ತ್ಯ ಋಷಿಗಳಿಂದ ಪ್ರತಿಷ್ಠಿತವಾದ ಶಿವಲಿಂಗ ದರ್ಶನ ಮಾಡುತ್ತ ಕೆಲವು ಕಾಲವಿದ್ದನು. ಅವನು ಅಲ್ಲಿರುವಾಗ ಅನೇಕರು ಅವನನ್ನು ನೋಡುವುದಕ್ಕಾಗಿ ಹೋಗುತ್ತಿದ್ದರು. ಅವರೊಳಗೆ ಗೋವಳ್‌ಕರ್ ಸಾಂಬೇತರನೆಂಬವನ ಆಗಮನವು ಉಲ್ಲೇಖ ಯೋಗ್ಯವಾಗಿರುವುದು. ಅವನು ದೊಡ್ಡ ಮನೆ ತನದ ವೀರ ಪುರುಷನು. ಶಿವಾಜಿ ಅವನ ಸಾಹಸವನ್ನೂ ವಾಕ್ಚಾತುರ್ಯವನ್ನೂ ನೋಡಿ ಅವನನ್ನು ತಕ್ಕ ಪದವಿಯಲ್ಲಿಟ್ಟನು. ಕೃತಜ್ಞತೆಯಿಂದ ಅವನು ಶಿವಾಜಿಗೆ ಒಂದು ಉತ್ಕೃಷ್ಟವಾದ ಕತ್ತಿಯನ್ನು ಕೊಟ್ಟನು. ಬೆಲೆಯನ್ನು ಕೊಡದೆ ಅದನ್ನು ತೆಗೆದುಕೊಳ್ಳುವುದು ಸರಿಯಲ್ಲವೆಂದೆಣಿಸಿ ಶಿವಾಜಿ ಅವನಿಗೆ ಮುನ್ನೂರು ವರಹವನ್ನೂ ಉಡುಗೊರೆಯನ್ನೂ ಕೊಟ್ಟನು. ಕತ್ತಿ ಬಹಳ ಮಾಟವಾಗಿದ್ದಿತು. ಶಿವಾಜಿ ಅದರ ವಿಚಿತ್ರತೆಗೆ ಮೆಚ್ಚಿ ಅದಕ್ಕೆ ಭವಾನಿಯೆಂದು ಹೆಸರಿಟ್ಟನು. ಶಿವಾಜಿ ಎಡೆಬಿಡದೆ ಯಾವಜ್ಜೀವವೂ ಭವಾನಿಯನ್ನು ಹತ್ತಿರಲೇ ಇಟ್ಟುಕೊಂಡಿದ್ದು ಅದರಿಂದ ವಿಶೇಷ ಖ್ಯಾತಿಯನ್ನು ಪಡೆದನು.

ಚಂದ್ರರಾಯನು ಬಿಜಾಪುರದ ಸುಲ್ತಾನನ ಸಂಗಡ ಸೇರಿ ಕುಹಕೋಪಾಯದಿಂದ ಶಿವಾಜಿಯನ್ನು ಕೆಡಿಸಲು ಯತ್ನಿಸುತ್ತಿದ್ದನು. ಅವನು ಒಳಗೊಳಗೆ ನಡೆಯಿಸುತ್ತಿದ್ದ ಸಂಚುಗಳೆಲ್ಲವೂ ಶಿವಾಜಿಗೆ ತಿಳಿದುವು. ಸ್ವದೇಶದವರೇ ತನಗೆ ಹಗೆಗಳಾಗಿರುವುದನ್ನು ಕಂಡು ಅವನು ಒಹಳವಾಗಿ ಚಿಂತಿಸಿದನು. ಹಿಂದೂಗಳೆಲ್ಲರೂ ಒಬ್ಬರಲ್ಲೊಬ್ಬರು ಶತ್ರುತ್ವವನ್ನು ಬಿಟ್ಟು ಒಬ್ಬರ ರಕ್ಷಣೆಗೊಬ್ಬರು ನೆರವಾಗುತ್ತ, ಎಷ್ಟೋ ದೂರದಲ್ಲಿದ್ದರೂ ಒಬ್ಬರು ನೊಂದರೆ ತಾವು ನೊಂದಂತೆ ಭಾವಿಸಿ ಬಂದ ಕಷ್ಟಕ್ಕೆ ಪರಿಹಾರವನ್ನು ಹುಡುಕುತ್ತ, ಹಿಂದೂ ರಾಜರೆಲ್ಲರೂ ಭಿನ್ನ ಭಿನ್ನ ದೇಶಗಳಲ್ಲಿದ್ದರೂ ನಾವು ನೀವೆಂಬ ಪೃಥಗ್ಭಾವವನ್ನು ಬಿಟ್ಟು ಒಬ್ಬರ ಕಷ್ಟವು ತಮ್ಮ ಕಷ್ಟವು, ಒಬ್ಬರ ಸುಖವು ತಮ್ಮ ಸುಖವು, ಒಬ್ಬರ ಹಾನಿ ತಮ್ಮ ಹಾನಿ, ಒಬ್ಬರ ವೃದ್ಧಿ ತಮ್ಮ

ವೃದ್ಧಿ ಎಂದೆಣಿಸಿ ಆಪತ್ಕಾಲದಲ್ಲಿ ಒಬ್ಬರೊಬ್ಬರಿಗೆ ಒತ್ತಾಸೆ ಕೊಡುತ್ತ ಎಲ್ಲರೂ ಒಂದಾಗಿ ಕೈಗೂಡಿ ಬಾಳುವಂತೆ ಜಾತೀಯ ಭಾವವನ್ನು ಹುಟ್ಟಿಸಬೇಕೆಂದು ಶಿವಾಜಿ ಹಾರಯಿಸಿದನು ; ಆದುದರಿಂದ ಚಂದ್ರರಾಯನಲ್ಲಿ ದ್ವೇಷವನ್ನು ಬೆಳಯಿಸುವುದು ಉಚಿತವಲ್ಲವೆಂದೂ ಅವನ ಸ್ನೇಹವನ್ನು ಸಂಪಾದಿಸುವುದೇ ಸರಿಯೆಂದೂ ನಿಶ್ಚಯಿಸಿದನು. ಈ ಬಗೆಯ ಉದಾರ ಭಾವಗಳಿಂದ ಪ್ರೇರಿತನಾಗಿ ತಾನೇ ಜಾವಲಿಗೆ ಹೋಗಿ ತನ್ನ ಮನೋಗತ ಭಾವಗಳನ್ನು ಚಂದ್ರರಾಯನಿಗೆ ತಿಳಿಸಿ, ಇಬ್ಬರೂ ಏಕ ದೇಶವಾಸಿಗಳೂ ಏಕ ಧರ್ಮಾವಲಂಬಿಗಳೂ ಆದುದರಿಂದ ಪರಸ್ಪರ ವೈರವು ಶ್ರೇಯಸ್ಕರವಲ್ಲವೆಂದು ಹೇಳಿದನು. ಚಂದ್ರರಾಯನ ಮನಸ್ಸು ಕರಗಲಿಲ್ಲ. ಅಷ್ಟುಮಾತ್ರವೇ ಅಲ್ಲ ; ಅವನು ಶಿವಾಜಿಯನ್ನು ಹಿಡಿದು ಬಿಜಾಪುರಕ್ಕೆ ಸಾಗಿಸುವ ಸನ್ನಾಹವನ್ನು ಮಾಡಿದನು. ಶಿವಾಜಿ ಮೋಸಹೋಗುವವನಲ್ಲ ; ಚಂದ್ರರಾಯನ ಕಡೆಯವರ ಕೈಯಿಂದ ತಪ್ಪಿಸಿಕೊಂಡು ಸ್ವಸ್ಥಾನವನ್ನು ಸೇರಿದನು. ಆಗಲೂ ಅವನು ದುಡುಕಲಿಲ್ಲ. ತನಗೆ ವಿಶ್ವಾಸಿಗಳಾದ ರಘುನಾಥ ಪಂತನೆಂಬ ಬ್ರಾಹ್ಮಣನನ್ನೂ ಸಾಂಬಾಜಿ ಕವಾಜಿಯೆಂಬ ಕ್ಷತ್ರಿಯನನ್ನೂ ಸೇನಾ ಸಮೇತವಾಗಿ ಜಾವಲಿಗೆ ಪ್ರಯಾಣಮಾಡಿಸಿ, ಅವರು ಹೊರಡುವುದಕ್ಕೆ ಮುಂಚೆ ಅವರಿಗೆ ಮಾಡತಕ್ಕ ಉಪದೇಶಗಳನ್ನೆಲ್ಲ ಮಾಡಿದನು. ಸ್ವದೇಶ ಪ್ರೀತಿಯಿಂದ ಚಂದ್ರರಾಯನು ತನ್ನ ಪಕ್ಷಕ್ಕೆ ಒಂದರೂ ಸರಿ, ವಿವಾಹ ಮೂಲಕ ಸಂಬಂಧ ಬೆಳೆಯಿಸಿದರೂ ಸರಿ, ಕಡೆಯ ಪಕ್ಷ ತಟಸ್ಥನಾಗಿದ್ದರೂ ಸರಿ— ಇದೊಂದಕ್ಕೂ ಅವನು ಒಡಂಬಟ್ಟು ನಯಕ್ಕೆ ಬಾರದಿದ್ದರೆ ಯುದ್ಧಮಾಡಿ ಅವನ ರಾಜ್ಯವನ್ನು ಆಕ್ರಮಿಸುವುದೇ ಕರ್ತವ್ಯವೆಂದನು. ಪರಂತು, ಸಂಗತಿಗಳನ್ನೆಲ್ಲ ಪುಂಖಾನುಪುಂಖವಾಗಿ ಅವನಿಗೆ ತಿಳಿಸತಕ್ಕುದೆಂದು ಅವರಿಗೆ ಆಜ್ಞೆ ಮಾಡಿ ಕಳುಹಿಸಿದನು. ರಘುನಾಥರಾಯನು ಜಾವಲಿಗೆ ಬಂದು ಚಂದ್ರರಾಯನಿಗೆ ತಾನು ಬಂದ ಕಾರ್ಯವನ್ನು ತಿಳಿಸಿದನು. ಚಂದ್ರರಾಯನು ಸಂಧಿ ಪ್ರಸ್ತಾವವನ್ನು ಕುರಿತು ಪರಿಹಾಸಮಾಡಿದನು. ರಘುನಾಥರಾಯನು ಅವನನ್ನು ಮಾರ್ಗಕ್ಕೆ ತರುವುದಕ್ಕೆ ಎಷ್ಟೋ

ಸಾಹಸವನ್ನು ಮಾಡಿದರೂ ಅವನ ಶ್ರಮವೆಲ್ಲವೂ ವ್ಯರ್ಥವಾಯಿತು; ಜಾವಲಿ ರಾಜ್ಯವನ್ನು ಆಕ್ರಮಿಸುವ ಉಪಾಯವೊಂದೇ ಉಳಿಯಿತು. ರಘುನಾಥರಾಯನು ಈ ಸಂಗತಿಯನ್ನು ಶಿವಾಜಿಗೆ ತಿಳಿಸಿದನು. ಕೂಡಲೆ ಶಿವಾಜಿ ಯುದ್ಧಕ್ಕೆ ಸಿದ್ಧವಾಗಿರುವಂತೆ ರಘುನಾಥರಾಯನಿಗೆ ಬರೆಯಿಸಿ ತಾನೂ ಸೇನಾ ಸಮೇತನಾಗಿ ಜಾವಲಿಯ ಕಡೆಗೆ ಹೊರಟನು. ಕಾಳಗವು ಆರಂಭವಾಗುವುದಕ್ಕೆ ಮುಂಚೆ ರಘುನಾಥ ಪಂತನೂ ಸಾಂಬಾಜಿ ಕವಾಜಿಯೂ ತಮ್ಮ ಸೇನೆಯನ್ನು ಕಾಳೆಗಕ್ಕೆ ಅಣಿಮಾಡಿಟ್ಟು ಚಂದ್ರರಾಯನನ್ನು ನೋಡುವುದಕ್ಕಾಗಿ ಹೋದರು. ಮಾತಿಗೆ ಮಾತು ಬರಲಾಗಿ ಅವರು ಕ್ರೋಧಕ್ಕೆ ವಶರಾಗಿ ಚಂದ್ರರಾಯನನ್ನೂ ಅವನ ತಮ್ಮನಾದ ಸೂರ್ಯರಾಯನನ್ನೂ ೧೬೫೫ ರಲ್ಲಿ ಕೊಂದರು. ಆ ವರ್ತಮಾನವನ್ನು ಕೇಳುತ್ತಲೆ ಶಿವಾಜಿ ಸೇನೆಯೊಡನೆ ಬಂದು ಎರಡು ಘಂಟೆಯ ಕಾಲ ಪರಾಕ್ರಮದಿಂದ ಕಾಳಗ ಮಾಡಿ, ಪ್ರತಿ ಪಕ್ಷವನ್ನು ಸೋಲಿಸಿ ಜಾವಲಿಯನ್ನು ವಶಮಾಡಿಕೊಂಡನು. ಕೂಡಲೆ ಅಲ್ಲಿಯ ನಿವಾಸಿಗಳನ್ನು ಯಾವ ಬಗೆಯಲ್ಲೂ ನೋಯಿಸಕೂಡದೆಂದು ಸೈನಿಕರಿಗೆ ಆಜ್ಞೆಮಾಡಿ ಜಾವಲಿಗೆ ಸೇರಿದ ದುರ್ಗಗಳನ್ನೆಲ್ಲ ಆಕ್ರಮಿಸುವ ನಿಮಿತ್ತವಾಗಿ ನಾಲ್ಕು ಕಡೆಗೂ ದಂಡನ್ನು ಕಳುಹಿಸಿದನು. ಈ ಯುದ್ಧದಲ್ಲಿ ಚಂದ್ರರಾಯನ ಮಂತ್ರಿ ಹನುಮಂತರಾಯನೂ ಅವನ ಮಕ್ಕಳೂ ಶತ್ರುಗಳ ಸಂಗಡ ಕಾದಿ ತಮ್ಮ ಪರಾಕ್ರಮವನ್ನು ತೋರಿಸಿದರು. ಹನುಮಂತರಾಯನು ರಣರಂಗದಲ್ಲಿ ಸಾಂಬಾಜಿ ಕವಾಜಿಯಿಂದ ಹತನಾದನು. ಚಂದ್ರರಾಯನ ಮಕ್ಕಳು ಕೈಸೆರೆಯಾದರು. ಅವನ ಪದಾತಿಯು ಮಾವಳಿಗಳೆಲ್ಲರೂ ಶಿವಾಜಿಯ ಪದಾತಿಗೆ ಸೇರಿ ಅವನ ಬಲವನ್ನು ವೃದ್ಧಿಮಾಡಿದರು. ಶಿವಾಜಿಯು ಹೊಸದಾಗಿ ಸಂಪಾದಿಸಿದ ಈ ನಾಡಿನ ಪರಿಪಾಲನೆಗೆ ತಕ್ಕ ಏರ್ಪಾಡುಗಳನ್ನು ಮಾಡಿದನು. ಚಂದ್ರರಾಯನ ಪೂರ್ವಿಕರು ಬಹು ಕಾಲದಿಂದ ಕೂಡಿಟ್ಟಿದ್ದ ಭಂಡಾರವು ಅವನ ಕೈ ಸೇರಿತು. ಆ ಧನದಿಂದ ಅವನು ಮಹಾಬಲೇಶ್ವರದಲ್ಲಿದ್ದ ಭವಾನೀ ದೇವಸ್ಥಾನವನ್ನು ಜೀರ್ಣೋದ್ಧಾರಮಾಡಿ ಅದರ ಸುತ್ತಲೂ ಕೋಟೆಯನ್ನು ಕಟ್ಟಿಸಿ ಆ ಕೋಟೆಗೆ ಪ್ರತಾಪಗಡವೆಂದು ಹೆಸರಿಟ್ಟನು.

ಕೆಲವು ಮಂದಿ ಲೇಖಕರು ಚಂದ್ರರಾಯನ ಕೊಲೆಗೆ ಶಿವಾಜಿಯನ್ನು ಹೊಣೆಮಾಡುವರು. ಪರಂತು, ಆ ದೋಷವು ಶಿವಾಜಿಯದಲ್ಲ. ಚಂದ್ರರಾಯನು ಬಿಜಾಪುರದ ಸುಲ್ತಾನನ ಸಂಗಡ ಸೇರಿ ಶಿವಾಜಿಯ ಮೇಲೆ ಕಾರ್ಯಭಾಗವನ್ನು ಮಾಡುತ್ತಿದ್ದನು. ಶಿವಾಜಿ ಅವನ ಒಳಿಗೆ ಅನೇಕಾವೃತ್ತಿ ತನ್ನ ಕಡೆಯ ದೂತರನ್ನು ಕಳುಹಿಸಿ, ಅವನು ಮಿತ್ರನಾದರೆ ಪರಮ ಸಂತೋಷ. ಅದು ಇಷ್ಟವಿಲ್ಲದ ಪಕ್ಷಕ್ಕೆ ಉದಾಸೀನನಾಗಿದ್ದರೂ ಇರಬಹುದು ಎಂದು ಎಷ್ಟೋ ಬಗೆಯಾಗಿ ಹೇಳಿಸಿದರೂ ಕೇಳದೆ ಅವನು ಹಗೆತನವನ್ನೇ ಸಾಧಿಸುತ್ತಿದ್ದನು. ಆದರೂ ಅವನ ಮೈತ್ರೀ ಭಾವವನ್ನು ಸಂಪಾದಿಸಿ ತನ್ನ ಕಾರ್ಯಸಿದ್ಧಿಗೆ ಅವನು ಅನುಕೂಲನಾಗುವುದಕ್ಕೆ ಸರ್ವ ಸಾಹಸವನ್ನೂ ಮಾಡಿದನು, ಪ್ರಯೋಜನವಾಗಲಿಲ್ಲ. ಹೀಗಿರುವಲ್ಲಿ ಈ ಘಾತುಕ ಕೃತ್ಯಕ್ಕೆ ಶಿವಾಜಿಯು ಎಷ್ಟು ಮಟ್ಟಿಗೆ ಕಾರಣವೋ ಹೇಳುವುದು ಸುಲಭವಲ್ಲ.

ಜಾವಲಿಯನ್ನು ಜಯಿಸಿದ ತರುವಾಯ ಶಿವಾಜಿಯು ಹಿರಡಸ್ ಮಾವಳವೆಂಬ ಪ್ರಾಂತದಲ್ಲಿದ್ದ ರೋಹಿಡಾ ಎಂಬ ದುರ್ಗಕ್ಕೆ ಮುತ್ತಿಗೆ ಹಾಕಿದನು. ಆ ಪ್ರಾಂತಕ್ಕೆ ಬಾಂದಳನೆಂಬವನು ದೇಶಮುಖನಾಗಿದ್ದನು. ಅವನು ದುರ್ಗವನ್ನುಳಿಸಿಕೊಳ್ಳಲು ಶೌರ್ಯದಿಂದ ಕಾದಿ ರಣರಂಗದಲ್ಲಿಯೇ ಪ್ರಾಣವನ್ನು ಬಿಟ್ಟನು. ಅವನ ದಿವಾನ ಬಾಜಿಪ್ರಭು ದೇಶಪಾಂಡೆಯು ದುರ್ಗ ರಕ್ಷಣಾರ್ಥವಾಗಿ ಪ್ರಯಾಸಪಟ್ಟನು. ಕಡೆಗೆ ದುರ್ಗವು ಶಿವಾಜಿಯ ಹಸ್ತಗತವಾಯಿತು. ದುರ್ಗವನ್ನು ರಕ್ಷಿಸಲು ಪರಾಕ್ರಮದಿಂದ ಹೋರಾಡಿದ ಬಾಜಿಪ್ರಭು ಮೊದಲಾದ ವಿಪಕ್ಷದವರ ಸಾಹಸಕ್ಕೆ ಮೆಚ್ಚಿ ಆ ವೀರರನ್ನು ತನ್ನವರನ್ನಾಗಿ ಎಣಿಸಿ ಶಿವಾಜಿಯು ಅವರನ್ನು ಅವರವರ ಯೋಗ್ಯತೆಗೆ ತಕ್ಕ ಕಾರ್ಯಗಳಲ್ಲಿಟ್ಟನು. ಬಾಜಿಪ್ರಭುವು ಸೇನಾನಾಯಕನಾದನು. ಅವನು ಯಾವಜ್ಜೀವವೂ ಶಿವಾಜಿಯ ಕೈಯ ಕೆಳಗಿದ್ದು ಅನೇಕ ಕಾರ್ಯಗಳಲ್ಲಿ ತನ್ನ ಸಾಮರ್ಥ್ಯವನ್ನು ತೋರಿಸಿ ಕೀರ್ತಿವಂತನಾದನು.

ಅನಂತರ ಶಿವಾಜಿ ಕೊಂಕಣ ದೇಶದ ಶೃಂಗಾರಪುರವನ್ನು ಜಯಿಸಿದನು. ಶಿವಾಜಿ ಬರುವನೆಂಬ ಭಯದಿಂದ ಅಲ್ಲಿಯ ರಾಜನಾದ

ಸುರಬೆ ಎಂಬವನು ಪಲಾಯನ ಮಾಡಿದನು. ಶಿವಾಜಿ ಅವನನ್ನು ಹಿಂದಕ್ಕೆ ಕರೆಯಿಸಿ ಸಂವತ್ಸರಕ್ಕೆ ಇಷ್ಟು ಕಪ್ಪವನ್ನು ಕೊಡುವಂತೆಯೂ ಯುದ್ಧ ಕಾಲದಲ್ಲಿ ಜನ ಸಹಾಯ ಮಾಡುವಂತೆಯೂ ಒಪ್ಪಿಸಿ ರಾಯ ಗಡಕ್ಕೆ ಹೊರಟುಹೋದನು.

ಶಿವಾಜಿಯು ರಾಯರಿ ಮೊದಲಾದ ದುರ್ಗಗಳನ್ನು ತೆಗೆದು ಕೊಂಡಂದಿನಿಂದ ಸಿದ್ದಿಗಳು ಅವುಗಳನ್ನು ಹಿಂದಕ್ಕೆ ತೆಗೆದುಕೊಳ್ಳು ವುದಕ್ಕೆ ಪ್ರಯತ್ನ ಮಾಡುತ್ತಲೇ ಇದ್ದರು ; ಅವರನ್ನು ಅಡಗಿಸು ವುದಕ್ಕೆ ಪೇಶ್ವೆ ಶಾಮರಾವ್ ಪಂತನನ್ನು ಕಳುಹಿಸಿದನು. ಅವನು ಸೋತು ಬಂದುದರಿಂದ ಅವನನ್ನು ಪೇಶ್ವೆ ಪದವಿಯಿಂದ ತೆಗೆದುಹಾಕಿ, ಅವನ ಸ್ಥಾನದಲ್ಲಿ ಮೋರೋಪಂತ ಪಿಂಗಳನೆಂಬ ದೇಶಸ್ಥ ಬ್ರಾಹ್ಮಣ ನನ್ನು ನೇಮಿಸಿದನು. ಮೋರೋಪಂತನು ಅನೇಕ ಯುದ್ಧಗಳನ್ನು ಮಾಡಿ, ಕೈಬಿಟ್ಟು ಹೋಗಿದ್ದ ಊರುಗಳನ್ನೆಲ್ಲ ಮತ್ತೆ ವಶಮಾಡಿ ಕೊಂಡು, ಬೇಕಾದ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿಸಿ ಸೈನ್ಯವನ್ನು ಕ್ರಮಕ್ಕೆ ತಂದನು. ಅವನು ಕಟ್ಟಿಸಿದ ದುರ್ಗಗಳೊಳಗೆ ಪ್ರತಾಪಗಡವು ಇತಿಹಾಸದಲ್ಲಿ ಪ್ರಸಿದ್ಧವಾದುದು. ಆ ಕೋಟೆಯ ನಿರ್ಮಾಣ ವೈಚಿತ್ರ್ಯವನ್ನೂ ದುರ್ಗಮತೆಯನ್ನೂ ನೋಡಿ ಶಿವಾಜಿಯು ಮೋರೋ ಪಂತನ ಮೇಲೆ ಅತ್ಯಂತ ಪ್ರೀತಿ ವಿಶ್ವಾಸಗಳನ್ನಿಟ್ಟನು.

ಶಿವಾಜಿ ಜಾವಲಿ ಸಂಸ್ಥಾನವನ್ನು ತನ್ನ ರಾಜ್ಯಕ್ಕೆ ಸೇರಿಸಿ ಕೊಂಡು, ಶೃಂಗಾರಪುರದ ರಾಜನನ್ನು ಕಪ್ಪವನ್ನು ಸಲಿಸುವಂತೆ ಒಪ್ಪಿಸಿ, ಜಂಜೀರದ ಸಿದ್ದಿಗಳನ್ನು ಹಿಂದಕ್ಕಟ್ಟಿ, ರಾಯಗಡಕ್ಕೆ ಬಂದು ನಡೆದ ಸಂಗತಿಗಳನ್ನೆಲ್ಲ ತಾಯಿಗೆ ಬಿನ್ನಯಿಸಿದನು. ಅನಂತರ ಶಾಲೀವಾಹನ ಶಕ ೧೫೭೯ನೆಯ ವರ್ಷದ ಹೇವಿಳಂಬಿ ನಾಮ ಸಂವತ್ಸರದ ಜ್ಯೇಷ್ಠ ಶುದ್ಧ ದ್ವಾದಶಿಯ ದಿನ ಸಯಿಬಾಯಿಗೆ ಪುತ್ರೋ ತ್ಸವವಾಯಿತು ; ರಾಜ್ಯವು ಆನಂದಭರಿತವಾಯಿತು ; ದೇವಾಲಯ ಗಳಲ್ಲಿ ಸಂಭ್ರಮದಿಂದ ಪೂಜೆಗಳು ನಡೆದುವು ; ಬ್ರಾಹ್ಮಣರಿಗೂ ಬಡ ವರಿಗೂ ಯಥೇಚ್ಛವಾಗಿ ದಾನ ಧರ್ಮಗಳು ದೊರೆತುವು ; ಕಾಲಕ್ರಮ ದಲ್ಲಿ ಶಿಶುವಿಗೆ ಸಾಂಬಾಜಿಯೆಂದು ನಾಮಕರಣವಾಯಿತು.

---

## ಆರನೆಯ ಪ್ರಕರಣ

---

# ಅವರಂಗಜೇಬನ ದಂಡಯಾತ್ರೆ; ಶಿವಾಜಿಯನ್ನು ಹಿಡಿಯುವ ಪ್ರಯತ್ನ.

ಕ್ರಿ. ಶ. ೧೬೫೩ನೆಯ ಸಂವತ್ಸರದಲ್ಲಿ ದಿಳ್ಳಿಯ ಪಾದಷಾಹನ ಮಗನಾದ ಅವರಂಗಜೇಬನು ಎರಡನೆಯ ಸಾರಿ ದಕ್ಷಿಣ ದೇಶಕ್ಕೆ ಸುಬೇದಾರನಾಗಿ ಬಂದನು. ಕೂಡಲೆ ಅವನು ಖಡಕಿಯೆಂಬ ಪಟ್ಟಣವನ್ನು ರಾಜ ಕಾರ್ಯಗಳಿಗೆ ಅಧಿಷ್ಠಾನವನ್ನಾಗಿ ಮಾಡಿ ತನ್ನ ನಾಮಾನುಸಾರವಾಗಿ ಅದಕ್ಕೆ ಅವರಂಗಾಬಾದ್ ಎಂದು ಹೆಸರಿಟ್ಟನು. ಅವನು ದಕ್ಷಿಣದೇಶದಲ್ಲಿ ಕಾಲಿಟ್ಟಂದಿನಿಂದ ಗೋಲ್ಕೊಂಡ ಬಿಜಾಪುರ ಸಂಸ್ಥಾನಗಳನ್ನು ದಿಳ್ಳಿಯ ಅಧೀನಮಾಡುವುದಕ್ಕೆ ಬೇಕಾದ ಸನ್ನಾಹಗಳನ್ನು ಮಾಡುತ್ತಿದ್ದನು. ಅವನು ೧೬೫೬ರಲ್ಲಿ ಗೋಲ್ಕೊಂಡ ಸಂಸ್ಥಾನಕ್ಕೆ ದಂಡೆತ್ತಿ ಹೋಗಿ ರಾಜಧಾನಿಯಾದ ಹೈದರಾಬಾದನ್ನು ವಶಮಾಡಿಕೊಂಡನು. ಅಲ್ಲಿಯ ಸುಲ್ತಾನನು ಅವರಂಗಜೇಬನಿಗೆ ಹಣವನ್ನೂ ಭೂಮಿಯನ್ನೂ, ಅವನ ಮಗನಿಗೆ ತನ್ನ ಮಗಳನ್ನೂ, ಕೊಟ್ಟು ರಾಜ್ಯವನ್ನು ಉಳಿಸಿಕೊಂಡನು. ಆ ಬಳಿಕ ಅವರಂಗಜೇಬನು ಬಿಜಾಪುರ ಸಂಸ್ಥಾನವನ್ನು ಜಯಿಸುವ ಯೋಚನೆಯನ್ನು ಮಾಡಿದನು. ಅದಕ್ಕೆ ತಕ್ಕ ಸಮಯವೂ ಸಿಕ್ಕಿತು. ಕ್ರಿ. ಶ. ೧೬೫೬ನೆಯ ಸಂವತ್ಸರದಲ್ಲಿ ಆ ಸಂಸ್ಥಾನದ ಸುಲ್ತಾನನು ಮೃತನಾದನು. ತರುವಾಯ ಅವನ ಮಗನು ಸಿಂಹಾಸನಕ್ಕೆ ಬಂದನು. ಆಗ ಅವನಿಗೆ ಹತ್ತೊಂಬತ್ತನೆಯ ವರ್ಷವು ನಡೆಯುತ್ತಿದ್ದಿತು. ಅವನಿಗೆ ವ್ಯವಹಾರ ಜ್ಞಾನವಿರಲಿಲ್ಲವಾದುದರಿಂದ ಅವನ ತಾಯಿಯೇ ರಾಜ್ಯಕಾರ್ಯಗಳನ್ನು ನಿರ್ವಹಿಸುತ್ತಿದ್ದಳು. ಅದೇ ಸಮಯವೆಂದು ಅವರಂಗಜೇಬನು ಬಿಜಾಪುರಕ್ಕೆ ದಂಡೆತ್ತಿಹೋದನು. ಕೆಲವು ನಗರಗಳು ಅವನ ಕೈಸೇರಿದುವು. ಸುಲ್ತಾನನು ಅವರಂಗಜೇಬನನ್ನು ಪ್ರತಿಭಟಿಸುವ ಸ್ಥಿತಿಯಲ್ಲಿರಲಿಲ್ಲವಾದುದರಿಂದ ಸಂಧಿಗೊಪ್ಪಿ ಅವನ ಇಷ್ಟಪ್ರಕಾರ ನಡೆವೆನೆಂದು ತಿಳಿಸಿ

ದನು. ಆದರೆ ಅವರಂಗಜೇಬನು ಅಷ್ಟರಲ್ಲಿ ತೃಪ್ತನಾಗಲಿಲ್ಲ; ಆ ಸಂಸ್ಥಾನದ ಸ್ವಾತಂತ್ರ್ಯವನ್ನು ತೊಡೆದು ಅದನ್ನು ಮೊಗಲ್ ಸಾಮ್ರಾಜ್ಯಕ್ಕೆ ಸೇರಿಸುವ ಪ್ರಯತ್ನಗಳನ್ನೇ ಮಾಡುತ್ತಿದ್ದನು. ಅಷ್ಟರೊಳಗೆ ಅವನ ತಂದೆ ರೋಗ ಪೀಡಿತನಾಗಿ ಬದುಕುವುದು ಕಷ್ಟವೆಂದು ವರ್ತಮಾನ ಬಂದಿತು. ಆದುದರಿಂದ ಅವನು ತನ್ನ ಪ್ರಯತ್ನವನ್ನು ಬಿಟ್ಟು ದಿಳ್ಳಿಯ ಸಿಂಹಾಸನವನ್ನು ಅಪಹರಿಸುವುದರಲ್ಲಿ ಪ್ರವೃತ್ತನಾದನು. ಸದ್ಯಕ್ಕೆ ಬಿಜಾಪುರ ಸಂಸ್ಥಾನವು ಉಳಿದುಕೊಂಡಿತು.

ಅವರಂಗಜೇಬನು ಶಿವಾಜಿಯ ಅಸಾಧಾರಣ ಬುದ್ಧಿಯನ್ನೂ ಶೌರ್ಯವನ್ನೂ ಯುದ್ಧ ನಿಪುಣತೆಯನ್ನೂ ಚೆನ್ನಾಗಿ ತಿಳಿದಿದ್ದನು. ಅವನು ತನ್ನ ಇಷ್ಟಸಿದ್ಧಿಗೆ ಶಿವಾಜಿ ಅಡಿಯಾಳಾಗಬಹುದೆಂದೆಣಿಸಿ ಅವನನ್ನು ಉಪಾಯದಿಂದ ತನ್ನ ಕಡೆಗೆಳೆದುಕೊಳ್ಳುವ ಉದ್ದೇಶದಿಂದ ದೂತರನ್ನೂ ರಾಯಸವನ್ನೂ ಕಳುಹಿಸಿದನು. ಶಿವಾಜಿ ಮೋಸಹೋಗುವವನಲ್ಲ; ಅವರಂಗಜೇಬನು ಸ್ವಾರ್ಥ ಪರಾಯಣನೂ ಕುಟಿಲನೂ ಎಂಬುದನ್ನು ಅವನು ಬಲ್ಲನು. ಅವನು ತನ್ನ ಸ್ನೇಹವನ್ನು ಕೋರಿದುದು ಸ್ವಪ್ರಯೋಜನಕ್ಕಾಗಿ; ಅವನ ಇಷ್ಟ ಸಿದ್ಧಿಯಾಗುತ್ತಲೆ ಆ ಸ್ನೇಹವು ಹರಿದು ಹೋಗುವುದೆಂದು ಶಿವಾಜಿಗೆ ಚೆನ್ನಾಗಿ ತಿಳಿದಿದ್ದಿತು. ಅದೂ ಅಲ್ಲದೆ ದಕ್ಷಿಣ ದೇಶದಲ್ಲಿ ಮೊಗಲರ ಪ್ರಾಬಲ್ಯವು ಆಗಲೇ ಹೆಚ್ಚಿದ್ದಿತು. ಸಂಸ್ಥಾನಾಧಿಪತಿಗಳೊಳಗೆ ರಾಜಶಕ್ತಿ ಸಮತೂಕವಾಗಿಲ್ಲದೆ ಹೋಗುವುದರಿಂದ ಪ್ರಬಲರಾದವರು ದುರ್ಬಲರನ್ನು ಬಾಧಿಸುವರು; ಹೀಗಿರುವಲ್ಲಿ, ಗೋಲ್ಕೊಂಡ ಸಂಸ್ಥಾನವೂ ಬಿಜಾಪುರ ಸಂಸ್ಥಾನವೂ ಮೊಗಲರ ಹಸ್ತಗತವಾದರೆ ಮೊಗಲರು ತಾವೇ ತಾವಾಗಿ ಮತ್ತೆ ಯಾರಿಗೂ ಉಳಿಗಾಲವಿಲ್ಲದಂತೆ ಮಾಡುವರೆಂದು ಯೋಚಿಸಿ ಅವನು ಅವರಂಗಜೇಬನ ಸಂಗಡ ಮಿತ್ರತೆಯನ್ನು ಬೆಳೆಯಿಸಲು ಇಷ್ಟಪಡಲಿಲ್ಲ. ಅವನು ರಾಜಶಕ್ತಿ ಸಮತೆಯನ್ನು ರಕ್ಷಿಸುವುದೇ ಮುಖ್ಯ ಕರ್ತವ್ಯವೆಂದೆಣಿಸಿದನು. ಅವರಂಗಜೇಬನು ಬರೆದ ಕಾಗದವನ್ನು ಶಿವಾಜಿಯು ನಾಯಿಯ ಬಾಲಕ್ಕೆ ಕಟ್ಟಿಸಿ ಅವನಿಗೆ ಅವಮಾನ ಮಾಡಿದನೆಂದು ಕೆಲವರು ಹೇಳುವರು. ಅದರಿಂದ ಅವರಂಗಜೇಬನಿಗೆ ಶಿವಾಜಿಯ ಮೇಲಣ ದ್ವೇಷವು ಹೆಚ್ಚಿತೆಂದು ಪ್ರತೀತಿ ಇರುವುದು.

ಶಿವಾಜಿಯ ಕೀರ್ತಿ ಲತೆ ಮೆಲ್ಲ ಮೆಲ್ಲಗೆ ಹಬ್ಬುತ್ತಿದ್ದಿತು; ಆಬಾಲ ವೃದ್ಧರೂ ಅವನ ಪುರೋವೃದ್ಧಿಯನ್ನು ಕೇಳಿ ಆನಂದಿಸುವ ರಾದರು. ಅಲ್ಲಲ್ಲಿ ಜನರು ಧೈರ್ಯಗೊಳ್ಳುತ್ತ ಬಂದರು. ಪುಣೆಗೆ ವಾಯುವ್ಯ ದಲ್ಲಿದ್ದ ಕೋಲಿಯೆಂಬ ಪ್ರದೇಶದ ನಿವಾಸಿಗಳು ಮೊಗಲರ ಅಧೀನ ರಾಗಿದ್ದರು. ಅವರು ಸ್ವತಂತ್ರರಾಗಲೆಣಿಸಿ ಮೊಗಲರ ಮೇಲೆ ಕೈಯೆತ್ತಿ ದರು. ಅವರ ಸಹಾಯಕ್ಕಾಗಿ ಶಿವಾಜಿ ದಂಡನ್ನು ಕಳುಹಿಸಿದನು. ಆ ದಂಡು ಸೇರುವುದಕ್ಕೆ ಮೊದಲೇ ಮೊಗಲರು ಅವರನ್ನಡಗಿಸಿದ್ದರು; ಸ್ವಾಧೀನತೆಯನ್ನು ಪಡೆಯಲು ಯತ್ನಿಸಿದ ಆ ವೀರರ ಸರ್ವಸ್ವವನ್ನೂ ಸೂರೆಗೊಂಡು ಅವರ ಮನೆಗಳನ್ನು ಹಾಳುಮಾಡಿದರು; ಅನೇಕರನ್ನು ಕೊಂದು ಅವರ ತಲೆಗಳನ್ನೆಲ್ಲ ರಾಸಿ ಹಾಕಿ ಕಟ್ಟೆಯನ್ನು ಕಟ್ಟಿಸಿ ಅದಕ್ಕೆ 'ಕಾಲಾ ಚಬೂತರ್' ಎಂದು ಹೆಸರಿಟ್ಟರು. ಈ ಘಾತುಕ ಕೃತ್ಯವನ್ನು ಕೇಳಿ ಶಿವಾಜಿ ಬಹಳವಾಗಿ ದುಃಖಿಸಿದನು.

ಅವರಂಗಜೇಬನು ಬಿಜಾಪುರ ಸಂಸ್ಥಾನಕ್ಕೆ ದಂಡೆತ್ತಿ ಹೋದ ನೆಂದು ಕೇಳುತ್ತಲೆ ಶಿವಾಜಿಯು ಮಂತ್ರಿಗಳನ್ನು ಕರೆಯಿಸಿ ಆ ಸಂದರ್ಭ ದಲ್ಲಿ ಮಾಡಬೇಕಾದ ಕೆಲಸವನ್ನು ಕುರಿತು ಅವರ ಸಂಗಡ ಆಲೋ ಚಿಸಿದನು. ಆಗ ಬಿಜಾಪುರ ಸಂಸ್ಥಾನವನ್ನು ಅಬಲೆಯೊಬ್ಬಳು ಆಳು ತ್ತಿದ್ದಳು; ಅದರೊಳಗೂ ಅವಳು ಅವರಂಗಜೇಬನ ಮಿತ್ರದವಳು; ಆದರೂ ಅವನು ಆ ಸಂಸ್ಥಾನದ ಮೇಲೆ ನಿಷ್ಕಾರಣವಾಗಿ ದಂಡೆತ್ತಿ ಹೋದನು. ಸ್ವಾಮಿತಾವಲಂಬಿಯೂ ಅಬಲೆಯೂ ಆದವಳ ಮೇಲೆ ದಂಡೆತ್ತಿದವನು ದಾಯಬಿದ್ದರೆ ತಮ್ಮ ಮೇಲೆ ಬಲೆಯನ್ನು ಬೀಸದೆ ಬಿಡನು; ಬಿಜಾಪುರ ಸಂಸ್ಥಾನವು ಅವನ ಕೈಸೇರುತ್ತಲೆ ಅವನು ಸರ್ವ ಪ್ರಕಾರದಲ್ಲೂ ಬಲಿಷ್ಠನಾಗುವನು; ಆಗ ಆತ್ಮರಕ್ಷಣೆಯೂ ಕಷ್ಟ ವಾಗುವುದು—ಎಂದು ಯೋಚಿಸಿ ಶಿವಾಜಿ ಯುದ್ಧಕ್ಕೆ ಸಿದ್ಧವಾಗಿರು ವುದೇ ಸರಿಯೆಂದು ನಿಶ್ಚಯಿಸಿದನು.

ಆ ಬಳಿಕ ೧೬೫೭ರಲ್ಲಿ ಒಂದು ದಿನ ರಾತ್ರಿ ಶಿವಾಜಿ ಮಾವಳಿಗಳ ಸೇನೆಯೊಳಗೆ ಬಲಿಷ್ಠರಾಗಿಯೂ ನಿಪುಣರಾಗಿಯೂ ಇರುವವರನ್ನು ಆರಿಸಿಕೊಂಡು ಮೊಗಲರಿಗೆ ಸೇರಿದ ಜುನ್ನಾರ್ ಎಂಬ ಪಟ್ಟಣಕ್ಕೆ

ಹೊರಟನು. ಅವರು ಹಗ್ಗದೇಣಿಗಳನ್ನು ಮಾಡಿಕೊಂಡು ಕೋಟೆಯೊಳಗಿಳಿದರು. ಶಿವಾಜಿಯು ಸೇನೆ ಕೋಟೆಯನ್ನು ಮುತ್ತಿರುವುದು ಮುಸಲ್ಮಾನರಿಗೆ ತಿಳಿಯಿತು. ಆಗ ಎಲ್ಲಿಯುವರಲ್ಲಿ ಕೈಗೆ ಏನು ಸಿಕ್ಕಿದರೆ ಅದನ್ನು ತೆಗೆದುಕೊಂಡು ಆತ್ಮ ರಕ್ಷಣೆಗಾಗಿ ನಿಂತರು. ಆದರೆ ಅವರ ಯತ್ನವು ವ್ಯರ್ಥವಾಯಿತು. ಮುಸಲ್ಮಾನರು ಸೋತರು. ಈ ವಿಜಯದಿಂದ ಯಥೇಚ್ಛವಾಗಿ ನಗ ನಾಣ್ಯಗಳೂ ಆನೆ ಕುದುರೆಗಳೂ ಶಿವಾಜಿಯು ಕೈಸೇರಿದುವು. ವಿಜಯ ಲಬ್ಧ ವಸ್ತುಗಳನ್ನೆಲ್ಲ ರಾಯಗಡಕ್ಕೆ ಕಳುಹಿಸಿ ಶಿವಾಜಿ ಪುಣೆಗೆ ಹಿಂದಿರುಗಿದನು ; ಆ ಪಟ್ಟಣದ ಕಾವಲಿಗೆ ತಕ್ಕ ಏರ್ಪಾಡುಗಳನ್ನು ಮಾಡಿ ನೇತಾಜಿ ಪಾಲ್ಕರ್, ನಿರಾಜಿಪಂತ, ಮೋರೋಪಂತ ಪಿಂಗಳೆ ಮೊದಲಾದವರನ್ನು ಕೂಡಿ ಮೊಗಲರಿಗೆ ಸೇರಿದ ಪ್ರದೇಶಗಳಿಗೆ ಹೋಗಿ, ಅನೇಕ ನಗರಗಳನ್ನೂ ಗ್ರಾಮಗಳನ್ನೂ ಹೊಕ್ಕು ಅವರು ಕೂಡಿಟ್ಟಿದ್ದ ಧನ ಧಾನ್ಯಗಳನ್ನೂ ಯುದ್ಧ ಸಾಧನಗಳನ್ನೂ ಸೂರೆಗೊಂಡನು ; ಬಿಜಾಪುರಕ್ಕೆ ಹೋಗಿದ್ದ ಮೊಗಲರ ಸೇನೆಗೆ ಆಹಾರ ಪದಾರ್ಥಗಳು ಸಿಕ್ಕದಂತೆಯೂ ಅವರ ಕಾಲ್ನಡೆಗಳಿಗೆ ಹುಲ್ಲು ಸೊಪ್ಪು ದೊರೆಯದಂತೆಯೂ, ಒಬ್ಬರಿಂದೊಬ್ಬರಿಗೆ ಸಮಾಚಾರಗಳು ಮುಟ್ಟದಂತೆಯೂ ಮಾಡುವ ಉದ್ದೇಶದಿಂದ ಅಲ್ಲಲ್ಲಿಗೆ ಸೈನಿಕರನ್ನು ಕಳುಹಿಸಿದನು. ಹಾಗೂ ಹೀಗೂ ಮರಾಟಿಯುವರು ಅಹಮುದ್‌ನಗರದ ವರೆಗೂ ಹಬ್ಬಿ ಆ ನಗರವನ್ನೂ ಸೂರೆಗೊಂಡರು. ಈ ಸಮಯದಲ್ಲಿ ಶಿವಾಜಿಯು ಸೈನಿಕರ ಕ್ಷಿಪ್ರಕಾರಿತೆಯು ಎಲ್ಲರಿಗೂ ಆಶ್ಚರ್ಯಕರವಾಗಿದ್ದಿತು. ಅನೇಕ ಸಂದರ್ಭಗಳಲ್ಲಿ ಅವರ ಇರವು ಬರವುಗಳೊಂದೂ ಮೊಗಲರಿಗೆ ತಿಳಿಯುತ್ತಿರಲಿಲ್ಲ. ಈ ಹೊತ್ತು ತೆಂಕಣ ದಿಕ್ಕಿನಲ್ಲಿ ಐವತ್ತು ಗಾವುದ ದೂರದಲ್ಲಿ ಯಾವುದೋ ಒಂದು ನಗರವನ್ನು ಸೂರೆಗೊಂಡರೆಂದು ವರ್ತಮಾನವು ಬರುವುದು ; ನಾಳೆ ಬಡಗಣ ದಿಕ್ಕಿನಲ್ಲಿ ಅರುವತ್ತು ಗಾವುದದ ದೂರದಲ್ಲಿ ಮತ್ತೊಂದು ನಗರವನ್ನು ಸೂರೆಗೊಂಡರೆಂದು ಸಮಾಚಾರವು ಬರುವುದು. ಈ ರೀತಿಯಾಗಿ, ಯುದ್ಧ ವಿದ್ಯೆಯಲ್ಲಿ ಶಿಕ್ಷಿತರಲ್ಲದ ಶಾಂತ ಸ್ವಭಾವವುಳ್ಳ ಕೃಷಿಕರನ್ನು ಜೋಡಿಸಿಕೊಂಡು, ವಿಲಾಸ ವಿಭವಗಳನ್ನೆಲ್ಲ ತೊರೆದು,

ನಿದ್ರಾಹಾರಗಳನ್ನು ಬಿಟ್ಟು, ಬಿಸಿಲು ಮಳೆಗಳಿಗೆ ಹಿಂಜರಿಯದೆ, ಹಗಲೆನ್ನದೆ ಇರುಳೆನ್ನದೆ, ಹತ್ತಿದ ಕುದುರೆಯನ್ನಿಳಿಯದೆ, ಈ ಕ್ಷಣ ವಿಲ್ಲಿ ಇನ್ನೊಂದು ಕ್ಷಣವಲ್ಲಿ ಕಾಣಿಸಿಕೊಳ್ಳುತ್ತ, ಮೊಗಲ್ ಸಾಮ್ರಾಜ್ಯ ವನ್ನು ಮೂಲೋತ್ಪಾಟನ ಮಾಡುವ ನಿಮಿತ್ತವಾಗಿ ಆ ಪ್ರಚಂಡ ವೀರನು ತೆರಪಿಲ್ಲದೆ ಎಲ್ಲೆಲ್ಲೂ ಗುಡುಗಾಡುತ್ತಿದ್ದನು. ಅವರಂಗ ಜೇಬನು ಬಿಜಾಪುರವನ್ನು ಆಕ್ರಮಿಸುವ ಸಂಭ್ರಮದಲ್ಲಿದ್ದುದರಿಂದ ಶಿವಾಜಿಯ ಹಾವಳಿಯನ್ನು ಅಷ್ಟಾಗಿ ಮನಸ್ಸಿಗೆ ತೆಗೆದುಕೊಳ್ಳಲಿಲ್ಲ.

ಬಿಜಾಪುರದ ಸುಲ್ತಾನನು ಯುದ್ಧಮಾಡಿ ರಾಜ್ಯವನ್ನು ರಕ್ಷಿಸು ವುದಕ್ಕೆ ಸಾಮರ್ಥ್ಯವಿಲ್ಲದೆ ಇದ್ದುದರಿಂದ ಅವರಂಗಜೇಬನು ಹೇಳಿದ ಕೌಲಿನ ಷರತ್ತುಗಳಿಗೆಲ್ಲ ಒಡಂಬಟ್ಟು ಮೊಗಲ್ ಸಾಮ್ರಾಜ್ಯಕ್ಕೆ ಅಂಕಿತ ನಾಗುವುದರಲ್ಲಿದ್ದನು. ಶಿವಾಜಿ ಈ ಸಂಗತಿಯನ್ನು ಕೇಳಿ ತಾನೊಬ್ಬನು ಮೊಗಲರ ಮೇಲೆ ಯುದ್ಧಮಾಡುವುದು ಕ್ಷೇಮಕರವಲ್ಲವೆಂದು ವಿವೇ ಚನೆ ಮಾಡಿ ಸಂಧಿ ನಿಮಿತ್ತವಾಗಿ ಅವರಂಗಜೇಬನ ಬಳಿಗೆ ದೂತರನ್ನು ಕಳುಹಿಸಿದನು. ಅವರು ಬರುವ ಸಮಯಕ್ಕೆ ಸರಿಯಾಗಿ ಅವರಂಗ ಜೇಬನು ತಂದೆಯ ಅಪಾಯ ಸ್ಥಿತಿಯನ್ನು ಕೇಳಿ ಉತ್ತರದೇಶಕ್ಕೆ ಹೊರಟಿದ್ದನು. ದ್ವೇಷವನ್ನು ಬೆಳೆಯಿಸಿ ಶತ್ರುವನ್ನು ಹಿಂದೆ ಬಿಟ್ಟು ಹೋಗುವುದು ಕ್ಷೇಮವಲ್ಲವೆಂದೆಣಿಸಿ ಅವರಂಗಜೇಬನು ಬಂದ ದೂತ ರನ್ನು ಮಾನದಿಂದ ಬರಮಾಡಿಕೊಂಡು, ಶಿವಾಜಿಯು ಮೊಗಲ್ ಸಾಮ್ರಾಜ್ಯಕ್ಕೆ ಮಿತ್ರನೆಂದುಬ್ಬಿಸಿ ಅವನು ಬೇಡಿದುದೆಲ್ಲಕ್ಕೂ ಒಪ್ಪು ವಂತೆ ನಟಿಸಿ ತಕ್ಕ ಮಾನ ಮರ್ಯಾದೆಗಳಿಂದ ಅವರನ್ನು ಕಳುಹಿಸಿ ಕೊಟ್ಟು ದಿಳ್ಳಿಗೆ ೧೬೫೭ರಲ್ಲಿ ಪಯಣಮಾಡಿದನು.

ಶಿವಾಜಿ ವೃದ್ಧಿಗೆ ಬಂದಹಾಗೆಲ್ಲ ಅವನಿಗೂ ಬಿಜಾಪುರ ಸಂಸ್ಥಾ ನಕ್ಕೂ ಶತ್ರುತ್ವವು ಬೆಳೆಯುತ್ತ ಹೋಯಿತು. ಅಲ್ಲಿಯ ರಾಣಿ ಏನಾ ದರೂ ಮಾಡಿ ಅವನನ್ನು ಹುಟ್ಟುಗೆಡಿಸಬೇಕೆಂದು ನಿಶ್ಚಯಿಸಿದಳು. ಆಗ ಮುರಾರಿಪಂತನೆಂಬ ಕಾರ್ಯದಕ್ಷನಾದ ಬ್ರಾಹ್ಮಣನು ಆ ಸಂಸ್ಥಾನ ದಲ್ಲಿ ಮಂತ್ರಿಯಾಗಿದ್ದನು. ಅವನು ಶತ್ರುಗಳಿಗೊಳಗಾಗಿರುವನೆಂದು ಸಂದೇಹಪಟ್ಟು ರಾಣಿ ಅವನನ್ನು ಕೊಲ್ಲಿಸಿದಳು. ಆ ಬಳಿಕ ಅಫ್ಜಲಾ

ಖಾನಸಂಬವನು ಮಂತ್ರಿಯಾದನು. ಅವನು ಪರಾಕ್ರಮಶಾಲಿ, ದೊಡ್ಡ ಮನೆತನಕ್ಕೆ ಸೇರಿದವನು; ಆದರೆ ಗರ್ವಿಷ್ಠನು, ದೂರದೃಷ್ಟಿಯಿಲ್ಲದವನು. ರಾಣಿಯು ಸಂಸ್ಥಾನದ ಮುಖ್ಯಾಧಿಕಾರಿಗಳನ್ನೆಲ್ಲ ಕರೆಯಿಸಿ ಶಿವಾಜಿಯನ್ನು ಮುರಿವ ವಿಷಯವನ್ನು ಕುರಿತು ಈ ರೀತಿಯಾಗಿ ಮಾತಾಡಿದಳು:—

"ನೀವು ದೂರದರ್ಶಿಗಳು, ಯುದ್ಧವಿದ್ಯಾ ವಿಶಾರದರು, ಸಕಲ ಸಹಾಯ ಸಂಪನ್ನರು, ಅಭಿಜ್ಞರು; ಆದರೂ ಬುದ್ಧಿಯಿಲ್ಲದ ಹುಡುಗನೊಬ್ಬನು ನಮ್ಮ ನಗರಗಳನ್ನೂ ದುರ್ಗಗಳನ್ನೂ ನಿಮ್ಮಿಂದ ಕಸುಕೊಳ್ಳುತ್ತಿದ್ದಾನೆ. ಇದು ದುಃಖಕರವಾದ ವಿಷಯವಾಗಿದೆ; ಇದಕ್ಕಿಂತ ಆಶ್ಚರ್ಯಕರವಾದ ವಿಷಯವುಂಟೆ? ಇದಕ್ಕಿಂತ ಆಕ್ಷೇಪಾರ್ಹವಾದುದೇನಿದೆ? ಹುಡುಗನೊಬ್ಬನು ಕೆಲವು ಮಂದಿ ಹೆಡ್ಡರಾದ ಮಲೆಯರನ್ನು ಕಟ್ಟಿಕೊಂಡು ನಿಮ್ಮೆಲ್ಲರನ್ನೂ ಮರುಳು ಮಾಡಿರುವುದನ್ನು ನೋಡಿದರೆ ಪೌರುಷವೇ ಪಲಾಯನವಾದಂತಿದೆ; ಈಗ ಇದಕ್ಕೆ ಪ್ರತಿ ಕ್ರಿಯೆಯನ್ನು ಮಾಡದಿದ್ದರೆ ನೀವೆಲ್ಲರೂ ಧನ ಧಾನ್ಯಗಳನ್ನೂ ಹೆಂಡಿರು ಮಕ್ಕಳನ್ನೂ ದೇಶವನ್ನೂ ಬಿಟ್ಟು ಹೋಗುವ ಹೊತ್ತು ಬರುವುದು; ಇದಕ್ಕೆ ಸಂದೇಹವಿಲ್ಲ. ಈಗ ನೀವು ಆಡಿದ ಆಟವಾಗಿದೆ; ಯಾರನ್ನು ಮನಸ್ಸು ಬಂದಂತೆ ಆಳುತ್ತಿದ್ದೀರೋ, ಸ್ವಾರ್ಥಪರರಾಗಿ ಯಾರ ಸರ್ವಸ್ವವನ್ನೂ ಬಾಚಿ ಬಾಳುತ್ತಿದ್ದೀರೋ, ಯಾರನ್ನು ನೀವು ನಾಯಿ ನರಿಗಳಿಗಿಂತ ಕಡೆಯಾಗಿ ಬಡಿದರೂ ನಿಮ್ಮನ್ನು ದಂಡಿಸುವರಿಲ್ಲವೋ, ಸಲಾಮು ಮಾಡದ ಮಾತ್ರಕ್ಕೆ ಯಾರನ್ನು ನೀವು ದಂಡನೆಗೆ ಗುರಿಮಾಡುತ್ತಿರುವಿರೋ ಅವರೇ ನಿಮಗೆ ಒಡೆಯರಾಗುವರು. ನಿಮ್ಮ ದುರುಳತನವನ್ನು ಅವರು ಬೇರೆ ಮರೆಯರು. ಅವರನ್ನು ಗೋಳಾಡಿಸುತ್ತಿದ್ದೀರಿ; ರಾಜಶಕ್ತಿ ಕೈಗೆ ಬರುತ್ತಲೆ ಅವರು ನಿಮಗೆ ತಕ್ಕ ಶಾಸ್ತಿ ಮಾಡದೆ ಬಿಡರು; ಇದು ನಿಮ್ಮ ಸ್ಮರಣೆಯಲ್ಲಿರಲಿ. ರೇಗಿದ ವೇಳೆಯಲ್ಲಿ ಅತ್ಯಂತ ದುರ್ಬಲರೂ ಭೀಮ ಮೂರ್ತಿಯನ್ನು ತಾಳುವರು. ಕಂಡು ಕಂಡೂ ಎಚ್ಚರಗೊಳ್ಳದಿರುವುದು ಸರಿಯಲ್ಲ. ನಿಮ್ಮ ಕಣ್ಣ ಮುಂದೆ ಶೋಭಿಸುತ್ತಿರುವ ಅರಮನೆಗಳು ಸ್ವರ್ಗದಲ್ಲೂ ದುರ್ಲಭವು; ಇವೆ

ಲ್ಲವೂ ಹಾಳಾಗುವುವು. ನಮಗೆ ಪರಮ ಪಾವನವಾಗಿರುವ ಸ್ಥಳಗಳ ನ್ನೆಲ್ಲ ಅವರು ಹೊಲಸು ಮಾಡುವರು. ಇನ್ನೇನು ಹೇಳಲಿ! ನಾನು ಹೆಂಗುಸು, ಅಂತಃಪುರವನ್ನು ಬಿಟ್ಟವಳಲ್ಲ; ಹೊರಗಿನ ಸಂಗತಿಗಳು ನನಗೆ ಚೆನ್ನಾಗಿ ತಿಳಿಯುವು; ಆದರೆ ಇಷ್ಟು ಮಟ್ಟಿಗೆ ಹೇಳಬಲ್ಲೆನು; ಬೇಗ ನೀವು ಕಣ್ಣು ತೆರೆಯದಿದ್ದರೆ ಪ್ರಾಣಕ್ಕಿಂತ ಅತಿಶಯವಾದ ನಮ್ಮ ಪೂರ್ವ ಪುರುಷರ ಸಮಾಧಿಗಳನ್ನೆಲ್ಲ ಅವರು ಪುಡಿ ಪುಡಿ ಮಾಡಿ ತುಳಿದು ಬಿಡುವರು.''

ರಾಣಿಯ ಈ ಉತ್ತೇಜಕ ವಾಕ್ಯನ್ನು ಕೇಳಿ ಮಂತ್ರಿಗಳು ತುಟಿ ಪಿಟಕ್ಕೆನ್ನದೆ ಚಿತ್ರದ ಬೊಂಬೆಗಳಂತೆ ಮೌನವಾಗಿದ್ದರು. ಆಗ ಅಫ್ಜುಲ್ ಖಾನನು ಎದ್ದುನಿಂತು, ''ತಾವು ಒಂದು ಕಾಡು ಕಪಿಯನ್ನು ಕಂಡು ಹೀಗೇಕೆ ಹೆದರುತ್ತೀರಿ? ವಾಗಾಡಂಬರದಿಂದ ಫಲವೇನು? ಸೇವಕ ನಿಗೆ ಆಜ್ಞೆಯಾಗಲಿ; ಈಗಲೇ ಹೊರಟು ಆ ಕಪಿಯನ್ನು ಹಿಂಗಟ್ಟು ಮುರಿ ಕಟ್ಟಿ ಪ್ರಾಣ ಸಹಿತ ತಂದೊಪ್ಪಿಸುವೆನು'' ಎಂದನು. ರಾಣಿ ಈ ಮಾತನ್ನು ಕೇಳಿ ಸಂತೋಷಭರಿತಳಾಗಿ ಅಫ್ಜುಲ್‌ಖಾನನಿಗೆ ದಳವಾಯಿ ಪಟ್ಟವನ್ನು ಕಟ್ಟಿ ನಾನಾ ವಿಧವಾದ ವಸ್ತ್ರಾಭರಣಗಳನ್ನು ಕೊಟ್ಟು ಕಳುಹಿಸಿದಳು.

---

## ಏಳನೆಯ ಪ್ರಕರಣ

---

# ಅಫ್ಜುಲ್ ಖಾನನ ವಧೆ.

ಅಫ್ಜುಲ್ ಖಾನನು ಸೇನಾಪತಿಯಾಗಿ ಐದುಸಾವಿರ ಸವಾರರನ್ನೂ ಏಳುಸಾವಿರ ಕಾಲಾಳುಗಳನ್ನೂ ಹಲವು ಮಂದಿ ಬಿಲ್ಲಾಳುಗಳನ್ನೂ ಕಟ್ಟಿಕೊಂಡು ಶಿವಾಜಿಯನ್ನು ಹಿಂಗಟ್ಟುಮುರಿ ಕಟ್ಟಿ ತರುವುದಕ್ಕೆ ಬಿಜಾಪುರ ದಿಂದ ಹೊರಟನು. ಅವನು ದಾರಿಯಲ್ಲಿ ಕಂಡ ಕಂಡ ದೇವಾಲಯ ಗಳನ್ನು ಹಾಳುಮಾಡುತ್ತ ಗೋವುಗಳನ್ನು ಕೊಲೆ ಮಾಡುತ್ತ ತುಳಜಾ ಪುರಕ್ಕೆ ಹೋದನು. ತುಳಜಾಪುರವು ತೀರ್ಥಸ್ಥಾನವು. ಈ ಕ್ಷೇತ್ರ ದಲ್ಲಿ ಭವಾನಿಯ ಮಂದಿರವು ವಿಖ್ಯಾತವಾದುದು. ಆ ದೇವತೆಯ ದರ್ಶನಾರ್ಥವಾಗಿ ಪ್ರತಿ ದಿವಸವೂ ನೂರಾರು ಮಂದಿ ಹೋಗುವರು. ಭವಾನಿಯು ಶಿವಾಜಿಯ ಕುಲದೇವತೆ. ಅಫ್ಜುಲ್ ಖಾನನು ಅಂತಹ ಭವಾನಿಯ ಮಂದಿರವನ್ನು ಹಾಳುಮಾಡಿದನು; ಪಾಷಾಣ ಹೃದಯ ನಾಗಿ ಧರ್ಮಾಧರ್ಮವೆನ್ನದೆ ನ್ಯಾಯಾನ್ಯಾಯಗಳನ್ನು ವಿಚಾರಿಸದೆ ನಿರಪರಾಧಿಗಳಾದ ಹಿಂದೂಗಳನ್ನು ಕೊಂದನು. ಮಕ್ಕಳೆಂದಾಗಲಿ ಮುದುಕರೆಂದಾಗಲಿ ಹೆಂಗುಸರೆಂದಾಗಲಿ ಯಾರನ್ನೂ ಅವನು ಬಿಡಲಿಲ್ಲ. ಅಲ್ಲಿ ಕೆಲವು ದಿವಸವಿದ್ದು ಆ ದುರಾತ್ಮನು ಪರಮ ಪವಿತ್ರ ಸ್ಥಾನವಾದ ಪಂಡರಾಪುರಕ್ಕೆ ಹೋದನು. ಅಲ್ಲಿಯೂ ದೇವಾಲಯಗಳನ್ನು ನಾಶ ಮಾಡಿ ಅನೇಕ ವಿಧವಾದ ಅನ್ಯಾಯಗಳನ್ನು ನಡೆಯಿಸಿದನು. ಅಲ್ಲಿಂದ ಮುಂದಕ್ಕೆ ಹೋಗುತ್ತ ಭೀಮಾ ಮತ್ತು ಕೃಷ್ಣಾ ನದಿಗಳನ್ನು ದಾಟಿ ದನು. ಆಗ ಅವನು ಯುದ್ಧದಲ್ಲಿ ಜಯ ಪರಾಜಯಗಳು ನಿಶ್ಚಯವಲ್ಲ ವೆಂದು ಯೋಚಿಸಿ, ತಾನು ಸೋತರೆ ಬಿಜಾಪುರಕ್ಕೆ ಮುಖವನ್ನು ತೋರಿಸಲಾಗುವುದಿಲ್ಲವೆಂದೆಣಿಸಿದನು; ಒಂದು ವೇಳೆ ತಾನು ಗೆದ್ದರೂ ಶಿವಾಜಿಯನ್ನು ಹಿಡಿದುಕೊಂಡು ಹೋಗುವುದು ಸಾಮಾನ್ಯ ವಿಷಯ ವಲ್ಲವೆಂದು ಭಾವಿಸಿದನು; ಆದುದರಿಂದ ಮೋಸದಿಂದಲೇ ಶಿವಾಜಿ ಯನ್ನು ಹಿಡಿದು ತರಿಸುವ ಯೋಚನೆಯನ್ನು ಮಾಡಿದನು; ಈಯಭಿ

ಪ್ರಾಯದಿಂದ ಕೃಷ್ಣಾಜಿ ಭಾಸ್ಕರನೆಂಬ ಒಬ್ಬ ಕರ್ಮಚಾರಿಯನ್ನು ಕರೆಯಿಸಿ ತನ್ನ ಮನಸ್ಸಿನಲ್ಲಿದ್ದುದನ್ನೆಲ್ಲ ಒಡೆದು ಹೇಳಿ ರಕ್ತಪಾತವಿಲ್ಲದೆ ಶಿವಾಜಿಯು ಹಸ್ತಗತವಾಗುವ ಉಪಾಯವನ್ನುಪದೇಶಮಾಡಿ ಈ ತೆರವಾಗಿ ಶಿವಾಜಿಯ ಬಳಿಗೆ ಹೋಗಿ ಮಾತಾಡೆಂದು ಅವನನ್ನು ಕಳುಹಿಸಿದನು. ಅದೆಂತೆಂದರೆ:—

"ಷಾಹಜಿಗೂ ನನಗೂ ಬಹು ದಿನಗಳಿಂದ ಸ್ನೇಹವೂ ಭ್ರಾತೃಭಾವವೂ ಇರುವುವು. ಅವನು ಬಿಜಾಪುರ ಸಂಸ್ಥಾನದಲ್ಲಿ ಒಬ್ಬ ಮುಖ್ಯ ಸೇನಾಪತಿ. ನೀನು ಅವನ ಮಗನು; ನೀನು ಬೇರೆಯಲ್ಲ, ನನ್ನ ಮಗನು ಬೇರೆಯಲ್ಲ; ನಿನ್ನ ಮೇಲೆ ನಾನು ಕೈಮಾಡುವುದು ಹೇಗೆ? ಕೊಂಕಣ ದೇಶವನ್ನು ನಿನಗೆ ಜಹಗೀರಾಗಿ ಕೊಡಿಸುವೆನು. ಈ ವರೆಗೂ ನೀನು ಗೆದ್ದ ಕೋಟೆಗಳನ್ನೆಲ್ಲ ನೀನೇ ಇಟ್ಟುಕೊಳ್ಳಬಹುದು. ನಿಮ್ಮ ತಂದೆ ಬಿಜಾಪುರ ಸಂಸ್ಥಾನದ ಪಕ್ಷವನ್ನು ವಹಿಸಿ ಅದರ ಗೌರವವನ್ನು ಹೇಗೆ ವೃದ್ಧಿಗೊಳಿಸಿದನೊ ಹಾಗೆಯೇ ನೀನೂ ಆ ಸಂಸ್ಥಾನದ ಪಕ್ಷವನ್ನು ವಹಿಸಿ ದೇಶಗಳನ್ನು ಜಯಿಸು; ಈ ವಿಷಯದಲ್ಲಿ ಸಂಸ್ಥಾನದಿಂದ ಬೇಕಾಗುವ ಸಹಾಯವನ್ನು ಮಾಡಿಸುವೆನು. ಮೊಗಲರ ಸಂಗಡ ಯುದ್ಧಮಾಡಿ ನೀನು ತೋರಿಸಿದ ಪರಾಕ್ರಮವನ್ನು ಕೇಳಿ ನಾನು ಆನಂದಪಟ್ಟೆನು. ನಿನ್ನ ಅಪರಾಧಗಳನ್ನೆಲ್ಲ ಕ್ಷಮಿಸುವೆನು. ಸಂಸ್ಥಾನದಲ್ಲಿ ನಿನ್ನನ್ನು ಪ್ರಧಾನ ಕರ್ಮಚಾರಿಯೆಂದೆಣಿಸುವೆನು. ನೀನು ನಮ್ಮ ಇಚ್ಛಾನುಸಾರವಾಗಿ ನಡೆದುಕೊಂಡು ನಮ್ಮ ಪ್ರೀತಿಯನ್ನು ಸಂಪಾದಿಸುವೆ ಎಂದು ಕೋರುತ್ತೇನೆ." ಅಫ್ಜುಲ್ ಖಾನನು ಈ ವಿಧವಾದ ಶ್ರುತಿ ಮಧುರ ವಾಕ್ಯಗಳನ್ನು ಹೇಳಿ ಕೃಷ್ಣಾಜಿಯನ್ನು ಶಿವಾಜಿಯ ಬಳಿಗೆ ಕಳುಹಿಸಿದನು.

ಅಫ್ಜುಲ್ ಖಾನನು ಬಿಜಾಪುರ ಸಂಸ್ಥಾನದ ರಾಜಸಭೆಯಲ್ಲಿ ನುಡಿದ ಹೆಮ್ಮೆಯ ಮಾತನ್ನೂ ತುಳಜಾಪುರ ಪಂಡರಾಪುರ ಮೊದಲಾದ ಸ್ಥಳಗಳಲ್ಲಿ ಅವನು ನಡೆಯಿಸಿದ ಅಮಾನುಷ ಕೃತ್ಯಗಳನ್ನೂ ಶಿವಾಜಿಯು ಚಾರರ ಮೂಲಕವಾಗಿ ತಿಳಿದು ದುರ್ಗಸಂರಕ್ಷಣದ ವಿಷಯದಲ್ಲೂ ಸೇನೆಯೆಲ್ಲ ಒಂದು ಸ್ಥಳದಲ್ಲಿ ಸೇರುವ ವಿಷಯದಲ್ಲೂ ತಕ್ಕ ಯತ್ನ

ಗಳನ್ನು ಮಾಡಿದನು. ಈ ಸಂಕಟ ಕಾಲದಲ್ಲಿ ಭವಾನಿಯು ಶಿವಾಜಿಯ ಮೈಯ ಮೇಲೆ ಬಂದು, "ಚಿಂತಿಸಬೇಡ, ದೇವತೆಗಳೆಲ್ಲರೂ ನಿನಗೆ ಪ್ರಸನ್ನರಾಗಿರುವರು; ನಿಶ್ಚಿಂತನಾಗಿ ಕಾರ್ಯಗಳನ್ನು ನಡೆಯಿಸು. ನಿನ್ನ ಕೈಯಿಂದಲೇ ಅಫ್ಜುಲ್‌ಖಾನನನ್ನು ನಾಶಮಾಡುವೆನು" ಎಂದು ಹೇಳಿದಳು.

ಶಿವಾಜಿಯು ರಾಜ್ಯದಲ್ಲಿ ಪ್ರಧಾನರಾದ ಅಧಿಕಾರಿಗಳನ್ನೂ ಸೇನಾಪತಿಗಳನ್ನೂ ಕರೆಯಿಸಿ ಅಫ್ಜುಲ್‌ಖಾನನು ಮಾಡಿದ ಯುದ್ಧ ಘೋಷಣವನ್ನೂ ದೇವಾಲಯಗಳ ನಾಶನವನ್ನೂ ಭಗವತಿಯ ಭವಿಷ್ಯದ್ವಾಕ್ಯವನ್ನೂ ಕುರಿತ ವೃತ್ತಾಂತಗಳನ್ನೆಲ್ಲ ಅವರಿಗೆ ಹೇಳಿ ಮಾಡತಕ್ಕ ಕರ್ತವ್ಯವೇನೆಂದು ಕೇಳಿದನು. ಅವರೆಲ್ಲರೂ ಏಕವಾಕ್ಯತೆಯಿಂದ ಯುದ್ಧಕ್ಕೆ ಹೋಗುವುದು ಸರಿಯಲ್ಲವೆಂದು ಹೇಳಿ ಸುಲ್ತಾನನ ಸಂಗಡ ಸಂಧಿ ಮಾಡಿಕೊಳ್ಳುವ ಹಾಗೆ ಆಲೋಚನೆಯನ್ನು ಹೇಳಿದರು. ಶಿವಾಜಿ ಅದಕ್ಕಭಿಮತನಾಗದೆ ಇಂತೆಂದನು:—

"ಅಫ್ಜುಲ್‌ಖಾನನು ಕುಟಿಲನೆಂಬುದು ನಿಮ್ಮೆಲ್ಲರಿಗೂ ತಿಳಿದೇ ಇರುವುದು. ಅವನೇ ನಮ್ಮಣ್ಣನನ್ನು ಮೋಸದಿಂದ ಕೊಲ್ಲಿಸಿದವನು. ಪ್ರತಿಭಾಶಾಲಿಯಾದ ಮುರಾರಿರಾಯನನ್ನು ವಿಶ್ವಾಸಘಾತುಕತೆಯಿಂದ ಕೊಂದವನೂ ಅವನೇ. ನಮ್ಮ ತಂದೆಯನ್ನು ಸೆರೆಯಲ್ಲಿಡಿಸಿದವನೂ ಅವನೇ. ಇಂತಹ ಮಾಯಾವಿಯನ್ನು ನಂಬುವುದು ಎಂದಿಗೂ ಸರಿಯಲ್ಲ. ಅವನಲ್ಲಿ ವಿಶ್ವಾಸವಿಟ್ಟು ಸಂಧಿಗೊಪ್ಪಿದರೆ ಹಳ್ಳಕ್ಕೆ ಬೀಳುವುದೇ ನಿಶ್ಚಯವು. ಯಾವನು ವಿಚಾರಮಾಡದೆ ನಮ್ಮ ಧರ್ಮವನ್ನೂ ಪರಮ ಪವಿತ್ರ ದೇವಾಲಯಗಳನ್ನೂ ಹಾಳುಮಾಡುತ್ತಿರುವನೋ ಅವನ ಸಂಗಡ ಸಂಧಿಯೆಂದರೇನು? ಸ್ವರ್ಗಕ್ಕಿಂತ ಪವಿತ್ರವಾಗಿಯೂ ಪ್ರಾಣಕ್ಕಿಂತ ಪ್ರಿಯವಾಗಿಯೂ ಇರುವ ಜನ್ಮಭೂಮಿಯ ಸ್ವಾಧೀನತೆಯ ನಿಮಿತ್ತವಾಗಿ ಅಸ್ತ್ರಧಾರಣೆಮಾಡಿ ವರ್ಣಾಶ್ರಮ ಧರ್ಮಗಳನ್ನು ಪಾಲಿಸುವ ಸಲುವಾಗಿ ಸಮರಾನಲಕ್ಕೆ ಈ ಶರೀರವನ್ನು ಆಹುತಿ ಕೊಡಲು ಸಂಕಲ್ಪಮಾಡಿ ಅನ್ಯಾಯ ಸಾಗರದಲ್ಲಿ ಮಗ್ನರಾಗಿರುವ ನಮ್ಮ ದೇಶಸ್ಥರನ್ನು ಉದ್ಧಾರಮಾಡಲು ಪ್ರತಿಜ್ಞೆಮಾಡಿರುವಲ್ಲಿ ನಾನು ಯಾರ

ಸಂಗಡ ಸಂಧಿಗೆ ಹೋಗಲಿ? ಒಂದು ವೇಳೆ ನಾನು ಯುದ್ಧದಲ್ಲಿ ಸತ್ತರೆ ಅದಕ್ಕಿಂತ ಭಾಗ್ಯವಿಲ್ಲ. ಯುದ್ಧದಲ್ಲಿ ಹತರಾದವರು ಪರಮ ಪದವನ್ನು ಹೊಂದುವರೆಂದು ಶಾಸ್ತ್ರಕಾರರು ಹೇಳುವರು. ನಾನು ಇಹಲೋಕವನ್ನು ಬಿಟ್ಟು ಹೋಗುವುದೇ ಈಶ್ವರೇಚ್ಛೆಯಾಗಿರುವ ಪಕ್ಷಕ್ಕೆ ನನ್ನ ಮಗನಾದ ಸಾಂಬಾಜಿಗೆ ಪಟ್ಟವನ್ನು ಕಟ್ಟಿ ನಾನು ಹಾಕಿರುವ ಬೀಜವನ್ನು ಪ್ರೀತಿ ಪೂರ್ವಕವಾಗಿಯೂ ಪ್ರಯತ್ನಪೂರ್ವಕವಾಗಿಯೂ ವೃದ್ಧಿಗೆ ತರುವುದು ನಿಮ್ಮ ಕರ್ತವ್ಯವಾಗೆಣಿಸುವಿರೆಂದು ಕೋರುತ್ತೇನೆ.''

ಅನಂತರ ಶಿವಾಜಿ ರಾಜ್ಯ ಕಾರ್ಯಗಳ ವಿಷಯದಲ್ಲಿ ಸರಿಯಾದ ವ್ಯವಸ್ಥೆಯನ್ನು ಮಾಡಿಟ್ಟು, ಪರಮ ಪೂಜ್ಯಳಾದ ತಾಯಿಯ ಬಳಿಗೆ ಹೋಗಿ ಅವಳ ಚರಣಕಮಲಕ್ಕಭಿನಮಿಸಿ ಆಶೀರ್ವಾದವನ್ನು ಬೇಡಿದನು. ಪುತ್ರವತ್ಸಲೆಯಾದ ಜೀಜಾಬಾಯಿಯು, ''ಶಿವಾ, ನಿನಗೆ ಜಯವಾಗಲಿ'' ಎಂದು ಆಶೀರ್ವಾದಮಾಡಿ ಯುದ್ಧಕ್ಕಪ್ಪಣೆ ಕೊಟ್ಟಳು. ತಾಯಿಯ ಅಪ್ಪಣೆಯನ್ನು ಪಡೆದು ಶಿವಾಜಿ ರಾಯಗಡದಿಂದ ಪ್ರತಾಪಗಡಕ್ಕೆ ಹೊರಟನು. ಅವನು ಪ್ರತಾಪಗಡಕ್ಕೆ ಬರುತ್ತಲೆ ನೇತಾಜಿ ಪಾಲ್ಕರನು ಮೋರೋಪಂತ ಪಿಂಗಳೆ ಮೊದಲಾದವರು ಸೇನೆಯೊಂದಿಗೆ ಅಲ್ಲಿಗೆ ಬಂದು ಸೇರಿದರು. ಶಿವಾಜಿ ಯುದ್ಧಕ್ಕೆ ಸಿದ್ಧಮಾಡಿಕೊಳ್ಳುತ್ತಿರುವಲ್ಲಿ ಕೃಷ್ಣಾಜಿ ಪಂತನು ದೂತನಾಗಿ ಬಂದು ಅಫ್ಜುಲ್‌ಖಾನನು ಹೇಳಿದ ಮಾತುಗಳನ್ನೆಲ್ಲ ವಿವರವಾಗಿ ತಿಳಿಸಿದನು. ಶಿವಾಜಿ ಅವನನ್ನು ಆದರದಿಂದ ಕಂಡು ಎರಡನೆಯ ದಿನ ರಾತ್ರಿ ಅವನನ್ನು ಕರೆಯಿಸಿ, ''ನಾನು ಅಸ್ತ್ರವನ್ನು ಧರಿಸಿರುವುದು ಸ್ವಾರ್ಥಸಿದ್ಧಿಗಾಗಲ್ಲ, ಜನ್ಮಭೂಮಿಗೆ ಮುಸಲ್ಮಾನರ ಬಾಧೆಯನ್ನು ತಪ್ಪಿಸುವ ಸಲುವಾಗಿ ಸ್ವಧರ್ಮವನ್ನು ರಕ್ಷಿಸುವುದು ಕ್ಷತ್ರಿಯರಿಗೆ ಅವಶ್ಯ ಕರ್ತವ್ಯವು. ದೇವಬ್ರಾಹ್ಮಣರ ಕೃಪೆಯಿದ್ದರೆ ಅಫ್ಜುಲ್‌ಖಾನನನ್ನು ಜಯಿಸುವುದೊಂದು ವಿಷಯವಲ್ಲ'' ಎಂದು ಹೇಳಿ ಅಫ್ಜುಲ್‌ಖಾನನ ಮರ್ಮವನ್ನು ತಿಳಿವ ನಿಮಿತ್ತವಾಗಿ ಕೆಲವು ಮಾತುಗಳನ್ನು ಕೇಳಿದನು. ಅದಕ್ಕೆ ಕೃಷ್ಣಾಜಿ, ''ತಾವು ರಾಜನೀತಿ ವಿಶಾರದರು, ಶತ್ರುಗಳ ಚಾಟು ವಾಕ್ಯಗಳಿಂದ

ಮೋಸಹೋಗುವವರಲ್ಲ. ಅಫ್ಜುಲ್‌ಖಾನನು ತಮ್ಮನ್ನು ಬೆರಗುಮಾಡಿ ಸಂಚಿಸುವ ಉದ್ದೇಶದಿಂದ ಈ ಮರೆಮಾತುಗಳನ್ನಾಡಿರುವನು. ಅವ ಕಾಶವು ಸಿಕ್ಕಿದರೆ ವಿಶ್ವಾಸಘಾತುಕನಾಗಲು ಹೇಸುವನಲ್ಲ, ಆದುದ ರಿಂದ ಇದನ್ನೆಲ್ಲ ಯೋಚಿಸಿ ನಡೆಯಿರಿ'' ಎಂದು ಹೇಳಿದನು.

ಪ್ರತಾಪಗಡವು ದುರ್ಗಮ ಪ್ರದೇಶವೂ ಶತ್ರುಗಳಿಗೆ ಪ್ರತಿಕೂಲ ವಾದ ಸ್ಥಳವೂ ಎಂದೆಣಿಸಿಯೇ ಶಿವಾಜಿ ಅಫ್ಜುಲ್‌ಖಾನನನ್ನು ಅಲ್ಲಿ ಸಂಧಿಸಲು ನಿಶ್ಚಯಿಸಿದನು. ಕೃಷ್ಣಾಜಿಪಂತನು ಅಫ್ಜುಲ್‌ಖಾನನ ಬಳಿಗೆ ಹೋಗಿ ಅವನು ಮಾಡಿದ ಪ್ರಸ್ತಾಪಕ್ಕೆ ಶಿವಾಜಿಯೊಪ್ಪಿ ವಿಧೇಯ ನಾಗಲು ಅಭಿಮತನಾಗಿ ಖಾನನು ಪ್ರತಾಪಗಡಕ್ಕೆ ಬಂದರೆ ತಾನೂ ಅಲ್ಲಿಗೆ ಬರುವಹಾಗೆ ಒಡಂಬಟ್ಟಿರುವನೆಂದು ತಿಳಿಸಿದನು. ಪ್ರತಾಪ ಗಡಕ್ಕೆ ಹೋದರೆ ಶಿವಾಜಿ ತನ್ನ ಕೈಸೆರೆಯಾಗುವನೆಂಬ ಆಸೆಯಿಂದ ಅಫ್ಜುಲ್‌ಖಾನನು ಆ ಸ್ಥಳಕ್ಕೆ ಹೊರಟನು. ಈ ತೆರವಾಗಿ ಒಬ್ಬರ ನ್ನೊಬ್ಬರು ಬಲೆಗೆ ಸಿಕ್ಕಿಸಿಕೊಳ್ಳಬೇಕೆಂದು ಇಬ್ಬರೂ ಪ್ರಯತ್ನ ಮಾಡು ತ್ತಿದ್ದರು.

ಅಫ್ಜುಲ್‌ಖಾನನು ಪ್ರತಾಪಗಡದ ಬಳಿಗೆ ಹೋಗಿ ಅದರ ಕೆಳಗೆ ಶಿವಾಜಿ ಅಣಿಮಾಡಿಸಿದ್ದ ಬಿಡಾರದಲ್ಲಿಳಿದನು. ಎರಡನೆಯ ದಿವಸ ಶಿವಾಜಿಯು ಖಾನ್‌ಸಾಹೇಬನ ಸಂದರ್ಶನಕ್ಕೆ ಹೋಗುವಹಾಗೆ ನಿಶ್ಚಯ ವಾಯಿತು. ಶತ್ರುಗಳು ಹಠಾತ್ತಾಗಿ ಮೇಲೆ ಬಿದ್ದಾರೆಂಬ ಭಯದಿಂದ ಅಫ್ಜುಲ್‌ಖಾನನು ಸೈನಿಕರೆಲ್ಲರೂ ರಾತ್ರಿಯೆಲ್ಲ ಎಚ್ಚರಿಕೆಯಿಂದಿರ ತಕ್ಕುದೆಂದು ಆಜ್ಞೆಮಾಡಿದನು. ಶಿವಾಜಿಯು ಅಫ್ಜುಲ್‌ಖಾನನನ್ನು ನೋಡುವುದಕ್ಕೆ ಮೊದಲೇ ನೇತಾಜಿಪಾಲ್ಕರನನ್ನೂ ಮೋರೋಪಂತ ನನ್ನೂ ಕರೆಯಿಸಿ ಪರ್ವತದ ಮೇಲೂ ವನದೊಳಗೂ ಅಲ್ಲಲ್ಲಿ ಗೋಪ್ಯ ವಾಗಿ ಸೇನೆಯನ್ನು ನಿಲ್ಲಿಸುವಂತೆಯೂ ಕೊಂಬಿನ ಶಬ್ದವನ್ನು ಕೇಳು ತ್ತಲೆ ನೇತಾಜಿಪಾಲ್ಕರನೂ, ಗುಂಡನ್ನು ಹಾರಿಸುತ್ತಲೆ ಮೋರೋ ಪಂತನೂ ಯುದ್ಧಕ್ಕೆ ಮೊದಲುಮಾಡುವಹಾಗೆ ಅವರಿಗೆ ಹೇಳಿಕಳುಹಿ ಸಿದನು. ಶಿವಾಜಿ ಈ ರೀತಿಯಾಗಿ ಮಾಡಬೇಕಾದ ಏರ್ಪಾಡುಗಳ ನ್ನೆಲ್ಲ ಮಾಡಿ ಭೋಜನವಾದ ಮೇಲೆ ಕುಲದೇವತೆಯನ್ನೂ ತಂದೆ

ತಾಯಿಗಳನ್ನೂ ಸ್ಮರಿಸಿ, ಒಳಗೆ ಲೋಹ ಕವಚವನ್ನೂ ಮೇಲೆ ಬಿಳಿ ಯಂಗಿಯನ್ನೂ ತೊಟ್ಟು ಹಾಗೆಯೇ ಪಾಗಿನೊಳಗೆ ಕಬ್ಬಿಣದ ಕುಲಾವಿ ಯನ್ನು ಹಾಕಿಕೊಂಡು ಸೊಂಟದಲ್ಲಿ ಭವಾನಿಯೆಂಬ ಕತ್ತಿಯನ್ನು ಕಟ್ಟಿಕೊಂಡು ಎಡಗೈಯ ಬೆರಳುಗಳಿಗೆ ವಾಗನಖವೆಂಬಾಯುಧವ ನ್ನಿಟ್ಟುಕೊಂಡು ಅಂಗಿಯ ಬಲ ತೋಳಿನೊಳಗೆ ಬಿಚ್ಚಾ ಎಂಬಾಯುಧ ವನ್ನು ಬಚ್ಚಿಟ್ಟುಕೊಂಡು ಪರಾಕ್ರಮಶಾಲಿಗಳೂ ಅಸ್ತ್ರವಿದ್ಯಾ ಕುಶ ಲರೂ ಆದ ಇಬ್ಬರು ಸೈನಿಕರೊಡನೆ ಅಫ್ಜುಲ್‌ಖಾನನನ್ನು ನೋಡು ವುದಕ್ಕೆ ಹೊರಟನು. ಅಷ್ಟರೊಳಗೆ ಅಫ್ಜುಲ್‌ಖಾನನು ಡೇರೆಯಲ್ಲಿ ಒಂದು ಕುಳಿತಿದ್ದನು. ಶಿವಾಜಿಯೂ ಅವನ ಸಹಚರರೂ ಬರುತ್ತಿರು ವುದನ್ನು ಕಂಡು ಅಫ್ಜುಲ್‌ಖಾನನು ಅವರೊಳಗೆ ಶಿವಾಜಿ ಯಾರೆಂದು ತನ್ನ ಪಾರ್ಶ್ವದಲ್ಲಿ ನಿಂತಿದ್ದವರನ್ನು ಕೇಳಿದನು. ಅವರು ಕೈಯನ್ನು ತೋರಿಸಿ ಶ್ಯಾಮ ಕಾಯನಾಗಿಯೂ ಆಜಾನು ಬಾಹುವಾಗಿಯೂ ಸೊಂಟದಲ್ಲಿ ಕತ್ತಿಯನ್ನು ಕಟ್ಟಿದವನಾಗಿಯೂ ಕುಳ್ಳನಾಗಿಯೂ ಇರು ವನೇ ಶಿವಾಜಿಯೆಂದು ಹೇಳಿದರು. ಶಿವಾಜಿ ಡೇರೆಯೊಳಗೆ ಪ್ರವೇಶಮಾಡಿ ದನು. ಭೀಮ ಕಾಯನಾದ ಅಫ್ಜುಲ್‌ಖಾನನು ಅವನನ್ನಾಲಿಂಗನ ಮಾಡಿಕೊಳ್ಳುವ ನಿಮಿತ್ತವಾಗಿ ಹತ್ತಿರಕ್ಕೆ ಹೋದನು. ಆಲಿಂಗನ ಕಾಲದಲ್ಲಿ ಅಫ್ಜುಲ್‌ಖಾನನು ಶಿವಾಜಿಯ ತಲೆಯನ್ನು ಕಂಕುಳೊಳ ಗಿರುಕಿಸಿಕೊಂಡು ಅವುಕಿ ಕತ್ತಿಯನ್ನೊರೆಯಿಂದ ಹಿರಿದು ಅವನನ್ನು ತಿವಿ ದನು. ಆದರೆ ಶಿವಾಜಿ ಲೋಹ ಕವಚವನ್ನು ತೊಟ್ಟಿದ್ದುದರಿಂದ ಅವನಿಗೆ ಪೆಟ್ಟು ತಾಕಲಿಲ್ಲ. ನಿಮಿಷ ಮಾತ್ರದಲ್ಲಿ ಶಿವಾಜಿ ಎಡಗೈಯಲ್ಲಿಯ ವಾಗನಖವನ್ನು ಅಫ್ಜುಲ್‌ಖಾನನ ಹೊಟ್ಟೆಗೆ ಹಾಕಿ ಹಿರಿದು ಬಲಗೈಯ ಲ್ಲಿದ್ದ ಬಿಚ್ಚಾ ಎಂಬಾಯುಧದಿಂದ ಅವನೆದೆಯನ್ನು ತಿವಿದನು. ಆ ಇರಿತಗಳಿಂದ ಅಫ್ಜುಲ್‌ಖಾನನು ಸತ್ತನು. ಆ ಬಳಿಕ ಖಾನನ ಸಂಗಡ ಇದ್ದ ಆಳುಗಳು ಶಿವಾಜಿಯನ್ನೂ ಅವನ ಆಳುಗಳನ್ನೂ ಕೊಲ್ಲಲು ಯತ್ನಿ ಸಿದರು. ಆದರೆ ಅವರ ಯತ್ನವು ನಡೆಯಲಿಲ್ಲ. ಕೂಡಲೆ ಶಿವಾಜಿ ಅನುಚರರ ಸಮೇತನಾಗಿ ದುರ್ಗಕ್ಕೆ ಹೋಗಿ ಅಲ್ಲಿ ಗುಂಡನ್ನು ಹಾರಿಸುವಂತೆ ಆಜ್ಞಾಪಿಸಿದನು. ಆ ಶಬ್ದವನ್ನು ಕೇಳಿದ ಕೂಡಲೆ

ನೇತಾಜಿ ಮೋರೋಪಂತ ಮೊದಲಾದ ವೀರರು ವಿದ್ಯುದ್ವೇಗದಿಂದ ಮುಸಲ್ಮಾನರ ಮೇಲೆ ಬಿದ್ದರು. ಮುಸಲ್ಮಾನರು ಅಫ್ಜುಲ್‌ಖಾನನು ಅಕಸ್ಮಾತ್ತಾಗಿ ಸತ್ತುದನ್ನು ಕೇಳಿ ಸ್ತಂಭಿತರಾಗಿ, ಅನಂತರ ಶತ್ರುಗಳಿಂದಾಕ್ರಾಂತರಾಗಿ ದಿಗ್ಭ್ರಾಂತರಾದರು. ಮರಾಟಿಯವರಿಗೂ ಮುಸಲ್ಮಾನರಿಗೂ ಬಹಳ ಹೊತ್ತು ಯುದ್ಧವು ನಡೆಯಿತು. ಶಿವಾಜಿಗೆ ಜಯವಾಯಿತು; ಮುಸಲ್ಮಾನರೊಳಗೆ ಹಲವರು ಹತರಾದರು, ಹಲವರು ಕೈಸೆರೆಯಾದರು. ಶತ್ರುಗಳ ಆನೆಗಳೂ ಒಂಟೆಗಳೂ ಕುದುರೆಗಳೂ ಯುದ್ಧೋಪಕರಣಗಳೂ ಶಿವಾಜಿಯ ಕೈಸೇರಿದುವು. ಅವನು ವಿಜಯ ಪ್ರಾಪ್ತಿಯಾದ ಕೂಡಲೆ ರಾಯಗಡದಲ್ಲಿದ್ದ ತನ್ನ ತಾಯಿಗೆ ವಿಜಯ ವೃತ್ತಾಂತವನ್ನು ಹೇಳಿಕಳುಹಿಸಿದನು. ಆ ವೃತ್ತಾಂತವನ್ನು ಕೇಳುತ್ತಲೆ ಜೀಜಾಬಾಯಿಯು ದೇವಾಲಯಗಳಲ್ಲಿ ಪೂಜೆಯನ್ನೂ ಬ್ರಾಹ್ಮಣರಿಗೂ ದೀನರಿಗೂ ಅನಾಥರಿಗೂ ಅನ್ನದಾನ, ವಸ್ತ್ರದಾನ, ಧನ ದಾನಗಳನ್ನೂ ಮಾಡಿಸಿದಳು.

ಶಿವಾಜಿ ಯುದ್ಧದಲ್ಲಿ ಸತ್ತವರಿಗೆ ಯಥಾ ರೀತಿಯಾಗಿ ಉತ್ತರ ಕ್ರಿಯೆಯನ್ನು ಮಾಡಲು ಜನಗಳನ್ನು ಕಳುಹಿಸಿದನು. ಅವನು ಶತ್ರು ಭಾವವನ್ನು ಬಿಟ್ಟು ತಾನೇ ಹೋಗಿ ಯಥೋಚಿತವಾಗಿ ಅಫ್ಜುಲ್ ಖಾನನನ್ನು ಸಮಾಧಿಮಾಡಿಸಿದನು. ಈಗಲೂ ಪ್ರತಾಪಗಡದ ತಪ್ಪಲಲ್ಲಿ ಆ ಸಮಾಧಿಯು ದಾರಿಗರ ದೃಷ್ಟಿಗೆ ಗೋಚರವಾಗುತ್ತಿರುವುದು. ಶಿವಾಜಿಯು ಸತ್ತ ವೀರರ ಹೆಂಡಿರ ಮತ್ತು ಮಕ್ಕಳ ಪೋಷಣೆಗೂ ಪೆಟ್ಟು ತಿಂದವರ ಚಿಕಿತ್ಸೆ ಸೇವೆಗಳಿಗೂ ತಕ್ಕ ಏರ್ಪಾಡುಗಳನ್ನು ಮಾಡಿ ಅವರಿಗೆ ದ್ರವ್ಯ ರೂಪವಾಗಿಯೂ ಸಹಾಯವನ್ನು ಮಾಡಿದನು. ಇದಲ್ಲದೆ, ಯುದ್ಧದಲ್ಲಿ ವಿಶೇಷವಾಗಿ ವೀರತ್ವವನ್ನು ತೋರಿಸಿದವರಿಗೆ ಬಹುಮಾನಗಳನ್ನು ಕೊಟ್ಟು ಅವರನ್ನು ತ್ಸಾಹಗೊಳಿಸಿದನು.

ಸೆರೆಯಾದವರ ವಿಷಯದಲ್ಲಿ ಶಿವಾಜಿ ತೋರಿಸುತ್ತಿದ್ದ ಔದಾರ್ಯವೂ ದಯೆಯೂ ಚಿರ ಪ್ರಸಿದ್ಧವಾಗಿರುವುವು. ಅವನು ಯುದ್ಧದಲ್ಲಿ ವಶರಾದ ಸ್ತ್ರೀ ಪುರುಷರನ್ನೂ ಬಾಲ ವೃದ್ಧರನ್ನೂ ಆದರದಿಂದ ಕಂಡು ಅವರವರ ಯೋಗ್ಯತಾನುಸಾರವಾಗಿ ಅವರಿಗೆ ವಸ್ತ್ರಗಳನ್ನೂ ದ್ರವ್ಯ

ಮೊದಲಾದುವನ್ನೂ ಕೊಟ್ಟು ಮಾನದಿಂದ ಕಳುಹಿಸಿದನು; ಅವನ ಕೈಯ ಕೆಳಗಿರುವುದಕ್ಕಪೇಕ್ಷಿಸಿದರೆ ಅವರಿಗೆ ತಕ್ಕ ಕೆಲಸವನ್ನು ಕೊಡಿಸಿದನು. ಅಫ್ಜುಲ್‌ಖಾನನ ಸಂಗಡ ಬಂದಿದ್ದ ಹಿಂದೂಗಳೊಳಗೆ ಝುಂಜಾರಾವ್ ಘಾಟಕೆ ಎಂಬವನೊಬ್ಬನು. ಅವನು ಯುದ್ಧದಲ್ಲಿ ಕೈಸೆರೆಯಾದನು. ಶಿವಾಜಿ ಅವನನ್ನು ತನ್ನ ಬಳಿ ಇರೆಂದು ಎಷ್ಟೋ ಒಗೆಯಾಗಿ ಹೇಳಿದನು. ಅದಕ್ಕವನು ಒಪ್ಪದೆ, "ಯಾವನ ಅನ್ನದಿಂದ ನನ್ನ ದೇಹವು ಬೆಳೆದಿರುವುದೊ ಅವನನ್ನು ಬಿಟ್ಟುಹೋಗುವುದು ಧರ್ಮವಲ್ಲ; ಪರಂತು, ನಾನೆಲ್ಲೇ ಇರಲಿ, ನೀವು ಗೋ ಬ್ರಾಹ್ಮಣ ಪಾಲನ ನಿಮಿತ್ತವಾಗಿಯೂ ವರ್ಣಾಶ್ರಮ ಧರ್ಮ ರಕ್ಷಣ ನಿಮಿತ್ತವಾಗಿಯೂ ಯಾವ ಮಹಾ ವ್ರತವನ್ನು ಕೈ ಕೊಂಡಿರುವಿರೊ ಅದಕ್ಕೆ ಈಶ್ವರ ಕೃಪೆಯಿಂದ ಉದ್ಯಾಪನೆ ನೆರವೇರಲೆಂದು ಸರ್ವದಾ ನಾನು ನಿಮಗೆ ಆಶೀರ್ವಾದವನ್ನು ಮಾಡುತ್ತಿರುವೆನು" ಎಂದು ಹೇಳಿದನು. ಶಿವಾಜಿ ಅವನಿಗೆ ಬಹು ಮೂಲ್ಯ ವಸ್ತ್ರಾದಿಗಳನ್ನು ಕೊಟ್ಟು ಗೌರವಿಸಿ ಕಳುಹಿಸಿದನು.

ಅಫ್ಜುಲ್‌ಖಾನನ ವಧೆಯನ್ನು ಕುರಿತು ಮಹಾರಾಷ್ಟ್ರೀಯ ಲೇಖಕರು ಬರೆದಿರುವ ವಿವರಣಕ್ಕೂ ಆಂಗ್ಲೇಯ ಲೇಖಕರು ಕೊಟ್ಟಿರುವ ವಿವರಣಕ್ಕೂ ವಿಶೇಷ ಪ್ರಭೇದವಿರುವುದು. ಆಂಗ್ಲೇಯ ಭಾಷೆಯಲ್ಲಿ ರಚಿತವಾಗಿರುವ ಮಹಾರಾಷ್ಟ್ರ ದೇಶದ ಇತಿಹಾಸಗಳೊಳಗೆ ಕ್ಯಾಪ್ಟನ್ ಜೇಮ್ಸ್ ಗ್ರಾಂಟ್ ಡಫ್ ಎಂಬಾತನಿಂದ ಪ್ರಣೀತವಾದುದೇ ವಿಸ್ತಾರವಾಗಿಯೂ ಬಹು ಜನ ಪರಿಚಿತವಾಗಿಯೂ ಇರುವುದು. ಮಿಕ್ಕ ಆಂಗ್ಲೇಯ ಲೇಖಕರೆಲ್ಲರೂ ಪ್ರಾಯಶಃ ಈ ವಿಷಯವನ್ನು ಕುರಿತು ಆತನ ಗ್ರಂಥವನ್ನು ಅವಲಂಬಿಸಿಯೇ ಬರೆದಿರುವರು. ಪರಂತು, ಭಾರತ ವರ್ಷದ ಇತರ ಪ್ರದೇಶಗಳಂತೆ, ಮಹಾರಾಷ್ಟ್ರ ದೇಶದಲ್ಲಿ ಇತಿಹಾಸಕ್ಕೆ ಅಷ್ಟು ಕೊರತೆಯಿಲ್ಲ. ಪ್ರಾಚೀನ ಮಹಾರಾಷ್ಟ್ರೀಯರು ತಮ್ಮ ದೇಶದ ಇತಿಹಾಸವನ್ನು ವಿಸ್ತಾರವಾಗಿ ಬರೆದಿಟ್ಟಿರುವರು. ಅವರಿಂದ ರಚಿತವಾಗಿರುವ ಇತಿಹಾಸ ಗ್ರಂಥಗಳು ಬಖರ್ ಎಂದು ಮಹಾರಾಷ್ಟ್ರದಲ್ಲಿ ಪ್ರಸಿದ್ಧವಾಗಿರುವುವು. ಗ್ರಾಂಟ್ ಡಫ್ ಎಂಬಾತನೂ ಆತನನ್ನು ಅನುಸರಿಸಿರುವ ಇತರ ಆಂಗ್ಲೇಯ ಲೇಖಕರೂ ಶಿವಾ

ಜಿಯ ಮೇಲೆ 'ಘೋರ ವಿಶ್ವಾಸ ಘಾತುಕ', 'ಅತಿಶಯ ಪಾಷಂಡ' ಮೊದಲಾದ ವಿಶೇಷಣಗಳನ್ನು ಪ್ರಯೋಗಮಾಡಿರುವರು. ಅವರು ಹೇಳುವ ರೀತಿಯಾಗಿ, ಅಫ್ಜುಲ್‌ಖಾನನು ಸಸೈನ್ಯನಾಗಿ ಬರುತ್ತಿದ್ದುದನ್ನು ಶಿವಾಜಿ ಕಂಡು ವಿನೀತನಾಗಿ ತಾನು ಆವರೆಗೂ ಮಾಡಿದುದೆಲ್ಲ ತಪ್ಪೆಂದು ಹೇಳಿ ಕ್ಷಮಾಪಣೆಯನ್ನು ಕೇಳಿಕೊಂಡು ಶರಣಾಗತನಾಗುವ ಇಚ್ಛೆಯನ್ನು ತೋರಿಸಿದನು. ತರುವಾಯ ಪುನಃ ಪುನಃ ಸಂಧಿ ಸೂಚಕ ಪ್ರಸ್ತಾವವನ್ನು ಹೇಳಿಕಳುಹಿಸಿದನು. ಅಫ್ಜುಲ್‌ಖಾನನು ಸ್ವಭಾವ ಸಿದ್ಧವಾಗಿ ಡಾಂಭಿಕನು, ಸರಳ ಹೃದಯನು; ಆದುದರಿಂದ ಶಿವಾಜಿಯನ್ನು ಅವನು ತೃಣವಾಗೆಣಿಸಿ ಅವನನ್ನು ನೋಡಲೊಪ್ಪಿದನು. ಹಾಗೆ ಒಪ್ಪುವುದಕ್ಕೆ ಕಾರಣವೇನೆಂದರೆ, ಜಾವಲಿಯು ಅರಣ್ಯಮಯವಾದ ಪರ್ವತ ಪ್ರದೇಶವು, ಸೈನ್ಯದೊಡನೆ ವರ್ಷಾಕಾಲದಲ್ಲಿ ಅದನ್ನು ಭೇದಿಸಿಕೊಂಡು ಪ್ರತಾಪಗಡಕ್ಕೆ ಹೋಗುವುದು ಕಷ್ಟವೆಂಬುದು ಅಫ್ಜುಲ್‌ಖಾನನಿಗೆ ಚೆನ್ನಾಗಿ ತಿಳಿದಿದ್ದಿತು; ಈ ಕಾರಣದಿಂದ ಶಿವಾಜಿಯ ಸಂಧಿ ಪ್ರಸ್ತಾವಕ್ಕೆ ತನ್ನ ಸಮ್ಮತಿಯನ್ನು ತಿಳಿಸುವ ನಿಮಿತ್ತವಾಗಿ ಗೋಪೀನಾಥನೆಂಬ ಒಬ್ಬ ಬ್ರಾಹ್ಮಣನನ್ನು ದೂತನನ್ನಾಗಿ ಶಿವಾಜಿಯ ಬಳಿಗೆ ಕಳುಹಿಸಿದನು; ಶಿವಾಜಿಯ ಕಾಪಟ್ಯವನ್ನರಿಯದೆ ಅವನನ್ನು ನೋಡುವುದಕ್ಕೆ ಬಳಿಕ ತಾನೂ ಹೋದನು. ಆ ಸಮಯದಲ್ಲಿ ಶಿವಾಜಿಯು ಅಫ್ಜುಲ್‌ಖಾನನನ್ನು ಆಲಿಂಗನಮಾಡಿಕೊಳ್ಳುವಂತೆ ನಟಿಸಿ ತಾನು ಗುಪ್ತವಾಗಿಟ್ಟುಕೊಂಡಿದ್ದ ಆಯುಧಗಳಿಂದ ಅವನನ್ನು ಕೊಂದನು. ಇದು ಕಾಫಿಖಾನನ ಮತ್ತು ಆಂಗ್ಲೇಯ ಲೇಖಕರ ಹೇಳಿಕೆ.

ಪಕ್ಷಾಂತರದಲ್ಲಾದರೋ, ಅಫ್ಜುಲ್‌ಖಾನನೇ ವಿಶ್ವಾಸ ಘಾತುಕನೆಂದು ಮಹಾರಾಷ್ಟ್ರೀಯ ಲೇಖಕರು ಅವನನ್ನು ನಿಂದಿಸುವರು. ಅವರು ಹೇಳುವ ರೀತಿಯಾಗಿ—ಹಿಂದೆ ಅಫ್ಜುಲ್‌ಖಾನನು ಶಿವಾಜಿಯ ಅಣ್ಣನನ್ನು ಮೋಸದಿಂದ ಕೊಲ್ಲಿಸಿದನು, ಹಾಗೆಯೇ ಈಗ ಶಿವಾಜಿಯನ್ನು ನಂಬಿಸಿ ಕೊಲ್ಲಬಂದನು. ಅವನು ರಾಜ ಸಭೆಯಲ್ಲಿ ನಿಂತು, "ಶಿವಾಜಿ ತುಚ್ಛನು, ಮೇರೆ ಡರ್‌ಸೆ ಶಿವ್ವಾ ಬಿಲ್ಲೀ ಹೋತಾ ಹಯ್"

ಎಂದು ಹೇಳಿ, ಅವನನ್ನು ಹಿಡಿದು ಬಿಜಾಪುರದ ಸಿಂಹಾಸನದ ಅಡಿಯಲ್ಲಿ ತಂದುಹಾಕುವೆನೆಂದು ಬಾಯಿಗೆ ಬಂದಂತೆಲ್ಲ ಹರಟಿದನು. ಅದನ್ನು ಕೇಳಿ ರಾಣಿಯು ಪ್ರೀತಳಾಗಿ, ಅವನನ್ನು ಹಿಡಿದು ತಂದರೆ ಅವನ ರಾಜ್ಯಕ್ಕೆಲ್ಲ ಖಾನನನ್ನು ಸುಬೇದಾರನನ್ನಾಗಿ ನೇಮಿಸುವ ಹಾಗೆ ಮಾತು ಕೊಟ್ಟಳು. ಆ ಬಳಿಕ ಖಾನನು ಸಕಲ ಸಂಭಾರಗಳಿಂದ ಕೂಡಿದವ ನಾಗಿ ಮೊದಲು ತುಳಜಾಪುರಕ್ಕೆ ಹೋಗಿ ಭವಾನಿಯ ಗಂಡಕೀ ಶಿಲಾ ಮೂರ್ತಿಯನ್ನು ಪುಡಿ ಪುಡಿ ಮಾಡಿ ಅಲ್ಲಿಂದ ಪಂಡರಾಪುರಕ್ಕೆ ಹೋಗಿ ದೇವಾಲಯಗಳನ್ನು ಹಾಳುಮಾಡಿ, ಅಲ್ಲಿಂದ ಮುಂದೆ ರಾಯಗಡಕ್ಕೆ ಹೋಗುತ್ತಿದ್ದನು; ಅಷ್ಟರೊಳಗೆ ಶಿವಾಜಿಯು ಪ್ರತಾಪಗಡಕ್ಕೆ ಹೋದ ನೆಂಬ ವರ್ತಮಾನವನ್ನು ಕೇಳಿ ಪ್ರತಾಪಗಡದ ಕಡೆಗೆ ತಿರುಗಿ ದಾರಿ ಯಲ್ಲಿ ಸಿಕ್ಕಿದ ವಾಯಿಯೆಂಬ ಸ್ಥಳದಲ್ಲಿ ಕೆಲವು ದಿವಸಗಳು ನಿಂತನು; ಆಗ ಅವನು ಪ್ರತಾಪಗಡದ ದುರ್ಗಮತೆ, ಮಾರ್ಗ ಕಷ್ಟಗಳು ಮೊದ ಲಾದ ವಿಷಯಗಳನ್ನು ಚಿಂತಿಸಿ, "ಶಿವಾಜಿ ಬಡಾ ಹರಾಮಖೋರ್ ಹಯ್, ಉಸ್ಕಿ ಕರಾಮತ್ ಔರ್ ಹಿಕ್ಮತ್ ಇನ್ಷಾ ಅಲ್ಲಾಹುತ್ ಅಲ್ಲಾ ಜಾಂತಾ ಹಯ್" ಎಂದು ಹೇಳಿ ಜಾವಲಿ ಅತಿ ದುರ್ಗವು ಸ್ಥಾನವು, ಆ ಪ್ರದೇಶದ ಘೋರಾರಣ್ಯಕ್ಕೆ ಬಂದು ಅವನು ಅಲ್ಲಿ ಯುದ್ಧಮಾಡುವ ಯೋಚನೆ ಮಾಡಿರುವನು; ಏನಾದರೂ ಮಾಡಿ ಅವನು ಪ್ರತಾಪಗಡ ವನ್ನು ಬಿಟ್ಟು ಹೊರಗೆ ಬರುವ ಹಾಗೆ ಮಾಡಿದರೆ ಅವನ ಬಳಿಗೆ ಹೋಗಿ ಕಾರ್ಯವನ್ನು ಸಾಧಿಸುವೆನು ಎಂದು ಆಲೋಚಿಸಿ ಗೋಪೀನಾಥ ಪಂತ ನನ್ನು ಕರೆಯಿಸಿ ಶಿವಾಜಿಯೊಡನೆ ಆಡತಕ್ಕ ಮರೆಮಾತುಗಳನ್ನೆಲ್ಲ ಹೇಳಿ ಕೊಟ್ಟು ಅವನನ್ನು ಕಳುಹಿಸಿದನು. ಅನಂತರ ಶಿವಾಜಿಯು ಅಫ್ಜುಲ್ ಖಾನನನ್ನು ನೋಡುವುದಕ್ಕೆ ಹೋದನು. ಆ ಸಮಯದಲ್ಲಿ ಮೊದಲು ಶಿವಾಜಿಯೇ ವಾಗ್‌ನಖದಿಂದ ಅಫ್ಜುಲ್‌ಖಾನನನ್ನು ತಿವಿದನು—ಎಂದು ಮುಸಲ್ಮಾನ್ ಇತಿಹಾಸ ಲೇಖಕರು ಹೇಳಿ ಅವನನ್ನು ದ್ರೋಹಿಯೆನ್ನು ವರು. ಮಹಾರಾಷ್ಟ್ರೀಯರಾದ ಐತಿಹಾಸಿಕರಾದರೋ, ಅಸುರಾ ಕೃತಿಯುಳ್ಳ ಅಫ್ಜುಲ್‌ಖಾನನೇ ಶಿವಾಜಿಯ ಕೊರಳಿಗೆ ಕೈಹಾಕಿ ಅವ ನನ್ನು ಹತ್ತಿರಕ್ಕೆಳದುಕೊಂಡು ಕಂಕುಳೊಳಗೆ ಇರುಕಿಸಿಕೊಂಡನೆಂದೂ

ಆಗ ಶಿವಾಜಿಯು ಅಫ್ಜುಲ್‌ಖಾನನನ್ನು ತಿವಿದನೆಂದೂ ಹೇಳುವರು. ಈ ಎರಡು ಪರಸ್ಪರ ವಿರುದ್ಧ ವಿವರಣಗಳಲ್ಲಿ ಯಾವುದು ಎಷ್ಟು ಮಟ್ಟಿಗೆ ಸತ್ಯವೊ ನಿರ್ಣಯಿಸುವುದು ಸುಲಭವಲ್ಲ. ಆದರೂ ಶಿವಾಜಿಯ ಶತ್ರು ಪಕ್ಷದ ಇತಿಹಾಸ ಲೇಖಕರೂ, ಅವರನ್ನನುಸರಿಸಿ ಅಫ್ಜುಲ್‌ಖಾನನ ವಧೆಯನ್ನು ಕುರಿತು ಬರೆದಿರುವ ಆಂಗ್ಲೇಯ ಇತಿಹಾಸ ಲೇಖಕರೂ ಹೇಳುವಂತೆ, ಅಫ್ಜುಲ್‌ಖಾನನು ಸರಳನೂ ನಿರ್ದೋಷಿಯೂ ಎಂದೂ ಶಿವಾಜಿಯೇ ಅಂತರಂಗದಲ್ಲಿ ಶಸ್ತ್ರ ಸಂಧಾನವನ್ನೂ ಬಹಿರಂಗದಲ್ಲಿ ವಿನಯ ಸಂಧಾನವನ್ನೂ ಮಾಡುತ್ತ ಮೊದಲಿಂದ ಕಡೆಯ ವರೆಗೂ ದ್ರೋಹ ವನ್ನಾಚರಿಸಿ ಶತ್ರುವನ್ನು ನಿಗ್ರಹಿಸಿದನೆಂದೂ ಹೇಳಿ ಸರ್ವಾಪರಾಧ ವನ್ನೂ ಶಿವಾಜಿಯ ತಲೆಯ ಮೇಲೆ ಹೊರಿಸುವುದು ನ್ಯಾಯವಲ್ಲ. ಆ ಕಾಲದಲ್ಲಿ ಶತ್ರುವನ್ನು ನಿಗ್ರಹಿಸುವುದಕ್ಕೆ ದ್ರೋಹಾಚರಣೆಯು ಸರ್ವ ಸಾಮಾನ್ಯವಾದ ಉಪಾಯವಾಗಿದ್ದಿತು. ಇದು ಇಬ್ಬರಿಗೂ ತಿಳಿದ ವಿಷಯವೇ. ಈ ವಿಧವಾಗಿ ಮೋಸಹೋಗದಿರುವುದಕ್ಕೆ ಇಬ್ಬರೂ ಪ್ರಯತ್ನಮಾಡುತ್ತಿದ್ದರು. ಇಬ್ಬರ ಸೈನ್ಯ ಸಂಖ್ಯೆಯ ತಾರತಮ್ಯ, ಜಾವಲಿ ಪ್ರದೇಶದ ದುರ್ಗಮತೆ, ಅಫ್ಜುಲ್‌ಖಾನನ ಸೇನೆಯು ಆ ಮಾರ್ಗವಾಗಿ ಹೋಗುವುದಕ್ಕಿದ್ದ ಅಡಚಣೆಗಳು, ಇಬ್ಬರ ಆಕೃತಿ ಮತ್ತು ಬಲಾಬಲ, ಅಫ್ಜುಲ್‌ಖಾನನು ರಾಜ ಸಭೆಯಲ್ಲಿ ಗರ್ವಸ್ಫೀತ ನಾಗಿ ಮಾಡಿದ ಪ್ರತಿಜ್ಞೆ, ಬಿಜಾಪುರದ ರಾಣಿಯು ಅವನಿಗಿಟ್ಟ ಆಸೆ, ಖಾನನ ಪೂರ್ವ ಚರಿತ್ರೆ, ಆ ಕಾಲದ ರೀತಿ ನೀತಿಗಳು, ಉನ್ನತ ಪದವಿ ಯಲ್ಲಿದ್ದವರು ತಮ್ಮ ಅಭೀಷ್ಟವನ್ನು ಸಾಧಿಸುವುದಕ್ಕೆ ಮಾಡುತ್ತಿದ್ದ ಘಾತುಕ ಕೃತ್ಯಗಳು—ಇವೇ ಮೊದಲಾದ ವಿಷಯಗಳನ್ನು ರಾಗ ದ್ವೇಷ ಗಳನ್ನು ಬಿಟ್ಟು ಪರ್ಯಾಲೋಚಿಸಿದಲ್ಲಿ, ಅಫ್ಜುಲ್‌ಖಾನನು ಸರಳನೆಂದೂ ಕಾಪಟ್ಯವನ್ನು ಕಂಡವನಲ್ಲವೆಂದೂ ಅವನು ಧರ್ಮಯುದ್ಧಕ್ಕೇ ಹೋದ ನೆಂದೂ ಹೇಳುವುದು ಅತಿ ಸಾಹಸ ಕಾರ್ಯವಾಗಿರುವುದು. ಇಬ್ಬರೂ ಒಬ್ಬರಿಗೊಬ್ಬರು ಮಾಯಾಜಾಲವನ್ನೊಡ್ಡುತ್ತಿದ್ದರು. ಪರಂತು, ಶಿವಾ ಜಿಗೆ ಮೈಯೆಲ್ಲ ಕಣ್ಣು; ಅವನು ಸುಷುಪ್ತಿಯಲ್ಲೂ ಜಾಗ್ರತನು. ಅಫ್ಜುಲ್‌ಖಾನನಾದರೋ ಅಹಂಕಾರಿ, ದ್ರೋಹ ಚಿಂತನೆ ಮಾಡು

ತ್ತಿದ್ದರೂ ಹೆಮ್ಮೆಯಿಂದ ಮೈ ಮರೆತಿರುವವನು. ಕಾಲ ಗತಿ ಹೇಗಿರು ವುದೋ ಎಂದು ಒಬ್ಬನು ಎಲ್ಲಕ್ಕೂ ಅಣಿಯಾಗಿ ಹೋದನು; ಇನ್ನೊ ಬ್ಬನು ತನ್ನ ಮುಂದೆ ಯಾರೆಂದು ದುಡುಕಿ ಶತ್ರುವಿನ ಬಲೆಗೆ ಬಿದ್ದನು. ಅಷ್ಟೇ ಹೊರತು ಶಿವಾಜಿಯು ಕಪಟಿಯೂ ನಿಂದ್ಯನೂ, ಅಫ್ಜುಲ್‌ಖಾನನು ಮಾತ್ರ ಸರಳನೂ ಅಭಿವಂದ್ಯನೂ ಎನ್ನುವುದು ಅಸಂಗತವು. ಮೋಸ ಹೋದವನೇ ಸತ್ಯವಂತನೆಂಬುದು ಸ್ವತಃಸಿದ್ಧವಲ್ಲ.

ಅನಂತರ ಶಿವಾಜಿಯು ಪನ್ಹಾಲ, ಪವನಗಡ ಎಂಬ ದುರ್ಗಗಳನ್ನು ಜಯಿಸುವ ನಿಮಿತ್ತವಾಗಿ ಅಣ್ಣಾಜಿದತ್ತನನ್ನು ಕಳುಹಿಸಿದನು. ಅವನು ಸ್ವಲ್ಪ ಕಾಲದಲ್ಲೇ ಆ ಎರಡು ದುರ್ಗಗಳನ್ನೂ ಗೆದ್ದನು. ಶಿವಾ ಜಿಯು ತಾನೇ ಸೇನೆಯೊಡನೆ ಹೊರಟು ವಸಂತಗಡವೆಂಬ ದುರ್ಗವನ್ನು ಜಯಿಸಿದನು. ಈ ರೀತಿಯಾಗಿ ಶಿವಾಜಿ ಒಂದೊಂದು ದುರ್ಗವನ್ನಾಗಿ, ಒಂದೊಂದು ಊರನ್ನಾಗಿ, ಕೈಸೇರಿಸಿಕೊಳ್ಳುತ್ತ ಕೃಷ್ಣಾ ನದಿಯ ವರೆಗೂ ರಾಜ್ಯವನ್ನು ವಿಸ್ತರಿಸಿದನು. ಅವನ ದಿಗ್ವಿಜಯದಿಂದ ಮುಸ ಲ್ಮಾನರ ಹೃದಯದಲ್ಲಿ ನೈರಾಶ್ಯವು ಹುಟ್ಟಿತು. ಬಿಜಾಪುರದ ಸುಲ್ತಾ ನನು ಶಿವಾಜಿಯನ್ನು ಮುರಿವುದಕ್ಕಾಗಿ ಮತ್ತೊಂದು ಸೇನೆಯನ್ನು ಕಳುಹಿಸಿದನು. ಶಿವಾಜಿ ಆ ಸೇನೆಯನ್ನು ಬಡಿದು ಬಿಜಾಪುರದ ಬಾಗಿಲಿನ ವರೆಗೂ ಅದನ್ನು ತರುಬಿಕೊಂಡು ಹೋದನು. ಅದೇ ಸಮಯದಲ್ಲಿ ಅವನ ಸೇನಾ ನಾಯಕರು ರಾಂಗಣ, ಖೇಳನ (ವಿಶಾಲ ಗಡ), ರಾಜಾಪುರ ಮತ್ತು ದಾಬೋಲ್ ಎಂಬ ದುರ್ಗಗಳನ್ನು ಜಯಿಸಿ ದರು. ಪನ್ಹಾಲವೆಂಬ ದುರ್ಗದಲ್ಲಿ ಶಿವಾಜಿಯೂ ಅವನ ಸೇನೆಯೂ ವಿಶ್ರಮಿಸಿಕೊಳ್ಳುತ್ತಿರುವಾಗ ಬಿಜಾಪುರದಿಂದ ಮತ್ತೊಂದು ಸೇನೆ ಬಂದು ಅವರನ್ನು ಮುತ್ತಿತು. ಶಿವಾಜಿ ಉಪಾಯದಿಂದ ತಪ್ಪಿಸಿಕೊಂಡು ರಾಂಗಣವೆಂಬ ದುರ್ಗಕ್ಕೆ ಹೋದನು. ಶತ್ರುಗಳು ಬೆನ್ನಹತ್ತಿದರು. ಆದರೆ ವೀರನಾದ ಬಾಜಿ ಪರಭೂ ಎಂಬವನು ಸಾವಿರ ಮಂದಿ ಮಾವಳಿಗಳಿಂದ ಕೂಡಿ ಒಂದು ಕಣಿವೆಯ ಬಳಿ ಅವರನ್ನು ಅಡ್ಡಗಟ್ಟಿ ಒಂಬತ್ತು ಗಂಟೆಯ ಕಾಲ ಅವರ ಸಂಗಡ ಯುದ್ಧಮಾಡಿದನು. ಮಾವಳಿಗಳೆಲ್ಲರೂ ಹತ ರಾಗುತ ಬಂದರು. ಆದರೂ ಬಿಡದೆ ಆ ಶೂರನು ಶಿವಾಜಿಯು ಸುರಕ್ಷಿತ

ವಾಗಿ ರಾಂಗಣವೆಂಬ ದುರ್ಗವನ್ನು ಸೇರಿದನೆಂದು ಫಿರಂಗಿಯ ಶಬ್ದ ವನ್ನು ಕೇಳುವ ವರೆಗೂ ಶತ್ರುಗಳ ಸಂಗಡ ಹೋರಾಡಿ ಕಡೆಗೆ ಯುದ್ಧ ದಲ್ಲೇ ಪ್ರಾಣವನ್ನು ಬಿಟ್ಟನು. ನಾಲ್ಕನೆಯ ಸಾರಿ ಸುಲ್ತಾನನೇ ಶಿವಾಜಿಯ ಮೇಲೆ ದಂಡೆತ್ತಿಹೋದನು. ಯುದ್ಧವು ವರ್ಷದ ಮೇಲೆ ನಡೆಯಿತು. ಆದರೂ ಸುಲ್ತಾನನ ಯತ್ನವು ವಿಶೇಷ ಫಲಕಾರಿಯಾಗ ಲಿಲ್ಲ. ಕಡೆಗೆ ಕ್ರಿ. ಶ. ೧೬೬೨ನೆಯ ವರ್ಷದಲ್ಲಿ ಸುಲ್ತಾನನು ಅನನ್ಯೋ ಪಾಯನಾಗಿ ಷಾಹಜಿಯನ್ನು ಶಿವಾಜಿಯ ಬಳಿಗೆ ಕಳುಹಿಸಿ ಸಂಧಿ ಪ್ರಸ್ತಾವವನ್ನು ಮಾಡಿಸಲುದ್ಯುಕ್ತನಾದನು. ಈ ವಿಷಯವನ್ನು ಮತ್ತೊಂದು ಪ್ರಕರಣದಲ್ಲಿ ವಿವರವಾಗಿ ಹೇಳುವೆವು.

ಈ ಘೋರ ಯುದ್ಧ ಕಾಲದಲ್ಲಿ ಶಿವಾಜಿಯು ಪ್ರತಾಪಗಡ ದುರ್ಗ ದಲ್ಲಿ ಭವಾನಿಯ ಪ್ರತಿಮೆಯನ್ನು ಪ್ರತಿಷ್ಠೆಮಾಡಿದನು. ವರ್ತಮಾನ ಕಾಲದಲ್ಲಿ ಇದೊಂದು ತೀರ್ಥಸ್ಥಳವಾಗಿ ಅನೇಕ ಯಾತ್ರಿಕರು ಭಗವ ತಿಯ ದರ್ಶನ ನಿಮಿತ್ತವಾಗಿ ಅಲ್ಲಿಗೆ ಹೋಗುವರು. ಆ ಸಮಯದಲ್ಲೇ ಸೂಕ್ಷ್ಮದರ್ಶಿಯಾದ ಶಿವಾಜಿಯು ಪೋರ್ಚುಗೀಸರು ನೌಬಲವುಳ್ಳವ ರಾಗಿರುವುದನ್ನು ಕಂಡು ಆ ಬಲವು ತನಗಿಲ್ಲದಿರುವುದರಿಂದ ಅವರ ಸಂಗಡ ಯುದ್ಧಮಾಡಬೇಕಾಗಿ ಬಂದಲ್ಲಿ ತನ್ನ ರಾಜ್ಯವನ್ನು ರಕ್ಷಿಸಿ ಕೊಳ್ಳುವುದು ಕಷ್ಟವಾಗುವುದೆಂದು ತಿಳಿದು ನೌಬಲವನ್ನು ಸ್ಥಾಪಿ ಸಲು ಯತ್ನಿಸಿದನು. ಅವನ ರಾಜ್ಯದಲ್ಲಿ ಅದಕ್ಕೆ ತಕ್ಕ ಸಾಮಗ್ರಿಗಳೂ ಇಲ್ಲದಿರಲಿಲ್ಲ. ಕೊಂಕಣ ದೇಶದವರು ಉದ್ಯಮಶೀಲರು, ಸಮುದ್ರಯಾನ ಪ್ರಿಯರು; ನಾವೆಯನ್ನು ನಡೆಯಿಸುವುದರಲ್ಲಿ ನಿಪುಣರು, ಸಾಹಸಿ ಗಳು; ಅವರಿಗೆ ಶಿಕ್ಷಣವಾದರೆ ಯಾವ ನೌಸೇನೆಗೂ ಅವರು ಕಡಿಮೆ ಯಾಗಲಾರರೆಂದು ಶಿವಾಜಿ ಅವರನ್ನು ಸೇರಿಸಿ ಒಂದು ನೌಸೇನೆ ಯನ್ನು ಕಲ್ಪಿಸಿದನು; ಪ್ರಬಲ ಪ್ರಯತ್ನಗಳನ್ನು ಮಾಡಿ ದೊಡ್ಡ ದೊಡ್ಡ ಹಡಗುಗಳನ್ನು ಕಟ್ಟಿಸಿದನು; ಕೆಲವು ದಿನಗಳೊಳಗೆ ಆ ಹಡಗು ಗಳಲ್ಲಿ ಯುದ್ಧೋಪಯುಕ್ತವಾದ ಸಾಮಗ್ರಿಗಳನ್ನು ತಂದು ತುಂಬಿ ದನು. ಕೊಲಾಬವೆಂಬ ಸ್ಥಳವು ನೌಸೇನೆಗೆ ನೆಲೆಯಾಯಿತು. ಆಗ ಹಿಂದೂ ದೇಶದ ವಾಣಿಜ್ಯದಲ್ಲಿ ಪ್ರಬಲರಾಗಿದ್ದ ಪೋರ್ಚುಗೀಸರು

ಶಿವಾಜಿಗೆ ಫಿರಂಗಿ ಮದ್ದು ಗುಂಡು ಮೊದಲಾದುವನ್ನು ಹವಣಿಸಿ ಕೊಡುವ ಹಾಗೆ ಒಪ್ಪಿದರು. ಈ ರೀತಿಯಾಗಿ ಸುಚತುರನೂ ಸಾಹಸಿಯೂ ಆದ ಶಿವಾಜಿಯು ಭಾರತ ಮಹಾಸಾಗರದ ವಕ್ಷಸ್ಥಲದಲ್ಲೀ ತನ್ನ ವಿಜಯ ವೈಜಯಂತಿಯನ್ನು ನಟ್ಟನು.



## ಎಂಟನೆಯ ಪ್ರಕರಣ

---

## ರಾಮದಾಸ ಸ್ವಾಮಿ.

ದಾದಾಜಿ ಕೋಂಡದೇವನ ಉಪದೇಶ ಪ್ರಭಾವದಿಂದ ಶಿವಾಜಿ ಬಾಲ್ಯದಿಂದಲೂ ಈಶ್ವರ ಪರಾಯಣನಾಗಿದ್ದನು. ಒಂದು ದಿನ ಅವನು ಯಾವುದೋ ಕೆಲಸಕ್ಕಾಗಿ ಕೊಂಕಣದಲ್ಲಿರುವ ಮಹಾಡೆಂಬ ಊರಿಗೆ ಹೋಗಲು, ಅಲ್ಲಿ ವಂದನೀಯ ಚರಿತ್ರನಾದ ಸಂನ್ಯಾಸಿಯೊಬ್ಬನು ಧ್ರುವೋಪಾಖ್ಯಾನವನ್ನು ಹೇಳುತ್ತಿದ್ದನು. ಸಮೀಪದಲ್ಲೆಲ್ಲಿ ಪುಣ್ಯಕಥೆಗಳು ನಡೆಯುತ್ತಿದ್ದರೂ ಶಿವಾಜಿ ಮೊದಲು ಅಲ್ಲಿಗೆ ಹೋಗಿ ಪುರಾಣ ಶ್ರವಣವಾದ ಒಳಿಕ ಇತರ ಕಾರ್ಯಗಳಿಗೆ ಹೋಗುವ ನಿಯಮವನ್ನು ಮಾಡಿಕೊಂಡಿದ್ದನು. ಅದಕ್ಕನುಸಾರವಾಗಿ ಆ ಸಂನ್ಯಾಸಿ ಹೇಳುತ್ತಿದ್ದ ಕಥೆಯನ್ನು ಶಿವಾಜಿ ಕೇಳಹೋದನು. ಸಂನ್ಯಾಸಿಯು ಧ್ರುವಚರಿತ್ರೆಯನ್ನು ಹೇಳುತ್ತ, ನಾರದ ಮುನಿಯ ಧ್ರುವೋಪದೇಶವನ್ನು ಕುರಿತು ವಿಶೇಷವಾಗಿ ವ್ಯಾಖ್ಯಾನ ಮಾಡಿದನು. ವ್ಯಾಖ್ಯಾನ ಮಾಡುವಲ್ಲಿ, ಮನುಷ್ಯನು ಯಾವ ಕಾರ್ಯವನ್ನು ಮಾಡಿದರೂ ಗುರುವಿರಬೇಕು, ಅದರೊಳಗೂ ಈಶ್ವರ ತತ್ತ್ವವು ಗುರುವಿನ ಕೃಪೆಯಿಲ್ಲದಿದ್ದರೆ ಎಂದಿಗೂ ತಿಳಿಯತಕ್ಕುದಲ್ಲ ಎಂದು ಹೇಳಿದನು. ಆ ಮಾತು ಶಿವಾಜಿಯ ಹೃದಯದಲ್ಲಿ ನಾಟಿತು. ತರುವಾಯ ಯಾವ ಮಹಾ ಪುರುಷನನ್ನು ಶಿವಾಜಿ ಗುರುಸ್ಥಾನದಲ್ಲಿಟ್ಟು ಪೂಜಿಸಿದನೋ, ಯಾವ ಮಹಾ ಪುರುಷನ ಉಪದೇಶದಲ್ಲಿ ದೀಕ್ಷಿತನಾಗಿ ಪೃಥ್ವಿಯಲ್ಲಿ ಅವನು ಅದ್ವಿತೀಯನೆನಿಸಿಕೊಂಡನೋ ಆ ಮಹಾ ಪುರುಷನ ಹೆಸರು ರಾಮದಾಸ ಸ್ವಾಮಿ. ರಾಮದಾಸನು ಒಂದು ಸ್ಥಳದಲ್ಲಿರುವವನಲ್ಲ; ಯಾವಾಗಲೂ ಶಿಷ್ಯರೊಡನೆ ಊರಿಂದೂರಿಗೆ ಹೋಗುತ್ತ, ವರ್ಣಾಶ್ರಮ ಧರ್ಮ ಪರಿಪಾಲನೆ ಮಾಡುವ ನಿಮಿತ್ತವಾಗಿ ವರ್ಣ ಚತುಷ್ಟಯದವರಿಗೂ ಪ್ರೀತಿಯಿಂದ ಉಪದೇಶಮಾಡುತ್ತಿದ್ದನು. ಆ ಮಹಾನುಭಾವನ ಪ್ರೀತಿಯು ಮನುಷ್ಯ ಜಾತಿಯೊಂದರಲ್ಲೇ ಅಡಕವಾಗಿರಲಿಲ್ಲ. ಸರ್ವ ಭೂತಗಳೂ

ಅವನ ಪ್ರೀತಿಗೆ ಪಾತ್ರವಾಗಿದ್ದುವು. ಕೌಪೀನ ಧಾರಿಯಾಗಿ ಜಟೆ ಯನ್ನು ಧರಿಸಿ, ಹಸ್ತದಲ್ಲಿ ಕಮಂಡಲುವನ್ನು ಹಿಡಿದು, ಹೊಂಬಣ್ಣ ವುಳ್ಳ ದೇಹದಿಂದಲೂ ಉನ್ನತ ಲಲಾಟದಿಂದಲೂ ವಿಶಾಲ ನೇತ್ರ ಗಳಿಂದಲೂ ಒಪ್ಪುತ್ತಿದ್ದ ಆ ಸೌಮ್ಯ ಮೂರ್ತಿಯ ದರ್ಶನದಿಂದ ಪಾಷಾಣ ಹೃದಯದಲ್ಲೂ ಭಕ್ತಿ ರಸವು ಹುಟ್ಟುವುದು. ಅವನು ಗ್ರಾಮೈಕ ರಾತ್ರನಾಗಿ ಸಂಚರಿಸುತ್ತಿದ್ದುದರಿಂದ ಶಿವಾಜಿ ಅವನನ್ನು ಬಹು ಕಾಲ ಹುಡುಕಬೇಕಾಯಿತು. ಕಡೆಗೆ ಅವನ ದರ್ಶನವಾಯಿತು. ಆಗ ಶಿವಾಜಿ ತನ್ನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಬೇಕೆಂದು ಸಾಷ್ಟಾಂಗ ಪ್ರಣಾಮ ಪೂರ್ವಕ ವಿನಯದಿಂದ ಅವನನ್ನು ಬಹು ದಿನ ಬೇಡಿ ಕೊಂಡನು. ಶಾಲಿವಾಹನ ಶಕ ೧೫೭೧ನೆಯ ಸಂವತ್ಸರದಲ್ಲಿ— ಎಂದರೆ, ವಿರೋಧಿನಾಮ ಸಂವತ್ಸರದ ವೈಶಾಖ ಶುದ್ಧ ನವಮಿಯಲ್ಲಿ ಶಿವಾಜಿ ಮಂತ್ರೋಪದೇಶ ಪೂರ್ವಕವಾಗಿ ದೀಕ್ಷಿತನಾದನು. ರಾಮದಾಸ ಸ್ವಾಮಿಯ ಅಲ್ಪಾಕ್ಷರ ವಾಕ್ಯದಿಂದ ಶಿವಾಜಿ ತನ್ನ ಕರ್ತವ್ಯ ಕರ್ಮ ಗಳನ್ನೆಲ್ಲ ಕರತಲಾಮಲಕವಾಗಿ ತಿಳಿದನು. ಸ್ವಾರ್ಥವನ್ನೆಣಿಸದೆ ಕರ್ತವ್ಯವನ್ನು ಮಾಡುವುದೇ ಪರಮ ಧರ್ಮವು, ಅದೇ ಸ್ವರ್ಗ ಜನಕವು, ಎಂದು ಅವನು ತಿಳಿದನು ; ಯಾವನು ಸ್ವಾರ್ಥ ಹಾನಿಯಾಗುವು ದೆಂದೆಣಿಸಿ ಕರ್ತವ್ಯವನ್ನು ಬಿಡುವನೋ ಅಥವಾ ಉದಾಸೀನನಾಗು ವನೋ ಅವನೇ ಮಹಾ ಪಾಪಿ, ಅವನೇ ಸ್ವಧರ್ಮ ಸ್ವದೇಶಗಳಿಗೆ ದ್ರೋಹಿ ಎಂದು ಭಾಷಿಸಿದನು. ಸ್ವದೇಶವನ್ನೂ ಸ್ವಧರ್ಮವನ್ನೂ ರಕ್ಷಿಸುವುದು ಮನುಷ್ಯಮಾತ್ರದವನ ಕರ್ತವ್ಯವೆಂದು ಅವನ ಸಿದ್ಧಾಂತ ವಾಯಿತು.

ಬ್ರಾಹ್ಮಣಾದಿ ವರ್ಣ ಚತುಷ್ಟಯಗಳು ತಮ್ಮ ತಮ್ಮ ಕಾರ್ಯ ವನ್ನು ಅವಶ್ಯ ಕರ್ತವ್ಯವೆಂದು ಮಾಡಬೇಕು ; ಅದನ್ನು ಮಾಡದೆ ಹೋದರೆ ಪ್ರತ್ಯವಾಯವುಂಟಾಗುವುದೆಂದು ಎಂದಿನ ವರೆಗೆ ಅವರು ಭಾಷಿಸುವುದಿಲ್ಲವೋ ಅಂದಿನ ವರೆಗೆ ಅವರು ಉದ್ದೀಪಕವಾದ ವಾಕ್ಯ ಗಳನ್ನು ಬಾಯಿಂದೆಷ್ಟೋ ಆಡಿದರೂ ದೇಶಕ್ಕೆ ಬೇರೆ ಯಾವ ಬಗೆಯಲ್ಲೂ ಏಳಿಗೆಯಾಗಲಾರದು. ನೀತಿ ಶಾಸ್ತ್ರ ವಿಷಯಕವಾದ ಈ ಬಗೆಯ ಹಿತ

ವಾಕ್ಯಗಳನ್ನು ರಾಮದಾಸನು ಶಿವಾಜಿಯ ಹೃದಯದಲ್ಲಿ ದೃಢವಾಗಿ ನಟ್ಟನು; ಈ ವಿಷಯಕವಾದ ಉಪದೇಶವೊಂದೇ ಅಲ್ಲದೆ ಯೋಗ ಶಾಸ್ತ್ರ ಸಂಬಂಧವಾದ ನಾನಾ ರಹಸ್ಯಗಳನ್ನೂ ಶಿವಾಜಿಗುಪದೇಶಮಾಡಿದನು. ಯಾರ ಮೇಲ್ಪಂಕ್ತಿಯನ್ನೂ ಉಪದೇಶವನ್ನೂ ತಪ್ಪದೆ ಅನುಸರಿಸಿ ಅವನು ಕಡೆಯ ವರೆಗೂ ನಡೆದನೋ, ಯಾರ ಚರಣತಲದಲ್ಲಿ ರಾಜ್ಯೈಶ್ವರ್ಯವನ್ನೆಲ್ಲ ಅರ್ಪಿಸಿ ಕೌಪೀನ ಧಾರಿಯಾಗಿ ಭಿಕ್ಷಾಟನವನ್ನವಲಂಬಿಸುವುದಕ್ಕೂ ಸಿದ್ಧನಾದನೋ ಆ ವಂದನೀಯ ಚರಿತ್ರನಾದ ರಾಮದಾಸ ಸ್ವಾಮಿಯ ವೃತ್ತಾಂತವನ್ನು ಇಲ್ಲಿ ಸಂಕ್ಷೇಪವಾಗಿ ಹೇಳುವೆವು.

ರಾಮದಾಸನು ಗೋದಾವರೀ ತೀರದಲ್ಲಿ ಜಾಂಬವವೆಂಬ ಗ್ರಾಮದಲ್ಲಿ ಶಾಲಿವಾಹನ ಶಕ ೧೫೩೦ನೆಯ ಕೀಲಕ ಸಂವತ್ಸರದ ಚೈತ್ರ ಶುದ್ಧ ನವಮಿ ಭಾನುವಾರ ಹುಟ್ಟಿದನು. ಇವನ ತಂದೆಯ ಹೆಸರು ಸೂರ್ಯಾಜಿಪಂತನು, ತಾಯಿಯ ಹೆಸರು ರಾಣುಬಾಯಿ. ಒಂದು ದಿವಸ ಸೂರ್ಯಾಜಿಪಂತನು ಯಜ್ಞಮಾಡುತ್ತಿರುವ ಸಮಯದಲ್ಲಿ ಒಬ್ಬ ಬ್ರಾಹ್ಮಣನು ಬಂದು ರಾಣುಬಾಯಿಗೆ ಇಬ್ಬರು ಗಂಡುಮಕ್ಕಳಾಗುವರೆಂದು ವರವನ್ನು ಕೊಟ್ಟನು. ಅದಕ್ಕನುಸಾರವಾಗಿ ಅವಳಿಗೆ ಇಬ್ಬರು ಮಕ್ಕಳು ಹುಟ್ಟಿದರು. ಅವರೊಳಗೆ ಕಿರಿಯವನು ರಾಮದಾಸ ಸ್ವಾಮಿ. ತಾಯಿ ತಂದೆಗಳು ನಾಮಕರಣ ಕಾಲದಲ್ಲಿ ಅವನಿಗೆ ನಾರಾಯಣನೆಂದು ಹೆಸರಿಟ್ಟರು. ಐದನೆಯ ವರ್ಷದಲ್ಲಿ ಅವನಿಗೆ ಉಪನಯನವನ್ನು ಮಾಡಿ ವಿದ್ಯಾರಂಭಮಾಡಿಸಿದರು.

ಬಾಲಕ ನಾರಾಯಣನು ಸ್ವಾಭಾವಿಕವಾಗಿ ತೀಕ್ಷ್ಣ ಬುದ್ಧಿಯುಳ್ಳವನು. ಒಂದು ಸಾರಿ ಕಿವಿಗೆ ಬಿದ್ದುದನ್ನು ಅವನೆಂದಿಗೂ ಮರೆಯುತ್ತಿರಲಿಲ್ಲ. ಅಲ್ಪ ಕಾಲದಲ್ಲಿ ಪದ ಕ್ರಮ ಘನಾದಿ ಸಹಿತ ವೇದವನ್ನೆಲ್ಲ ಕಂಠ ಪಾಠ ಮಾಡಿದನು. ಅವನ ಏಳನೆಯ ವರ್ಷದಲ್ಲಿ ಸೂರ್ಯಾಜಿಪಂತನು ಮೃತನಾದನು. ಅಂದಿನಿಂದ ನಾರಾಯಣನು ಗೃಹಕೃತ್ಯವನ್ನು ಅಷ್ಟಿಷ್ಟು ನೋಡಿಕೊಳ್ಳುತ್ತಿದ್ದನು. ಪಾಠಶಾಲೆಯಾದ ಮೇಲೆ ಮನೆಗೆಲಸಗಳು ತೀರಿದ ಬಳಿಕ ಅವಕಾಶವು ಸಿಕ್ಕುತ್ತಲೆ ಅವನು ಗೋದಾವರಿಯ ತಟದಲ್ಲಾದರೂ ಸಮೀಪದಲ್ಲೊಂದು ನಿರ್ಜನ ಸ್ಥಾನ

ದಲ್ಲಿದ್ದ ಆಲದಮರದ ಕೆಳಗಾದರೂ ಕುಳಿತು ಕಪೋಲ ದೇಶದಲ್ಲಿ ಕಯ್ಯ
ನ್ನಿಟ್ಟು ಚಿಂತೆಯೊಳಗೆ ಮಗ್ನನಾಗುತ್ತಿರುವನು. ಪರಿಣತ ವಯಸ್ಕರಾದ
ಪಂಡಿತರಿಗೂ ಅಗಮ್ಯವಾದ ವಿಷಯಗಳನ್ನು ಕೋಮಲ ಬುದ್ಧಿಯುಳ್ಳ
ಆ ಬಾಲಕನು ಚಿಂತಿಸುತ್ತ ಸಿದ್ಧಾಂತಕ್ಕೆ ಬರಲು ಯತ್ನಿಸುವನು;
ಈ ರೀತಿಯಾಗಿ ಹಸಿವು ಬಾಯಾರಿಕೆ ನಿದ್ದೆ ಮೊದಲಾದುವನ್ನು ಲಕ್ಷ್ಯ
ಮಾಡದೆ ಚಿಂತಾಮಗ್ನನಾಗುತ್ತಿದ್ದನು. ಹೊತ್ತು ಹೊತ್ತಿಗೆ ಮನೆಗೆ
ಬಾರದೆ ಹೋಗುತ್ತಿದ್ದುದರಿಂದ ಅವನ ತಾಯಿಯೂ ಅಣ್ಣನೂ ಪ್ರತಿ
ದಿನವೂ ಎಲ್ಲ ಕಡೆಯೂ ಹುಡುಕಿ ಹುಡುಕಿ ಅವನನ್ನು ಮನೆಗೆ
ಕರೆದುಕೊಂಡು ಹೋಗುತ್ತಿದ್ದರು; ಆ ನಿಮಿತ್ತದಿಂದ ಅವರು ಅವ
ನನ್ನು ಬೈಯುತ್ತಿದ್ದರು; ನಡುವೆ ನಡುವೆ ಹೊಡೆಯುತ್ತಲೂ
ಇದ್ದರು. ಆದರೂ ಅವನ ಸ್ವಭಾವವು ಪರಿವರ್ತಿಸದೆ ದಿನ ದಿನಕ್ಕೆ
ಹಾಗೆಯೇ ವೃದ್ಧಿಗೊಂಡಿತು. ಒಂದು ದಿನ ಜಾಂಬವ ಗ್ರಾಮ
ದೊಳಗೆ ನಿರ್ಜನವಾದ ಪಂಚವಟೀ ವನದಲ್ಲಿ ಭಾರತ ವರ್ಷದ ಅವಸ್ಥೆ
ಯನ್ನು ಕುರಿತು ಅವನು ಗಾಢ ಚಿಂತೆಯಲ್ಲಿ ಮಗ್ನನಾಗಿ ನಿಶ್ಚಲ
ನಾಗಿ ಕುಳಿತನು.

ಆ ಘೋರ ವಿಷಮ ಕಾಲದಲ್ಲಿ ಸನಾತನ ಧರ್ಮ ಸಂಸ್ಥಾಪನೆ
ಯನ್ನು ಮಾಡಿ ವಿದೇಶೀಯರ ಅನ್ಯಾಯಗಳಿಂದ ಪೀಡಿತರಾದ ಭಾರತ
ವಾಸಿಗಳನ್ನುದ್ಧಾರಮಾಡಿ ಸಕಲ ಸಂಕಟಗಳನ್ನೂ ಪರಿಹರಿಸುವ
ಉದ್ದೇಶದಿಂದ ನಾರಾಯಣನು ಕಠೋರ ಸಂನ್ಯಾಸವನ್ನವಲಂಬಿಸಲು
ನಿಶ್ಚಯಿಸಿ ತ್ರಿಲೋಕ ರಾಜ್ಯಪ್ರಾಪ್ತಿಯಾದುದಕ್ಕಿಂತ ಅತಿಶಯ
ವಾಗಿ ಆನಂದಿಸಿದನು. ಸ್ವಾರ್ಥವನ್ನು ಬಿಡುವುದರ ಮೂಲಕ ಲೋಕ
ಹಿತವನ್ನು ಸಾಧಿಸಬಹುದೆಂದು ವಿವೇಚನೆ ಮಾಡಿ ನಾರಾಯಣನು
ಚಿರಕುಮಾರವ್ರತವನ್ನವಲಂಬಿಸಿ ತನ್ನಭೀಷ್ಟವನ್ನು ಸಾಧಿಸಬೇಕೆಂದು
ಸ್ಥಿರ ಸಂಕಲ್ಪ ಮಾಡಿದನು. ಒಂದು ದಿನ ಪಂಚವಟೀ ವನದಲ್ಲಿ ಅವನು
ಈ ಬಗೆಯಾಗಿ ಸ್ವರ್ಗ ಸುಖವನ್ನನುಭವಿಸುತ್ತಿರಲು, ರಾಣುಬಾಯಿ
ಬೆಳಗಿನಿಂದ ಮಗನನ್ನು ಕಾಣದೆ ತೊಳಲುತ್ತಿದ್ದಳು. ಎಲ್ಲಿ ಅರಸಿದರೂ
ಅವನು ಸಿಕ್ಕದೆ ಹೋಗಲು ಅವನನ್ನು ಹುಡುಕುವ ಸಲುವಾಗಿ ಹಿರಿಯ

ಮಗನನ್ನು ಕಳುಹಿಸಿದಳು. ಅವನೂ ಎಲ್ಲೆಲ್ಲೊ ಹುಡುಕಿ ಕಡೆಗೆ ತಮ್ಮ ನನ್ನು ಪಂಚವಟೀ ವನದಲ್ಲಿ ಕಂಡನು. ಅಂದು ನಾರಾಯಣನ ನೋಟವೇ ಬೇರೆಯಾಗಿದ್ದಿತು. ಇದುವರೆಗೂ ಅವನು ವಿಷಾದ ಮಗ್ನ ನಾಗಿರುತ್ತಿದ್ದನು ; ಆ ದಿನವಾದರೊ ಅವನು ಆನಂದದಿಂದಿದ್ದನು ; ಮುಖಕಮಲವು ಅರಳಿದ್ದಿತು ; ಆ ವಿಷಾದ ಭಾವವು ಮುಖದಲ್ಲಿರಲಿಲ್ಲ; ಮುಖಮಂಡಲದಲ್ಲಿ ದಿವ್ಯ ಜ್ಯೋತಿ ಹುಟ್ಟಿದ್ದಿತು. ಅಣ್ಣನನ್ನು ಕಂಡು ಅವನು ತನ್ನ ಸುಖ ಪ್ರಾಪ್ತಿಯ ಕಥೆಯನ್ನು ಹೇಳಿದನು ; ಅದೆಂತೆಂದರೆ—"ಅಣ್ಣ, ನನಗೆ ಅಪ್ಪಣೆಕೊಡು, ನಾನು ಸಂನ್ಯಾಸ ವನ್ನು ತೆಗೆದುಕೊಳ್ಳುವೆನು. ದೇಶದುನ್ನತಿಗಾಗಿಯೂ ಬ್ರಾಹ್ಮಣ ಧರ್ಮ ಸ್ಥಾಪನೆಗಾಗಿಯೂ ದೇಶ ದೇಶವನ್ನು ಸುತ್ತುವೆನು ; ಮುಸ ಲ್ಮಾನರಿಂದ ಪೀಡಿತವಾದ ದೇಶಕ್ಕೆ ಪ್ರತೀಕಾರವೇನಾದರೂ ಇದ್ದರೆ ಅದಕ್ಕಾಗಿ ನನ್ನ ಜೀವವನ್ನರ್ಪಿಸುವೆನು. ದುಃಖವು ದೂರವಾಗು ವುದಕ್ಕೆ ಧರ್ಮವೊಂದೇ ಉಪಾಯವು. ಆದುದರಿಂದ ಸುಖವನ್ನು ಹೊಂದುವ ನಿಮಿತ್ತವಾಗಿ ಎಲ್ಲರನ್ನೂ ಧರ್ಮಕ್ಕೆ ಶರಣಾಗತರನ್ನಾಗಿ ಮಾಡುವೆನು." ಹೀಗೆ ತಮ್ಮನು ಹೇಳಿದುದನ್ನೆಲ್ಲ ಕೇಳಿ ಅಣ್ಣನು ಹಾಗೇ ಆಗಲೆಂದು ಹೇಳಿ ಅವನನ್ನು ಮನೆಗೆ ಕರೆದುಕೊಂಡು ಹೋದನು.

ಕೆಲವು ದಿವಸಗಳ ತರುವಾಯ ರಾಣುಬಾಯಿ ನಾರಾಯಣನ ಭಾವವನ್ನು ಹೋಗಲಾಡಿಸುವ ನಿಮಿತ್ತವಾಗಿ ಅವನಿಗೆ ಮದುವೆ ಮಾಡಬೇಕೆಂದು ಪ್ರಸ್ತಾವಮಾಡಿದಳು. ಬಾಯಿಂದ ಬಾಯಿಗೆ ಹೋಗಿ ಕಡೆಗೆ ಆ ಮಾತು ನಾರಾಯಣನ ಕಿವಿಗೆ ಬಿದ್ದಿತು. ಆ ಮಾತನ್ನು ಕೇಳುತ್ತಲೆ ಬಾಲಕನು ರೇಗಿಬಿದ್ದನು. ಒಂದು ದಿವಸ ಅವನ ಉಪಾಧ್ಯಾಯನು ಅವನನ್ನು ಗೋಪ್ಯವಾದ ಸ್ಥಳಕ್ಕೆ ಕರೆದು ಕೊಂಡು ಹೋಗಿ ಅವನ ಮೊಂಡಾಟವನ್ನು ಕುರಿತು ಗದರಿಸಿ ಮದು ವೆಯ ವಿಷಯದಲ್ಲಿ ತಾಯಿ, ಅಣ್ಣ ಮೊದಲಾದ ಹಿರಿಯರ ಮಾತನ್ನು ಮೀರಿ ನಡೆವುದು ಯಾವ ತೆರದಲ್ಲೂ ಸರಿಯಲ್ಲ, ಅದರಿಂದ ಧರ್ಮಹಾನಿ ಯಾಗುವುದು—ಎಂಬೀಮಾತುಗಳನ್ನು ಅವನಿಗೆ ಹೇಳಿದನು. ನಾರಾ

ಯಣನು ಬಾಯಿಬಿಡಲಿಲ್ಲ. ಹೇಳಿದುದನ್ನೆಲ್ಲ ಕೇಳಿ ಸುಮ್ಮನಿದ್ದು ಆ ದಿವಸ ಪಾಠಶಾಲೆಯನ್ನು ಬಿಟ್ಟಮೇಲೆ ಮನೆಗೆ ಹೋಗದೆ ಮನೆಯ ಸಮೀಪದಲ್ಲಿ ಒಂದು ಕೊಳದ ಕಟ್ಟೆಯ ಮೇಲಿದ್ದ ಅರಳಿಯ ಮರವನ್ನು ಹತ್ತಿ ಕುಳಿತನು. ಅವನ ಅಣ್ಣನು ತಮ್ಮನು ಮನೆಗೆ ಬರಲಿಲ್ಲವೆಂದು ಬೀದಿ ಬೀದಿಗಳಲ್ಲೂ ಹುಡುಕಿ ಸಾಕಾಗಿ ಗಟ್ಟಿಯಾಗಿ ಹೆಸರನ್ನು ಹಿಡಿದು ಕೂಗಿದನು. ನಾರಾಯಣನು ಗಿಡದ ಮೇಲಿನಿಂದಲೇ ಉತ್ತರಕೊಟ್ಟು ಕೊಳಕ್ಕೆ ದುಮಿಕಿದನು. ಅವನು ನೀರೊಳಗೆ ಬಿದ್ದು ಮುಳುಗಿದ ವರ್ತಮಾನ ಊರಲ್ಲೆಲ್ಲ ಹರಡಿತು; ಊರವರೆಲ್ಲರೂ ಬಂದು ನೆರೆದರು; ತಾಯಿಯೂ ಬಂದಳು; ಕಡೆಗೆ ನಾರಾಯಣನನ್ನು ಕೊಳದಲ್ಲಿ ಹುಡುಕಿ ಮೇಲಕ್ಕೆ ತೆಗೆದರು. ಅವನಿಗೆ ತಕ್ಕ ಉಪಚಾರವು ಚಿಕಿತ್ಸೆಯೂ ಆದ ಬಳಿಕ ಕೊಂಚ ಹೊತ್ತಿನ ಮೇಲೆ ಅವನು ಚೇತರಿಸಿಕೊಂಡನು. ಅಂದು ಮೊದಲು ಯಾರೂ ಅವನ ಸಂಗಡ ಮದುವೆಯ ಸುದ್ದಿಯನ್ನೆತ್ತು ವಷ್ಟು ಸಾಹಸ ಮಾಡಲಿಲ್ಲ. ರಾಣುಬಾಯಿಯ ವ್ಯಥೆಗೆ ಪಾರವಿಲ್ಲದೆ ಹೋಯಿತು. ನಾರಾಯಣನು ಬಾಲ್ಯದಿಂದಲೂ ಮಾತೃ ಭಕ್ತನು. ವಯಸ್ಸಾಗುತ್ತ ಒಂದಹಾಗೆಲ್ಲ ತಾಯಿಯ ಮೇಲೆ ಅವನಿಗೆ ಭಕ್ತಿ ಹೆಚ್ಚಿತು. ಒಂದು ದಿನ ತಾಯಿ ಮಗನನ್ನು ಕರೆದು, "ನಾರಾಯಣ, ನೀನು ವೇದಾಧ್ಯಯನ ಮಾಡುವಾಗ ಒಂದೊಂದು ಸಾರಿ "ಮಾತೃ ದೇವೋ ಭವ" ಎಂದು ಹೇಳುತ್ತೀಯಲ್ಲ, ಹಾಗೆಂದರೇನು?" ಎಂದು ಕೇಳಿದಳು. ಅದಕ್ಕೆ ನಾರಾಯಣನು ತಡಮಾಡದೆ, ಯಾರ ಹೊಟ್ಟೆ ಯಲ್ಲಿ ನಾನು ಹುಟ್ಟಿದೆನೋ ಅವಳನ್ನು ನಾನು ಸಾಕ್ಷಾತ್ ದೇವತೆ ಯೆಂದರಿತು ಪೂಜಿಸಬೇಕು. ತಾಯಿಯನ್ನು ಸಂತೋಷಪಡಿಸುವು ದಕ್ಕೂ ಅವಳನ್ನು ಸಾಕುವುದಕ್ಕೂ ವಿಪತ್ತಿನಿಂದ ರಕ್ಷಿಸುವುದಕ್ಕೂ ಮನೋವಾಕ್ಕಾಯಗಳಿಂದ ಯತ್ನಿಸಬೇಕು. ಪಂಡಿತರು ಜನ್ಮ ಭೂಮಿ ಯನ್ನೂ ಜನನಿಯೆಂದು ಘೋಷಿಸುವರು. ಜನ್ಮ ಭೂಮಿ ಸರ್ವರಿಗೂ ಸಮಾನವಾದ ತಾಯಿ. ಮನೆಯ ತಾಯಿಯನ್ನು ಎಷ್ಟು ತೆರದಲ್ಲಿ ರಕ್ಷಿ ಸಿದರೂ ಯಾವನು ಜನ್ಮ ಭೂಮಿಯ ಉನ್ನತಿಗಾಗಿ ಧನವನ್ನೂ ಪ್ರಾಣ ವನ್ನೂ ಅರ್ಪಿಸನೊ, ಅವನು ಪುತ್ರನೆನಿಸಿಕೊಳ್ಳುವುದಕ್ಕೆ ಯೋಗ್ಯನಲ್ಲ.

ಅವನು ಪುತ್ರನಲ್ಲ, ಮಾತೃ ದ್ರೋಹಿ, ಸ್ವದೇಶ ದ್ರೋಹಿ. ಯಾವನು ಇಹ ಜನ್ಮದಲ್ಲಿ ಮಾತೃ ದುಃಖವನ್ನು ಪರಿಹರಿಸಲಾರನೊ ಅವನು ತಾಯಿ ಯನ್ನು ಪುನ್ನಾಮ ನರಕದಿಂದುದ್ಧಾರಮಾಡಲು ಸಮರ್ಥನಾಗುವುದು ಹೇಗೆ? ಜನನಿಯು ಮತ್ತು ಜನ್ಮ ಭೂಮಿಯು ಸೇವೆಗಾಗಿ ಆತ್ಮ ಸುಖ ನಿದ್ರಾಲಸ್ಯ ಭಯ ಮೋಹಗಳನ್ನು ತೊರೆಯಬೇಕು. ಇದೇ ವೇದದ ಆಜ್ಞೆ, ಇದನ್ನೇ ಸಕಲ ಶಾಸ್ತ್ರಗಳೂ ಘಂಟಾಘೋಷವಾಗಿ ಹೇಳುತ್ತಿರು ವುವು'' ಎಂದು ಹೇಳಿ ಸುಮ್ಮನಾದನು. ಆಗ ರಾಣುಬಾಯಿ, ''ಹಾಗಾ ದರೆ ನಾನು ನಿನಗೆ ಪ್ರತ್ಯಕ್ಷ ದೇವತೆಯೊ? ಒಳ್ಳೆಯದು, ನಾನು ನಿನ ಗೊಂದು ಮಾತನ್ನು ಹೇಳುತ್ತೇನೆ, ನಡೆಯಿಸುವೆಯಾ?'' ಎಂದು ಕೇಳಿ ದಳು. ಅದಕ್ಕೆ, ''ನಿನ್ನಾಜ್ಞೆಯನ್ನು ಪಾಲಿಸುವೆನು, ಇದನ್ನು ನೀನು ಹೇಳಬೇಕೇ? ನೀನು ಪರಮ ಪೂಜ್ಯಳು, ನಿನ್ನ ವಾಕ್ಯವು ವೇದ ವಾಕ್ಯಕ್ಕೆ ಸಮಾನವು. ನಿನ್ನ ಆಜ್ಞೆಯಾಗಲಿ, ನಾನು ಮಾಡುತ್ತೇನೆ'' ಎಂದು ಹೇಳಿದನು. ರಾಣುಬಾಯಿ ಆಹ್ಲಾದವನ್ನು ಹೊಂದಿ, ಮದುವೆ ಮಾಡಿಕೊ ಎಂದು ಹೇಳಿದಳು. ಆಗ ನಾರಾಯಣನು ತಾಯಿಯ ಆಜ್ಞೆಯನ್ನು ಮೀರುವುದಕ್ಕೂ ಅಥವಾ ತನ್ನ ಅಭೀಷ್ಟವನ್ನು ಬಿಡು ವುದಕ್ಕೂ ಯತ್ನವಿಲ್ಲದವನಾಗಿ ಉಭಯ ಸಂಕಟದಲ್ಲಿ ಸಿಕ್ಕುಬಿದ್ದನು; ನೀನು ಹೇಳಿದಂತೆಯೇ ಆಗಲಿಯೆಂದು ತಾಯಿಯ ಮಾತಿಗೊಪ್ಪಿದನು. ರಾಣುಬಾಯಿ ಸಂತೋಷದಿಂದ ಹಿಗ್ಗಿದಳು; ಅಲ್ಲಲ್ಲಿ ಕನ್ಯಾನ್ವೇಷಣ ಮಾಡಿ ಕಡೆಗೆ ಸೋದರ ಸೊಸೆಯನ್ನು ಮಗನಿಗೆ ತಂದುಕೊಳ್ಳುವ ಹಾಗೆ ನಿಶ್ಚಯಿಸಿದಳು. ವಿವಾಹ ಕಾಲವು ಸಮೀಪಿಸಿತು. ನಾರಾಯಣನು ಸಂಪೂರ್ಣವಾಗಿ ದೇವರ ಮೇಲೆ ಭಾರವನ್ನು ಹಾಕಿದನು. ಅವನ ಮುಖದ ಮೇಲೆ ಯಾವ ಬಗೆಯ ಚಿಂತೆಯ ರೇಖೆಯೂ ಕಾಣಲಿಲ್ಲ. ಅವನು ವಿಷಾದವಿಲ್ಲದವನಾಗಿಯೂ ಶಾಂತಿ ಪೂರ್ಣ ಹೃದಯನಾಗಿಯೂ ಇದ್ದನು. ಮದುವೆಯ ದಿನವು ಬಂದಿತು. ಬಂಧು ಬಾಂಧವರೆಲ್ಲರೂ ನೆರೆದರು. ವರನೂ ಕನ್ಯೆಯೂ ಹಸೆಯ ಮಣೆಯ ಮೇಲೆ ಕುಳಿತರು. ಪುರೋಹಿತನು ಸಂಕಲ್ಪಾರ್ಥವಾಗಿ ಆಚಮನ ಮಾಡಲು ನೀರನ್ನು ತೆಗೆದುಕೊಳ್ಳೆಂದು ಹೇಳುತ್ತಲೆ, ''ಸಾವಧಾನ'' ಎಂದು ಹೇಳಿ ನಾರಾ

ಯಣನು ಪಲಾಯನಮಾಡಿದನು. ಎಲ್ಲರೂ ಅವನ ಬೆನ್ನಹತ್ತಿದರು. ಆದರೆ ಅವನು ಕೈಗೆ ಸಿಕ್ಕಲಿಲ್ಲ. ನಾರಾಯಣನು ಸ್ವದೇಶದುನ್ನತಿಯನ್ನು ಸಾಧಿಸುವ ನಿಮಿತ್ತವಾಗಿ ಆತ್ಮ ಸುಖವನ್ನು ಬಿಟ್ಟು ಸಂನ್ಯಾಸವನ್ನು ಅವಲಂಬಿಸಿದನು. ಯಾವ ದೇಶದಲ್ಲಿ ಅಂತಹ ಮಹಾತ್ಮರು ಜನ್ಮವೆತ್ತಿ ದೇಶದ ಹಿತ ಸಾಧನಾರ್ಥವಾಗಿ ಸ್ವಾರ್ಥತ್ಯಾಗವನ್ನು ಮಾಡುವರೊ ಆ ದೇಶವು ಉನ್ನತಿಯನ್ನು ಹೊಂದದಿರಲಾರದು.

ನಾರಾಯಣನು ವಿವಾಹ ಮಂಟಪವನ್ನು ಬಿಟ್ಟು ಪಲಾಯನ ಮಾಡಿ ನಾಸಿಕಕ್ಕೆ ಹೋದನು. ಅಲ್ಲಿ ಕೆಲವು ದಿನಗಳಿದ್ದು ರಾಜ ನೀತಿಯ ವಿಷಯದಲ್ಲೂ ಧರ್ಮದ ವಿಷಯದಲ್ಲೂ ದೇಶದ ಸ್ಥಿತಿಯನ್ನು ಸೂಕ್ಷ್ಮವಾಗಿ ತಿಳಿವ ಉದ್ದೇಶದಿಂದ ಭಾರತ ಭೂಮಿಯನ್ನೆಲ್ಲ ಸಂಚರಿಸಲು ಹೊರಟನು. ಅಂದಿನಿಂದ ಅವನು ರಾಮದಾಸನೆಂದು ಹೆಸರಿಟ್ಟು ಕೊಂಡನು. ಬಳಿಕ ಅವನು ಗ್ರಾಮ ಗ್ರಾಮಗಳಿಗೂ ನಗರ ನಗರ ಗಳಿಗೂ ಹೋಗಿ ದೇಶದ ಅವಸ್ಥೆಯನ್ನರಿತು ರಾಜಕಾರ್ಯಗಳನ್ನು ನಿರ್ವ ಹಿಸುತ್ತಿದ್ದ ಪ್ರಧಾನಾಧಿಕಾರಿಗಳನ್ನು ನೋಡಿ ಅವರ ಬುದ್ಧಿ ವೃತ್ತಿ ಯನ್ನೂ ಕಾರ್ಯದಕ್ಷತೆಯನ್ನೂ ತಿಳಿದನು. ನಡುವೆ ನಡುವೆ ಅವನು ಜ್ಞಾನಕ್ಕೆ ಆವಾಸ ಭೂಮಿಯಾದ ಹಿಮಾಲಯಕ್ಕೆ ಹೋಗಿ ಅಲ್ಲಿಯ ಅನಿರ್ವಚನೀಯ ನೈಸರ್ಗಿಕ ಶೋಭೆಯನ್ನೂ ಅದ್ಭುತವಾದ ಪ್ರಕೃ ತಿಯ ಲೀಲೆಗಳನ್ನೂ ಬಹು ವಿಧ ವೃಕ್ಷ ಲತಾದಿಗಳನ್ನೂ ಚಿತ್ರ ವಿಚಿತ್ರ ಪಾಷಾಣಗಳನ್ನೂ ಕಣ್ಣಾರೆ ನೋಡಿ ಆನಂದಿಸುತ್ತಿದ್ದನು; ಮೇಲೂ, ಸಿದ್ಧ ಯೋಗಾಶ್ರಮಗಳಿಗೆ ಹೋಗಿ ಅಲ್ಲಿದ್ದ ತೇಜಃಪುಂಜರಾದ ಯೋಗಿ ಗಳಿಂದ ಯೋಗ ಶಾಸ್ತ್ರ ರಹಸ್ಯಗಳನ್ನು ತಿಳಿದವನಾದನು.

ಈ ರೀತಿಯಲ್ಲಿ ಹನ್ನೆರಡು ವರ್ಷಗಳು ದೇಶ ಸಂಚಾರ ಮಾಡಿ ಸ್ವದೇಶಕ್ಕೆ ಬಂದನು. ಆ ಬಳಿಕ ಶಿಷ್ಯ ಮಂಡಲಿಯಿಂದ ಕೂಡಿದವನಾಗಿ ಪ್ರೇಮ ಸೂತ್ರದಿಂದ ಎಲ್ಲರನ್ನೂ ಕಟ್ಟಿ ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನು ಪಾಲಿಸುವ ನಿಮಿತ್ತವಾಗಿ ಎಲ್ಲರಿಗೂ ಸುಮಧುರ ಸರಳ ವಚನಗಳಿಂದ ಉಪದೇಶಮಾಡಿದನು. ಅದೇ ಸಮಯದಲ್ಲಿ ಅವನು ರಾಜ ನೀತಿ, ವ್ಯವಹಾರ ನೀತಿ, ಧರ್ಮ ನೀತಿಗಳಿಂದ ಪರಿಪೂರ್ಣ

ವಾದ ದಾಸಬೋಧವೆಂಬ ಗ್ರಂಥವನ್ನು ಬರೆಯಲಾರಂಭಿಸಿದನು. ಉದಾರ ಚರಿತನಾದ ರಾಮದಾಸನು ಎಲ್ಲರನ್ನೂ ಪ್ರೇಮೈಕ ರಸ ಭರಿತ ವಚನಗಳಿಂದ ಸಂತೋಷಪಡಿಸುತ್ತ, ಎಲ್ಲರಿಗೂ ದಯೆಯನ್ನು ತೋರಿಸುತ್ತ, ಅಲ್ಪ ಕಾಲದಲ್ಲೇ ಎಲ್ಲರ ಶ್ರದ್ಧಾಭಕ್ತಿಗಳಿಗೂ ಪಾತ್ರನಾದನು. ಈ ಸಮಯದಲ್ಲಿ ಶಿವಾಜಿಯು ರಾಮದಾಸ ಸ್ವಾಮಿಯ ಬಳಿ ದೀಕ್ಷೆಯನ್ನು ಕೈಕೊಂಡನು. ಅವನು ಸ್ವಾಮಿಯನ್ನು ಅನನ್ಯ ಭಕ್ತಿಯಿಂದ ಕಾಣುತ್ತಿದ್ದನು. ಅವನ ಆಜ್ಞೆಯನ್ನು ತಪ್ಪದೆ ಪಾಲಿಸುತ್ತ ಪ್ರತಿ ಗುರುವಾರವೂ ನಿಯಮವಾಗಿ ಅವನ ಬಳಿಗೆ ಹೋಗಿ ಆ ವಾರದಲ್ಲಿ ನಡೆದ ಸಂಗತಿಗಳನ್ನೆಲ್ಲ ವರದಿ ಹೇಳಿ ರಾಜಕಾರ್ಯಗಳಲ್ಲಿ ಅವನ ಉಪದೇಶವನ್ನು ಪಡೆಯುತ್ತಿದ್ದನು.

ಶಿವಾಜಿಯ ಗುರು ಭಕ್ತಿಯೂ ರಾಮದಾಸನ ಬುದ್ಧಿಯೂ ಅಸಾಧಾರಣವಾದುವು. ಒಂದು ದಿನ ಶಿವಾಜಿ ರಾಮದಾಸನ ಬಳಿಗೆ ಹೋಗಿ ಕೃತಾಂಜಲಿಯಾಗಿ ವಿನಯದಿಂದ ಹೀಗೆಂದು ವಿಜ್ಞಾಪನೆಮಾಡಿದನು:— "ಸ್ವಾಮಿಾ, ತಾವು ಸೇವಕನಿಗೆ ಪ್ರಸನ್ನರಾಗಿರುವಿರಿ ಎಂಬುದಕ್ಕೆ ಯಾವ ನಿದರ್ಶನವನ್ನೂ ಕೊಡಲಿಲ್ಲ, ಪ್ರಸನ್ನರಾಗಿದ್ದರೆ ಯಾವುದಾದರೂ ಒಂದು ಆಜ್ಞೆಯನ್ನು ಮಾಡುತ್ತಿದ್ದಿರಿ. ಈ ವರೆಗೆ ಯಾವ ಆಜ್ಞೆಯನ್ನೂ ಮಾಡಲಿಲ್ಲ. ಯಾವುದಾದರೊಂದನ್ನು ಮಾಡಿ ಸೇವಕನನ್ನು ಕೃತಾರ್ಥನನ್ನಾಗಿ ಮಾಡಿರಿ. ಬ್ರಾಹ್ಮಣರೇ ಭಾರತ ಭೂಮಿಯ ಉನ್ನತಿಗೂ ಅವನತಿಗೂ ಕಾರಣಭೂತರು. ಬ್ರಾಹ್ಮಣರ ಅವಸ್ಥೆ ಎಂದಿನ ವರೆಗೆ ಮೇಲಾಗದೊ ಅಂದಿನ ವರೆಗೆ ಕ್ಷತ್ರಿಯಾದಿಗಳು ಉನ್ನತಿಗೆ ಬರಲರಿಯರು. ಹಿಂದೂ ಸಮಾಜಕ್ಕೆ ಬ್ರಾಹ್ಮಣರೇ ಆಧಾರವು. ಅವರು ದುರ್ಬಲರಾದರೆ ಹಿಂದೂಗಳು ಸಾಮಾಜಿಕೋನ್ನತಿಯನ್ನಾಗಲಿ ರಾಜನೈತಿಕೋನ್ನತಿಯನ್ನಾಗಲಿ ಹೊಂದಲು ಅಸಮರ್ಥರಾಗುವರು. ಆ ಉನ್ನತಿಯು ಶಾಸ್ತ್ರಾಧ್ಯಯನ ಸಾಪೇಕ್ಷಿತವಾಗಿರುವುದು ; ಅದು ಧನವಂತರ ಸಹಾಯವಿಲ್ಲದಿದ್ದರೆ ಸಾಧ್ಯವಾಗಲಾರದು. ಬ್ರಾಹ್ಮಣರು ಜ್ಞಾನ ಸಂಪನ್ನರಾದರೆ ಭಾರತವರ್ಷಕ್ಕೆ ಚಿರಸ್ಥಾಯಿಯಾದ ಉನ್ನತಿ ಲಭಿಸುವುದು. ಅವರು ಪೃಥ್ವಿಯೊಳಗೆ ಬುದ್ಧಿವಂತರಾದ ಯಾವ ಜಾತಿ

ಯುವರಿಗೂ ಕಡಿಮೆಯಲ್ಲ. ಕ್ಷತ್ರಿಯಾದಿ ವರ್ಣ ತ್ರಯದವರ ಸಂಗಡ ಪ್ರೀತಿಯಿಂದ ಕಾರ್ಯಗಳನ್ನು ಮಾಡುವವರಾದರೆ ಅವರು ಅಜಯ್ಯರು ಎನ್ನುವುದರಲ್ಲಿ ಸಂದೇಹವಿಲ್ಲ''. ಹೀಗೆಂದು ವಿಜ್ಞಾಪಿಸಲು, ಅದಕ್ಕೆ ರಾಮದಾಸನು ಯೋಚಿಸಿ ಹೇಳಿದುದೇನೆಂದರೆ:—''ಬ್ರಾಹ್ಮಣರು ಶಾಸ್ತ್ರಜ್ಞರಾಗುವ ವಿಷಯದಲ್ಲಿ ಮನಸ್ಸಿಡು. ಅವರ ಪಾಂಡಿತ್ಯಾನು ಸಾರವಾಗಿ ವಾರ್ಷಿಕ ವೃತ್ತಿಯನ್ನು ಮಾಡಿಕೊಡು. ಪ್ರತಿ ಶ್ರಾವಣ ಮಾಸದಲ್ಲೂ ಯೋಗ್ಯರಾದ ಬ್ರಾಹ್ಮಣರನ್ನು ಸೇರಿಸಿ ಕೋಟಿ ಲಿಂಗಾ ರ್ಚನೆಯನ್ನು ಮಾಡಿಸು. ನಿನ್ನ ರಾಜ್ಯವು ಹಿಂದೂ ರಾಜ್ಯವು; ಈ ರಾಜ್ಯದ ನಿವಾಸಿಗಳಾದ ಹಿಂದೂ ಪ್ರಜೆಗಳು ಆ ಯವನರ ಆಚಾರ ವ್ಯವಹಾರ ಗಳನ್ನು ಅನುಕರಿಸುವುದಕ್ಕಿಂತ ನಿಂದ್ಯವಾದುದು ಯಾವುದೂ ಇಲ್ಲ. ನಂಟರಿಷ್ಟರನ್ನು ಕಂಡ ಕಡೆ ಅವರಿಗೆ ನಮಸ್ಕಾರ ಮಾಡದೆ ಸಲಾಮು ಮಾಡುವರು. ಇದೇನು ವಿಚಿತ್ರ? ಬ್ರಾಹ್ಮಣೇತರರೂ ಒಬ್ಬರಿಗೊಬ್ಬರು ಸಲಾಮು ಮಾಡುವರು. ಹೀಗೆಲ್ಲ ಮಾಡದೆ ಒಬ್ಬರನ್ನೊಬ್ಬರು ಕಂಡಲ್ಲಿ 'ರಾಮ ರಾಮ' ಎಂದು ನಮಸ್ಕಾರ ಮಾಡುವಂತೆ ಮಾಡು.'' ರಾಮದಾಸ ಸ್ವಾಮಿಯ ಆಜ್ಞೆಯಿಂದ ಇವುಗಳೆಲ್ಲವೂ ಆಚರಣೆಗೆ ಬಂದು ಮಹಾರಾಷ್ಟ್ರೀಯರಲ್ಲಿ ಸ್ವಧರ್ಮಾಭಿಮಾನವೂ ಸ್ವಜಾತಿ ಪ್ರೇಮವೂ ವೃದ್ಧಿಗೊಂಡುವು.

ಒಂದು ಸಾರಿ ರಾಮದಾಸನು ಇಚ್ಛಾನುಸಾರವಾಗಿ ಸಂಚಾರ ಮಾಡುತ್ತ ಸತಾರ ನಗರಕ್ಕೆ ಹೋದನು. ಆಗ ಶಿವಾಜಿಯೂ ಅಲ್ಲಿ ದ್ದನು. ರಾಮದಾಸ ಸ್ವಾಮಿ ಭಿಕ್ಷವೆತ್ತುವುದಕ್ಕೆ ಹೋಗಿ ಒಬ್ಬ ಗೃಹ ಸ್ಥನ ಮನೆಯ ಬಾಗಿಲಲ್ಲಿ ನಿಂತು, 'ಜಯ ರಘುಪತಿ' ಎಂದು ಗಟ್ಟಿ ಯಾಗಿ ಕೂಗಿದನು. ಮಗ್ಗುಲ ಮನೆಯಲ್ಲಿಯೇ ಶಿವಾಜಿಯಿಳಿದಿದ್ದನು; ಆ ಶಬ್ದವನ್ನು ಕೇಳುತ್ತಲೆ ಅದು ರಾಮದಾಸ ಸ್ವಾಮಿಯ ಧ್ವನಿಯೆಂದು ತಿಳಿದನು. ತತ್‌ಕ್ಷಣವೇ ಶಿವಾಜಿಯು ತನ್ನ ಹತ್ತಿರಿದ್ದ ಅಧಿಕಾರಿ ಯೊಬ್ಬನನ್ನು ಕರೆದು, ನಾನು ಈವರೆಗೆ ಜಯಿಸಿರುವ ಸಮಸ್ತ ರಾಜ್ಯವನ್ನೂ ಇನ್ನೂ ನನ್ನದಾಗಿ ಏನೇನಿದೆಯೊ ಅದೆಲ್ಲವನ್ನೂ ಭಿಕ್ಷ ವಾಗಿ ಕೊಟ್ಟಿರುವೆನು ಎಂಬರ್ಥಕ್ಕೆ ಒಂದು ದಾನಪತ್ರವನ್ನು ಬರೆ

ದಿಡೆಂದು ಹೇಳಿ ರಾಮದಾಸ ಸ್ವಾಮಿಯಿದ್ದೆಡೆಗೆ ಹೋಗಿ ಅವನ ಪಾದಕ್ಕೆ ಬಿದ್ದು ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಅಲ್ಲಿ ಅರ್ಘ್ಯ ಪಾದ್ಯಾದಿಗಳಿಂದ ಅವನನ್ನು ಪೂಜೆಮಾಡಿ, ದಾನಪತ್ರಕ್ಕೆ ಮುದ್ರೆ ಹಾಕಿ ಅದನ್ನು ಭಿಕ್ಷಾಪಾತ್ರೆಯಲ್ಲಿ ಹಾಕಿದನು. ಸ್ವಾಮಿಯು ಶಿವಾಜಿಯ ಅಭಿಪ್ರಾಯವನ್ನರಿತು, "ಶಿವಾ, ಈ ಕಾಗದವನ್ನೇಕೆ ಭಿಕ್ಷಾಪಾತ್ರೆಯಲ್ಲಿ ಹಾಕಿದೆ? ಕಾಗದದಿಂದ ಹೊಟ್ಟೆ ತುಂಬುವುದಿಲ್ಲ, ಒಂದು ಹಿಡಿಯಷ್ಟು ಅನ್ನವಾದರೆ ನನ್ನ ಪಾಡಾಯಿತು" ಎಂದು ಅನ್ನವನ್ನು ಬೇಡಿ ಪಕ್ಕದಲ್ಲಿದ್ದ ಒಬ್ಬನ ಕೈಗೆ ಆ ಕಾಗದವನ್ನು ಓದೆಂದು ಕೊಟ್ಟನು. ಶಿವಾಜಿ ಸಮಸ್ತ ರಾಜ್ಯವನ್ನೂ ಭಿಕ್ಷಾ ರೂಪವಾಗಿ ತನಗರ್ಪಿಸಿರುವನೆಂದು ಕೇಳುತ್ತಲೆ ರಾಮದಾಸನು ನಕ್ಕು, "ಒಳ್ಳೆಯದು ಶಿವಾ, ಈಗ ನೀನೇನು ಮಾಡಬೇಕೆಂದಿದ್ದೀಯೆ ಹೇಳು" ಎಂದನು. ಅದಕ್ಕೆ ಶಿವಾಜಿಯು ಸ್ವಲ್ಪವಾದರೂ ವಿಳಂಬಮಾಡದೆ,

> ಶಾಂತಿಯೇ ಮನೆ ನಿಮ್ಮ ಚರಣದ।
> ಚಿಂತೆಯೇ ಮನೆವಾಳ್ತೆ ವರ ವೇ।
> ದಾಂತ ತತ್ತ್ವರಹಸ್ಯ ಮನನಾದಿಗಳು ಸರ್ವಸ್ವ ॥

ಎಂಬಂತೆ "ಸ್ವಾಮಿ, ತಮಗೆ ನೂರಾರು ಮಂದಿ ಶಿಷ್ಯರಿರುವರು, ನಾನು ಅವರ ಕೈಯ ಕೆಳಗಿದ್ದು ತಮ್ಮ ಪಾದಸೇವೆಯನ್ನು ಮಾಡುತ್ತಿರುವೆನು" ಎಂದು ಹೇಳಿದನು. ಅದಕ್ಕೆ ಸ್ವಾಮಿಯು, "ಕೌಪೀನವನ್ನು ಕಟ್ಟಿಕೊಂಡು ಮನೆ ಮನೆಗೂ ಹೋಗಿ ಭಿಕ್ಷವೆತ್ತಬೇಕಲ್ಲ! ನಿನ್ನಿಂದಾಗುವುದೆ?" ಎಂದನು. ಆ ಮಾತಿಗೆ ಶಿವಾಜಿ, "ಶ್ರೀಚರಣಾಶೀರ್ವಾದದಿಂದ ದಾಸನು ಯಾವ ಕೆಲಸಕ್ಕಾದರೂ ಸಿದ್ಧನಾಗಿರುವನು" ಎಂದುತ್ತರ ಕೊಟ್ಟನು. ಅದರಂತೆ ಒಂದು ದಿನ ಅವನು ಕಾವಿಯ ಶಾಟಿಯನ್ನುಟ್ಟು ಕಮಂಡುಲುವನ್ನು ಹಿಡಿದು ಭಿಕ್ಷವನ್ನೆತ್ತಿಯೂ ಎತ್ತಿದನು. ಸ್ವಾಮಿಯು ಶಿವಾಜಿ ಮಾಡಿದ ಕೆಲಸಕ್ಕೆ ವಿಸ್ಮಿತನಾಗಿ, ಕೌಪೀನಾದಿಗಳನ್ನು ಬೀಸಾಡಿ ರಾಜಕಾರ್ಯಗಳನ್ನು ಮಾಡಹೋಗು ಎಂದು ಹೇಳಿದನು. ಅದನ್ನು ಕೇಳಿ, "ದೇವಾ, ಗುರುವಿಗೆ ಭಿಕ್ಷಾರೂಪವಾಗಿ ಕೊಟ್ಟುದನ್ನು ಮತ್ತೆ ಹೇಗೆ ತೆಗೆದುಕೊಳ್ಳಲಿ? ನಾನು ಕ್ಷತ್ರಿಯನು, ಪ್ರತಿಗ್ರಹವು ಕ್ಷತ್ರಿಯ

ನಿಗೆ ಧರ್ಮವಲ್ಲ; ವರ್ಣಾಶ್ರಮ ಧರ್ಮಗಳನ್ನು ರಕ್ಷಿಸುವುದು ಕ್ಷತ್ರಿಯನ ಧರ್ಮವು; ಯಾವ ಕ್ಷತ್ರಿಯನು ಅದನ್ನು ಪಾಲಿಸನೊ ಅವನು ದೋಷಿಯೂ ನಿಂದನೀಯನೂ ಆಗುವನು'' ಎಂದನು. ಏನು ಮಾಡಿದರೂ ಶಿವಾಜಿ ರಾಜ್ಯ ಪಾಲನೆಯನ್ನು ಮಾಡಲೊಪ್ಪಲಿಲ್ಲವಾದುದರಿಂದ ಸ್ವಾಮಿಯು, ''ನೀನು ನನ್ನ ಸೇವಕನಾಗಿ ರಾಜಕಾರ್ಯಗಳನ್ನು ಮಾಡು'' ಎಂದನು. ಶಿವಾಜಿ ಅದಕ್ಕೆ ಸಮ್ಮತಿಸಿದನು. ಅಂದಿನಿಂದ ಕಾವಿಯ ಬಟ್ಟೆ ಮಹಾರಾಷ್ಟ್ರೀಯರಿಗೆ ಪತಾಕೆಯಾಯಿತು. ಈ ಕಾವಿಯ ಬಟ್ಟೆಯ ಪತಾಕೆಯು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ ಮೊದಲಾದ ಸಕಲ ವರ್ಣಾಶ್ರಮದವರಿಂದಲೂ ಪೂಜ್ಯವಾಯಿತು.

ಆ ಬಳಿಕ ಶಿವಾಜಿ ತಾನು ರಾಮದಾಸನ ವಿನತ ಸೇವಕನೆಂದು ರಾಜ ಕಾರ್ಯಗಳನ್ನು ಮಾಡತೊಡಗಿದನು. ಸ್ವದೇಶ ಹಿತೈಷಿಯಾದವನು ಅರಸನಾಗಲಿ ಆಳಾಗಲಿ ಸಕಲಾವಸ್ಥೆಗಳಲ್ಲೂ ಅಹಂಕಾರವನ್ನು ಬಿಟ್ಟು ಶಾಂತ ಚಿತ್ತನಾಗಿ ತನ್ನ ಕರ್ತವ್ಯವನ್ನು ಮಾಡುವನು. ಶಿವಾಜಿಯುದ್ಧ ಕಾರ್ಯಗಳಲ್ಲೂ ರಾಜ್ಯ ಶಾಸನ ಕಾರ್ಯಗಳಲ್ಲೂ ಸೇನಾಪತಿಗಳಿಗೂ ಮಂತ್ರಿಗಳಿಗೂ ಯಥೋಚಿತವಾಗಿ ಅಧಿಕಾರವನ್ನು ಕೊಟ್ಟು ಅವರೆಲ್ಲರೂ ಒಕ್ಕಟ್ಟಾಗಿ ಕಾರ್ಯಗಳನ್ನು ನಿರ್ವಹಿಸುವಂತೆ ಮಾಡಿದನು. ಅವನು ನಿಸ್ಪೃಹನಾಗಿ ಕಾರ್ಯಗಳನ್ನು ಮಾಡುತ್ತಿದ್ದುದನ್ನು ನೋಡಿ ಅವನು ಕಣ್ಣೆದುರಿಗಿದ್ದರೂ ಇಲ್ಲದಿದ್ದರೂ ಎಲ್ಲರೂ ತಮ್ಮ ತಮ್ಮ ರಾಜ ಕಾರ್ಯಗಳನ್ನು ಅಕ್ಕರೆಯಿಂದ ನೇರವಾಗಿ ಮಾಡುತ್ತಿದ್ದರು.

ಬಹು ಕಾಲ ರಾಮದಾಸನು ಗೋದಾವರಿಯ ತೀರದಲ್ಲಿಯ ಅನೇಕ ಸ್ಥಳಗಳಲ್ಲಿ ಸಂಚರಿಸುತ್ತ, ಪ್ರಬಲನಾದ ರಾಜನಿಗೆ ಗುರುವಾದರೂ, ಮುಷ್ಟಿ ಭಿಕ್ಷಕ್ಕಾಗಿ ಮನೆ ಮನೆಗೂ ಹೋಗುತ್ತಿದ್ದನು. ಆ ದಾಸನ ಔದಾರ್ಯವು ಅಪಾರವಾದುದು. ಆ ಮಹಾ ಪುರುಷನ ಉತ್ತೇಜನದಿಂದ ಶಿವಾಜಿಯೂ ಅವನ ಸಹಚರರೂ ಅಸಾಧಾರಣ ಕಾರ್ಯಗಳನ್ನು ಮಾಡಿ ಕೀರ್ತಿಗೊಂಡರು. ಶಿವಾಜಿಯ ಮಗನಾದ ಸಾಂಬಾಜಿ ಅವನ ಉಪದೇಶಕ್ಕೆ ಕಿವಿಗೊಡದೆ ಸ್ವೇಚ್ಛೆಯಾಗಿ ನಡೆದು

ಯುವನರಿಂದ ಹತನಾದನು. ರಾಮದಾಸನು ರಾಮೋಪಾಸಕನು; ದೇಶೋದ್ಧಾರವಾಗಬೇಕಾದರೆ ಮಹಾ ವೀರ ಹನುಮಂತನಂತಹ ದೀರ್ಘ ದರ್ಶಿಗಳೂ ಶಾಂತ ಹೃದಯರೂ ಸ್ವಾಮಿ ಕಾರ್ಯ ತತ್ಪರರೂ ಸಕಲಾವಸ್ಥೆಗಳಲ್ಲೂ ಅವಿಕಲ್ಪ ಚಿತ್ತರೂ ಆಗಬೇಕೆಂದು ಅವನು ಅಡಿಗಡಿಗೂ ಹೇಳುತ್ತಿದ್ದನು. ರಾಮದಾಸ ಸ್ವಾಮಿ ಕಡೆಗಾಲದಲ್ಲಿ ಸಜ್ಜನಗಡವೆಂಬ ಸ್ಥಳದಲ್ಲಿದ್ದನು. ಅವನು ಸಾಯುವ ವರೆಗೂ ಭರತಖಂಡದ ಹಿತ ಚಿಂತನೆಯಲ್ಲೇ ಮಗ್ನನಾಗಿದ್ದನು. ಅವನು ಶಾಲಿವಾಹನ ಶಕ ೧೬೦೩ನೆಯ ಸಂವತ್ಸರದ ಮಾಘ ಬಹುಳ ನವಮೀ ಶನಿವಾರ, ಶಿವಾಜಿಯು ಸತ್ತು ಒಂದು ವರ್ಷದ ಮೇಲೆ, ತನ್ನ ಎಪ್ಪತ್ತುಮೂರನೆಯ ವರ್ಷದಲ್ಲಿ ಮಾನವ ಲೀಲೆಯನ್ನು ಕಳೆದನು.

ರಾಮದಾಸ ಸ್ವಾಮಿಯ ಜೀವನವನ್ನು ಪರಿಶೀಲನೆಮಾಡಿ ನೋಡಿದರೆ ಯಾವ ಮಹಾ ಕಾರ್ಯವನ್ನು ಸಾಧಿಸಬೇಕಾದರೂ ದಾರಿದ್ರ್ಯ ವ್ರತವನ್ನವಲಂಬಿಸಿ ದೇವ ದುರ್ಲಭವಾದ ಸ್ವಾರ್ಥ ತ್ಯಾಗವನ್ನು ಅಭ್ಯಾಸಮಾಡುವುದು ಆವಶ್ಯಕವೆಂದು ಸ್ಪಷ್ಟವಾಗುವುದು.—

ಪುಟ್ಟಿದರೇಂ ಪರೋಪಕೃತಿಗೆಯ್ಯದೆ ಸುಮ್ಮನೆ ಪುಟ್ಟಿ ಸತ್ತವರ್ ।<br>
ಪುಟ್ಟವೆ ಸಾಯವೇ ಜಗದೊಳತ್ತಿಯ ಪಣ್ಣೊಳಗಿನಿತ್ತೊ ಜಂತುಗಳ್ ॥

ಒಂಬತ್ತನೆಯ ಪ್ರಕರಣ

---

## ಶಾಹಜಿಯು ಬಿಜಾಪುರದಿಂದ ಮಗನ ಬಳಿಗೆ ಮಾಧ್ಯಸ್ಥ್ಯಕ್ಕಾಗಿ ಹೋದುದು.

ಶಿವಾಜಿಗೂ ಬಿಜಾಪುರ ಸಂಸ್ಥಾನಕ್ಕೂ ನಡೆದ ಯುದ್ಧದಲ್ಲಿ ಕೆಲವು ದುರ್ಗಗಳು ಶಿವಾಜಿಯ ಕೈಬಿಟ್ಟು ಹೋದುವು. ಆ ಸಮಯ ದಲ್ಲಿ ವಾಡಿಯೆಂಬ ಪ್ರದೇಶದ ಸಾವಂತರು ಆ ಸಂಸ್ಥಾನದ ಪಕ್ಷವನ್ನವ ಲಂಬಿಸಿ ಶಿವಾಜಿಯ ಮೇಲೆ ಯುದ್ಧಕ್ಕೆ ಹೊರಟರು. ಸುಲ್ತಾನನು ಅದಕ್ಕೊಪ್ಪಿ ಅವರ ಸಹಾಯಕ್ಕೆ ದಂಡನ್ನೂ, ಶಾಹಜಿಯನ್ನು ವಂಚಿ ಸಿದ ಘೋರ್ಪಡೆಯನ್ನೂ ಕಳುಹಿಸಿದನು. ಇವರೆಲ್ಲರೂ ಕಲೆಯುವು ದಕ್ಕೆ ಮುಂಚೆಯೇ ಶಿವಾಜಿಯು ಕರ್ಣಾಟಕಕ್ಕೆ ಹೋಗಿ ಮುಧೋಳ ದಲ್ಲಿದ್ದ ಘೋರ್ಪಡೆಯೊಡನೆ ಯುದ್ಧಮಾಡಿ ಅವನನ್ನೂ ಅವನ ಕುಟುಂಬ ಪರಿವಾರಗಳನ್ನೂ ಕೊಂದನು. ಆ ಸಮಯದಲ್ಲಿಯೇ ಕರ್ಣಾಟಕದಲ್ಲಿ ದಂಗೆಯೇಳಲು, ಸುಲ್ತಾನನು ತನ್ನ ದಂಡನ್ನು ಹಿಂದಕ್ಕೆ ಕರೆಯಿಸಿಕೊಂಡನು; ಸಾವಂತರು ಮಾತ್ರವೇ ಉಳಿದರು. ಆಗ ಶಿವಾಜಿ ಅವರ ಮೇಲೆ ದಂಡೆತ್ತಿಹೋದನು. ಸಾವಂತರು ಪೋರ್ಚುಗೀಸರ ಮರೆಬಿದ್ದರು. ಆದರೆ ಪೋರ್ಚುಗೀಸರು ಅವರಿಗೆ ಆಶ್ರಯ ವನ್ನು ಕೊಡುವುದರಿಂದ ತಮಗೆ ಕೇಡಾಗುವುದೆಂದು ಹೆದರಿ ಇನ್ನೆ ಲ್ಲಾದರೂ ಹೋಗಿ ಆಶ್ರಯವನ್ನು ಸಂಪಾದಿಸುವ ಹಾಗೆ ಹೇಳಿ ಅವ ರನ್ನು ಕಳುಹಿಸಿಬಿಟ್ಟರು. ಅನನ್ಯೋಪಾಯರಾಗಿ ಅವರು ಶಿವಾ ಜಿಯ ಬಳಿಗೆ ಬಂದು ಅವನಿಗೆ ಅಧೀನರಾದರು. ಸುತ್ತಮುತ್ತಲಿದ್ದ ರಾಜರೆಲ್ಲ ಒಬ್ಬೊಬ್ಬರಾಗಿ ಶಿವಾಜಿಯ ಸಂಗಡ ಸೇರುತ್ತ ಬಂದರು. ಒಂದು ಕಡೆಯಲ್ಲಿ ಮರಾಟಿಯವರೂ ಇನ್ನೊಂದು ಕಡೆಯಲ್ಲಿ ಮೊಗಲರೂ ವೃದ್ಧಿಯಾಗುತ್ತಿದ್ದರು. ಹೀಗಿರುವಲ್ಲಿ ಈ ಇಬ್ಬರೊಳಗೆ ಯಾರಾದರೂ ಒಬ್ಬರ ಮಿತ್ರತೆಯಿಲ್ಲದಿದ್ದರೆ ತಮಗೆ ಉಳಿಗಾಲವಿಲ್ಲವೆಂದು ಭಯಪಟ್ಟು, ಮೊಗಲರನ್ನು ನಂಬುವುದು ಕ್ಷೇಮಕರವಲ್ಲವೆಂದು ಯೋಚಿಸಿ, ಬಿಜಾ

ಪುರ ಸಂಸ್ಥಾನದ ಪ್ರಮುಖರಾದ ಉದ್ಯೋಗಸ್ಥರೆಲ್ಲರೂ ಸೇರಿ ಶಿವಾಜಿಯ ಮಿತ್ರತೆಯನ್ನು ಬೆಳೆಯಿಸಲು ನಿಶ್ಚಯಿಸಿ ಅವನ ತಂದೆಯನ್ನೇ ಅವನ ಬಳಿಗೆ ಮಾಧ್ಯಸ್ಥ್ಯಕ್ಕಾಗಿ ಕಳುಹಿಸಿದರು.

ಷಾಹಜಿ ಬಹು ಕಾಲದಿಂದ ಮಗನ ಸ್ವದೇಶಾಭಿಮಾನ, ಸ್ವಧರ್ಮ ಪರಾಯಣತೆ, ಉದಾರತೆ, ವೀರತೆ ಮೊದಲಾದ ಸುಗುಣಗಳನ್ನು ಕೇಳಿ ಮಗನನ್ನು ಕಣ್ಣಿಂದ ನೋಡಲು ಅಪೇಕ್ಷಿಸುತ್ತಿದ್ದನು; ಆದರೆ ಅನೇಕ ಪ್ರಕಾರವಾದ ರಾಜಕೀಯ ಘಟನೆಗಳಿಂದ ಅವನ ಇಚ್ಛೆ ನೆರವೇರಲಿಲ್ಲ. ಈಗ ತಾನು ಬರುವ ಸುದ್ದಿಯನ್ನು ಮಗನಿಗೆ ಮುಂದೆಯೇ ಹೇಳಿಕಳುಹಿಸಿದನು. ಶಿವಾಜಿಯು ತಂದೆ ಬರುವನೆಂದಾನಂದಿಸಿ, ಅವನು ಬರುವ ಮಾರ್ಗದಲ್ಲಿದ್ದ ನಗರ ನಗರದಲ್ಲಿಯೂ ಗ್ರಾಮ ಗ್ರಾಮದಲ್ಲಿಯೂ ತೋರಣಗಳನ್ನು ಕಟ್ಟಿಸಿ ಬಾಳೆಯ ಕಂಬಗಳನ್ನು ನೆಡಿಸಿ ಬಿಡಾರಗಳನ್ನು ಕಲ್ಪಿಸಿ ಅಡಿಗೆ ಊಟಗಳಿಗೆ ತಕ್ಕ ಏರ್ಪಾಡುಗಳನ್ನು ಮಾಡಿಸಿದನು. ರಾಜ್ಯವು ಉತ್ಸವ ಪೂರ್ಣವಾಯಿತು. ಷಾಹಜಿಯು ತನ್ನ ಎರಡನೆಯ ಹೆಂಡತಿ ತುಕಾಬಾಯಿಯನ್ನೂ ಆಕೆಯ ಮಗ ವೆಂಕೋಜಿಯನ್ನೂ ಕರೆದುಕೊಂಡು ಪಯಣ ಹೊರಟು ತುಳಜಾಪುರಕ್ಕೆ ಹೋಗಿ ಭವಾನಿಯ ದರ್ಶನವನ್ನು ಮಾಡಿ, ಅಲ್ಲಿಂದ ಸಿಂಗಣಾಪುರಕ್ಕೆ ಹೋಗಿ ಭೋಸ್ಲೆ ಮನೆದೇವರ ಸೇವೆಯನ್ನು ಮಾಡಿಕೊಂಡು, ಹಾಗೆಯೇ ಅಲ್ಲಿದ್ದ ಮಾಲೋಜಿಯ ಸಮಾಧಿಯನ್ನು ಅರ್ಚಿಸಿ, ಪಂಡರಾಪುರಕ್ಕೆ ಹೋಗಿ ವಿಠೋಬನನ್ನು ಸೇವಿಸಿ, ಪುಣೆಯ ಪ್ರಾಂತದಲ್ಲಿ ಖಂಡೋಬನ ನೆಲೆಯಾದ ಜೆಜೂರಿಯೆಂಬ ಕ್ಷೇತ್ರದ ಸಮೀಪಕ್ಕೆ ಬಂದನು. ಆಗ ಶಿವಾಜಿಯು ತಂದೆಯನ್ನು ಬರಮಾಡಿಕೊಳ್ಳುವುದಕ್ಕೆ ಮೋರೊ ಪಿಂಗಳೆಯನ್ನು ಕಳುಹಿಸಿ ತಾನೂ ಜೀಜಾಬಾಯಿಯೂ ತನ್ನ ಹೆಂಡಿರಾದ ಸಯಿಬಾಯಿ ಸಾಯರಾಬಾಯಿಯೂ ಷಾಹಜಿಯ ಬರವನ್ನು ಇದಿರು ನೋಡುತ್ತ ಖಂಡೋಬನ ದೇವಸ್ಥಾನದ ಬಳಿ ನಿಂತಿದ್ದರು. ತಂದೆಯು ಬರುತ್ತಲೆ ಶಿವಾಜಿಯು ಅವನಿಗೆ ದಂಡವತ್ತಾಗಿ ಪ್ರಣಾಮವನ್ನು ಮಾಡಿ ತರುವಾಯ ಮಲತಾಯಿಗೂ ನಮಸ್ಕಾರ ಮಾಡಿದನು. ಬಳಿಕ ಸೊಸೆಯರಿಬ್ಬರೂ ಭಕ್ತಿ ಪೂರ್ವಕವಾಗಿ ಅತ್ತೆ ಮಾವಂದಿರ ಅಡಿ

ಗೆರಗಿದರು. ಜೀಜಾಬಾಯಿಯೂ ಗಂಡನನ್ನು ಅಭಿವಂದಿಸಿದಳು. ಆಮೇಲೆ ಷಾಹಜಿಯು ಪಾಲಕಿಯಲ್ಲಿ ಕುಳಿತನು. ಶಿವಾಜಿಯು ಪಾಲಕಿಯಲ್ಲಿಯೂ ಕುಳಿತುಕೊಳ್ಳದೆ ತನ್ನ ಕುದುರೆಯ ಮೇಲೆಯೂ ಹತ್ತದೆ ಬರಿಯ ಕಾಲಲ್ಲಿಯೇ ಬಿಡಾರಕ್ಕೆ ನಡೆದು ಹೋದನು. ಬಿಡಾರದಲ್ಲಿ ತಂದೆಯ ಸಮಕ್ಷದಲ್ಲಿ ಕುಳಿತುಕೊಳ್ಳದೆ ಕೈಜೋಡಿಸಿ ನಿಂತು ತಂದೆಗೆ ಕಾರಾಗಾರ ವಾಸವು ಪ್ರಾಪ್ತವಾದುದಕ್ಕೆ ಕಾರಣವಾದ ತನ್ನ ಬಾಲ್ಯಾಪಚಾರವನ್ನು ಕ್ಷಮಿಸಬೇಕೆಂದು ಬಾರಿ ಬಾರಿಗೂ ತಂದೆಯನ್ನು ಬೇಡಿದನು. ಷಾಹಜಿಯು ಬಹಳ ಹೊತ್ತಿನ ಮೇಲೆ ತನ್ನ ಹೆಂಡತಿ, ಮಗ ಮುಂತಾದವರ ಮುಖವನ್ನು ನೋಡಿ ಆನಂದಪಟ್ಟು ಕರುಣೆಯಿಂದ ಕರಗಿ ಮಗನ ಸರ್ವಾಪರಾಧವನ್ನೂ ಮನ್ನಿಸಿ ತನ್ನ ದೇಶದವರ ರಕ್ಷಣಾರ್ಥವಾಗಿ ಅವನು ಮಾಡುತ್ತಿದ್ದ ಪ್ರಯತ್ನಗಳನ್ನು ಬಿಡದೆ ಮಾಡುವಂತೆ ಪ್ರೋತ್ಸಾಹಗೊಳಿಸಿದನು. ಜೆಜೂರಿಯಲ್ಲಿ ಕೆಲವು ದಿನಗಳಿದ್ದು ಎಲ್ಲರೂ ಪುಣೆಗೆ ಹೊರಟರು. ಷಾಹಜಿ ಪುಣೆಯಲ್ಲಿ ಸ್ವಲ್ಪ ಕಾಲವಿದ್ದು ಶಿವಾಜಿಯ ರಾಜ್ಯವನ್ನು ನೋಡಲು ಹೊರಟನು; ಮಹಾಬಲೇಶ್ವರಕ್ಕೆ ಹೋಗಿ ಅಲ್ಲಿಯ ಅಂದ ಚಂದಗಳನ್ನೆಲ್ಲ ನೋಡಿ ಪ್ರತಾಪಗಡಕ್ಕೆ ಹೋದನು. ಅಲ್ಲಿ, ಅಫ್ಜುಲ್‌ಖಾನನು ಶಿವಾಜಿಯನ್ನು ಮೋಸದಿಂದ ಹಿಡಿಯಲು ಯತ್ನಿಸಿ ವಿಫಲ ಮನೋರಥನಾಗಿ ತಾನೇ ಹತನಾದ ಸ್ಥಳವನ್ನು ಷಾಹಜಿಯು ತನ್ನ ಮಗನಿಂದ ತಿಳಿದನು. ಅನಂತರ ಚಿಪಲೂನೆಯೆಂಬ ಪರಶುರಾಮ ಕ್ಷೇತ್ರವನ್ನೂ ಸಮುದ್ರ ತೀರದಲ್ಲಿರುವ ಹರಿಹರೇಶ್ವರ ದೇವಾಲಯವನ್ನೂ ವಾಣಿಜ್ಯದಿಂದ ವಿಖ್ಯಾತವಾದ ಮಹಾಡೆಂಬ ಪ್ರದೇಶವನ್ನೂ ನೋಡಿಕೊಂಡು ರಾಯರಿದುರ್ಗಕ್ಕೆ ಪ್ರಯಾಣಮಾಡಿದನು. ಆ ದುರ್ಗವನ್ನು ಈಗ ರಾಯಗಡವೆನ್ನುವರು. ಅದು ದುರ್ಗಮವಾಗಿಯೂ ಸಮುದ್ರಕ್ಕೆ ಸಮೀಪವಾಗಿಯೂ ಇರುವುದರಿಂದ ಗೋಪ್ಯವಾಗಿ ದಂಡನ್ನು ಕೂಡಿಸಿಡುವುದಕ್ಕೆ ತಕ್ಕ ಸ್ಥಳವಾಗಿರುವುದು. ಆ ಪ್ರದೇಶದ ಜನರು ದೃಢ ಕಾಯರು, ಬಲಿಷ್ಠರು, ಕಾರ್ಯ ಕುಶಲರು; ಅವರು ದುರಾರೋಹ ಪರ್ವತಗಳನ್ನು ಹತ್ತಿ ಇಳಿವುದರಲ್ಲಿ ನಿಪುಣರು. ಆ ದುರ್ಗವು ರಾಜಧಾನಿಗೆ ತಕ್ಕ ಸ್ಥಳವೆಂದು ಷಾಹಜಿ ತನ್ನ ಮಗನಿಗೆ

ಹೇಳಿದನು. ಅದೇ ಮೇರೆಗೆ ಶಿವಾಜಿ ಅದನ್ನು ಹೊಸದಾಗಿ ಕಟ್ಟಿಸಲು ಆಜ್ಞೆಮಾಡಿದನು. ರಾಜ್ಯವನ್ನು ನೋಡುತ್ತ ನೋಡುತ್ತ ಕುಟುಂಬ ಸಹಿತ ತಂದೆ ಮಕ್ಕಳಿಬ್ಬರೂ ಸತಾರ ನಗರಕ್ಕೆ ಹೋಗಿ ಮುಟ್ಟಿದರು. ಅಲ್ಲಿ ರಾಮದಾಸ ಸ್ವಾಮಿಯ ದರ್ಶನ ಮಾಡಿಕೊಂಡು ಪನ್ಹಾಲವೆಂಬ ದುರ್ಗಕ್ಕೆ ಹೋದರು. ಈ ರೀತಿಯಾಗಿ ಎರಡು ತಿಂಗಳು ಕಳೆಯಿತು. ಷಾಹಜಿ ಬಿಜಾಪುರಕ್ಕೆ ಹೊರಡುವೆನೆಂದು ಮಗನಿಗೆ ಹೇಳಿದನು. ಆ ಮಾತನ್ನು ಕೇಳಿ ಶಿವಾಜಿಯು, "ಬಿಜಾಪುರಕ್ಕೆ ಹೋಗಕೆಲಸವಿಲ್ಲ; ತಾವು ಅಧೀಶ್ವರರಾಗಿ ರಾಜ್ಯವನ್ನಾಳಬಹುದು; ನಾನು ತಮ್ಮ ಆಜ್ಞಾನು ವರ್ತಿಯಾಗಿದ್ದು ಕೃತಾರ್ಥನಾಗುವೆನು" ಎಂದು ತಂದೆಗೆ ಎಷ್ಟೋ ತೆರವಾಗಿ ಹೇಳಿದನು. ಷಾಹಜಿ ಅದಕ್ಕೊಡಂಬಡಲಿಲ್ಲ; ಹೊರಡುವ ಸಮಯದಲ್ಲಿ ಬಿಜಾಪುರ ಸಂಸ್ಥಾನಕ್ಕೆ ವಿರೋಧವಾಗಿ ಅಸ್ತ್ರಧಾರಣೆ ಮಾಡಬೇಡವೆಂದು ಮಗನಿಗೆ ಹೇಳಿದನು. ಶಿವಾಜಿ ತಂದೆಯ ಮಾತನ್ನು ಮಿರಲಿಲ್ಲ. ಬಿಜಾಪುರ ಸಂಸ್ಥಾನದವರು ಶಿವಾಜಿಯ ಮೇಲೆ ದಂಡೆತ್ತಿ ಹೋಗದೆ ಸ್ವಾರ್ಥ ರಕ್ಷಣೆಯೆಷ್ಟೋ ಅಷ್ಟನ್ನು ನೋಡಿಕೊಂಡಿರುವ ವರೆಗೂ ಶಿವಾಜಿ ಅವರ ಗೋಜಿಗೆ ಹೋಗಲಿಲ್ಲ, ಅವರಿಗೆ ಕೇಡನ್ನು ಬಯಸಲಿಲ್ಲ. ಮಗನಿಗೆ ಬುದ್ಧಿವಾದಗಳನ್ನು ಹೇಳಿ ಷಾಹಜಿ ಬಿಜಾ ಪುರಕ್ಕೆ ಹಿಂದಿರುಗಿದನು; ಹೊರಡುವಾಗ ಅವನಿಗೊಂದು ಕತ್ತಿ ಯನ್ನು ಕೊಟ್ಟನು. ಅದಕ್ಕೆ ಶಿವಾಜಿ 'ತುಳಜಾ' ಎಂದು ಹೆಸ ರಿಟ್ಟು ತಂದೆಯ ಗುರುತಾಗಿ ಯಾವಾಗಲೂ ಅದನ್ನು ಸಂಗಡಲೇ ತೆಗೆದು ಕೊಂಡು ಹೋಗುತ್ತಿದ್ದನು. ಷಾಹಜಿ ಮಗನ ಸಂಗಡ ಸೇರಿ ಬಿಜಾಪುರ ಸಂಸ್ಥಾನವನ್ನು ಹಾಳುಮಾಡುವುದಕ್ಕೆ ಒಳಗೇ ಯತ್ನಿಸುತ್ತಿದ್ದನೆಂದು ಕೆಲವರು ದೋಷಾರೋಪ ಮಾಡಿರುವರು. ಷಾಹಜಿ ಶೂರನು, ದೂರದರ್ಶಿ, ಕಾರ್ಯದಕ್ಷನು. ಅವನು ಮಗನಿಗೆ ಉತ್ತ್ಸಾಹಸೆಯಾಗಿ ಕಾರ್ಯಗಳನ್ನು ನಡೆಯಿಸುತ್ತಿದ್ದರೆ ಶಿವಾಜಿಯ ಅಭೀಷ್ಟಗಳೆಲ್ಲವೂ ಇನ್ನೂ ಬೇಗ ಕೈಗೂಡುತ್ತಿದ್ದುವು. ಆದರೆ ಅವನು ಪಾಪ ಭೀರು, ಪ್ರಭು ಪರಾಯಣನು. ಆದುದರಿಂದಲೇ ಅವನು ಬಿಜಾಪುರದಲ್ಲಿ ತನಗಾದ ಅನ್ಯಾಯಗಳನ್ನೂ ಅಪಮಾನಗಳನ್ನೂ ಮರೆತು ಮಗನಿಗೆ ಯಾವ ಬಗೆ

ಯಲ್ಲಿ ಬುದ್ಧಿ ಹೇಳಬೇಕೋ ಹೇಳಿ ಅವನು ಬಿಜಾಪುರದ ಗೋಜಿಗೆ ಹೋಗದಂತೆ ಸಂಧಿಯನ್ನು ಮಾಡಿಸಿದನು.

ಪರರಾಯರ ಕಾಟವಿಲ್ಲದೆ ಹೋಗಲು, ಶಿವಾಜಿ ನಿಶ್ಚಿಂತನಾಗಿ ಸ್ವರಾಜ್ಯ ಪಾಲನೆಯಲ್ಲಿ ಮನಸ್ಸಿಟ್ಟನು. ಅವನ ರಾಜ್ಯದ ವಿಸ್ತಾರವು ಅಲ್ಪವಾಗಿರಲಿಲ್ಲ. ತನ್ನ ಬಾಹು ಬಲದಿಂದಲೇ ಶಿವಾಜಿ ಕಲ್ಯಾಣದಿಂದ ಗೋವೆಯವರೆಗೂ ವಿಸ್ತರಿಸಿರುವ ಕೊಂಕಣ ದೇಶವನ್ನೂ ಭೀಮಾ ನದಿಯಿಂದ ವರುಣಾ ನದಿಯ ವರೆಗೆ ವ್ಯಾಪಿಸಿರುವ ಕೊಂಕಣ ಘಾಟಮಾಥವನ್ನೂ ಗೆದ್ದನು; ಕಣ್ಣು ಸನ್ನೆ ಮಾಡುವಷ್ಟರಲ್ಲಿ ಅರುವತ್ತು ಸಾವಿರ ಪದಾತಿಯನ್ನೂ ಹದಿನೈದು ಸಾವಿರ ಅಶ್ವಾರೋಹಿ ಸೇನೆಯನ್ನೂ ಯುದ್ಧಕ್ಕೆ ತರಲು ಸಮರ್ಥನಾಗಿದ್ದನು. ಆ ಸೇನೆಯೆಲ್ಲವೂ ಸರ್ವದಾ ಯುದ್ಧಕ್ಕೆ ಸನ್ನದ್ಧವಾಗಿರುತ್ತಿದ್ದಿತು. ಅದೂ ಅಲ್ಲದೆ, ದೇಶದಲ್ಲಿ ಪ್ರಾಯ ವಯಸ್ಕರಾದವರೆಲ್ಲರೂ, ಅಪ್ಪಣೆ ಕೊಟ್ಟರೆ ಸಾಕೆಂದು, ಶತ್ರು ಸಂಹಾರಕ್ಕೆ ಹೊರಡುತ್ತಿದ್ದರು. ಈ ರೀತಿಯಲ್ಲಿ ಶಿವಾಜಿ ಹದಿನಾರು ವರ್ಷಗಳ ಅಧ್ಯವಸಾಯದಿಂದಲೂ ಪರಿಶ್ರಮದಿಂದಲೂ ಕ್ಷಿಪ್ರಕಾರಿತೆಯಿಂದಲೂ ಬುದ್ಧಿಬಲದಿಂದಲೂ ಸಾಮಾನ್ಯವಾದ ಸ್ಥಿತಿಯಿಂದ ಉನ್ನತಿಗೆ ಬಂದು ವಿಶಾಲವಾದ ರಾಜ್ಯವನ್ನು ಸಂಸ್ಥಾಪನೆ ಮಾಡಿದನು. ಆಗಿನ ರಾಜರೆಲ್ಲರೂ ಅವನ ಸ್ನೇಹವನ್ನು ಪ್ರಾರ್ಥಿಸಿ ಅವನ ಹಗೆಗೆ ಹೆದರುವರಾದರು.

ಶಿವಾಜಿಯು ರಾಜ್ಯ ಸಂಸ್ಥಾಪನೆ ಮಾಡಲು ಸಂಕಲ್ಪ ಮಾಡಿದ ಕಾಲದಲ್ಲಿ ಭರತಭೂಮಿ ನಿಶ್ಚೇತನವಾಗಿ ಶೋಚನೀಯ ಸ್ಥಿತಿಯಲ್ಲಿದ್ದಿತು; ಧರ್ಮಗಳೆಲ್ಲವೂ ಖಿಲವಾಗುತ್ತಿದ್ದುವು. ವರ್ಣಕ್ಕೆ ವರ್ಣವೂ, ಧರ್ಮಕ್ಕೆ ಧರ್ಮವೂ, ಸಂಪ್ರದಾಯಕ್ಕೆ ಸಂಪ್ರದಾಯವೂ, ಭಾಷೆಗೆ ಭಾಷೆಯೂ ವಿರೋಧವಾಗಿದ್ದಿತು. ಈ ಅನೈಕ್ಯ ಭಾವಗಳನ್ನು ದೂರಮಾಡಿ ಐಕ್ಯ ಭಾವವನ್ನು ಕಲ್ಪಿಸಿ, ವನಚರರಾಗಿಯೂ ಅಶಿಕ್ಷಿತರಾಗಿಯೂ ಇದ್ದ ಮಾವಳಿಗಳನ್ನು ಕಟ್ಟಿಕೊಂಡು, ಪ್ರತಿಕೂಲಗಳು ಅನೇಕವಾಗಿದ್ದರೂ, ಶೌರ್ಯದಿಂದಲೂ ಕೌಶಲದಿಂದಲೂ ರಾಜ್ಯವನ್ನು ಸ್ಥಾಪಿಸಿದನು. ರಾಮದಾಸ ಸ್ವಾಮಿಯ ಪ್ರಯತ್ನಗಳೂ ಉಪದೇಶಗಳೂ ಜನ ಸಾಮಾನ್ಯದ ಬುದ್ಧಿಯನ್ನೂ ಚರ್ಯವನ್ನೂ ಅಂದವಿಟ್ಟು ಅನೇಕ ನ್ಯೂನತೆಗಳನ್ನು

ಪರಿಹಾರ ಮಾಡಿದುವು. ರಾಮದಾಸನು ನಿಷ್ಕಾಮ ಮಂತ್ರಿಯಾಗಿ ಕಾಲ ಕಾಲದಲ್ಲಿ ಶಿವಾಜಿಗೆ ಉಪದೇಶವನ್ನು ಮಾಡುತ್ತ ಅವನಿಗೆ ಅನುಕೂಲವಾಗಿ ಕಾರ್ಯಗಳನ್ನು ಮಾಡುತ್ತಿದ್ದನು. ಆದರೂ ಶಿವಾಜಿ ಸಂಕಲ್ಪಿಸಿದ್ದ ಮಹಾ ಕಾರ್ಯಕ್ಕೆ ಆಗಬೇಕಾದಷ್ಟು ಸಹಾಯ ಸೌಕರ್ಯಗಳು ಯಾವುದರಿಂದಲೂ ಒದಗಲಿಲ್ಲ. ಈ ಸ್ಥಿತಿಯಲ್ಲಿ ಅವನು ಸಾಧಿಸಿದ ಕಾರ್ಯವು ಸಾಮಾನ್ಯವಾದುದೆಂದು ಯಾರೂ ಹೇಳಲಾರರು. ಭಂಗವನ್ನು ಕಾಣದ ಅವನ ವೀರತ್ವವೂ, ಸ್ವಾರ್ಥವನ್ನು ಕಾಣದ ಅವನ ದೇಶ ಹಿತೈಷಿತೆಯೂ, ಕಡೆಗಾಣದ ಅವನ ಪ್ರತ್ಯುತ್ಪನ್ನ ಬುದ್ಧಿಯೂ ಎಷ್ಟು ದೃಢವಾದುದೊ, ಎಷ್ಟು ಶುದ್ಧವಾದುದೊ, ಎಷ್ಟು ವ್ಯಾಪಕವಾದುದೊ ಊಹಿಸಲು ಶಕ್ಯವಲ್ಲ.

---

## ಹತ್ತನೆಯ ಪ್ರಕರಣ

---

## ಮೊಗಲರಿಗೂ ಶಿವಾಜಿಗೂ ಯುದ್ಧಗಳು.

ಅವರಂಗಜೇಬನು ತಂದೆಯು ದೇಹಸ್ಥಿತಿ ಅಪಾಯಕರವಾಗಿದ್ದುದನ್ನು ಕೇಳಿ ಉತ್ತರ ಹಿಂದೂಸ್ಥಾನಕ್ಕೆ ಹೋಗಿ ಸಹೋದರರನ್ನು ಕೊಂದು ತಂದೆಯನ್ನು ಸೆರೆಯಲ್ಲಿ ಹಾಕಿ ಸಿಂಹಾಸನವನ್ನೇರಿದ ಸಂಗತಿ ಇತಿಹಾಸದಲ್ಲಿ ಸ್ಪಷ್ಟಾಕ್ಷರದಲ್ಲಿ ಹೇಳಿರುವುದಷ್ಟೆ. ಯಾವ ಸಮಯದಲ್ಲಿ ಅವರಂಗಜೇಬನು ತನ್ನ ಆಧಿಪತ್ಯವನ್ನು ನೆಲೆಗೊಳಿಸುವುದಕ್ಕಾಗಿ ಸನ್ನಾಹಗಳನ್ನು ಮಾಡುತ್ತಿದ್ದನೊ ಆ ಸಮಯದಲ್ಲಿ ಶಿವಾಜಿ ಅಫ್ಜುಲ್ ಖಾನನನ್ನು ಸಂಹರಿಸಿ, ಬಿಜಾಪುರದ ಸೇನೆಯನ್ನು ಜಯಿಸಿ, ಹಿಂದೂ ರಾಜರೊಳಗೆ ಐಕಮತ್ಯವನ್ನು ಕಲ್ಪಿಸಿ, ಭಾರತ ಸಮುದ್ರದ ವಕ್ಷಸ್ಥಲದಲ್ಲಿ ಹಿಂದೂ ಪತಾಕೆಯನ್ನು ನಟ್ಟು ತನ್ನ ಬಲವನ್ನು ದೃಢೀಕರಿಸಿದನು. ಪರಂತು, ಕ್ರಿ. ಶ. ೧೬೫೭ನೆಯ ವರ್ಷದಲ್ಲಿ ಜುನ್ನಾರ್ ಎಂಬ ಸ್ಥಳದ ಮೇಲೆ ದಂಡೆತ್ತಿಹೋದುದು ಹೊರತು, ಶಿವಾಜಿ ದಕ್ಷಿಣದಲ್ಲಿ ಮೊಗಲರ ಮೇಲೆ ಈವರೆಗೆ ಯಾವ ಜಗಳಕ್ಕೂ ಹೋಗಲಿಲ್ಲ. ಅವರಂಗಜೇಬನು ಉತ್ತರ ದೇಶದಲ್ಲಿ ತನ್ನ ಆಧಿಪತ್ಯವನ್ನು ದೃಢವಾಗಿ ಸ್ಥಾಪಿಸಿದ ಬಳಿಕ ತನ್ನ ಜ್ಯೇಷ್ಠ ಪುತ್ರನಾದ ಮುಆಜಿಮ್ ಎಂಬವನನ್ನು ಸುಬೇದಾರನನ್ನಾಗಿಯೂ ಷಯಿಸ್ತಾಖಾನನೆಂಬವನನ್ನು ಸೇನಾಪತಿಯನ್ನಾಗಿಯೂ ದಕ್ಷಿಣ ದೇಶಕ್ಕೆ ಕಳುಹಿಸಿದನು. ವಿಪುಳ ಪಾಪಿಸೇ ಸಹಿತರಾಗಿ ಅವರು ದಕ್ಷಿಣ ದೇಶಕ್ಕೆ ಹೊರಟರು.

ಷಯಿಸ್ತಾಖಾನನು ಸೇನೆಯೊಂದಿಗೆ ಬರುತ್ತಿರುವ ಸುದ್ದಿಯು ಚಾರರ ಮೂಲಕವಾಗಿ ಶಿವಾಜಿಗೆ ತಿಳಿಯಿತು. ಅವನು ಕೂಡಲೆ ಯುದ್ಧ ಸಾಮಗ್ರಿಗಳನ್ನೂ ಸೇನೆಯನ್ನೂ ಜೋಡಿಸಲು ಆಜ್ಞೆಮಾಡಿದನು. ಮೋರೋಪಂತ ಪೇಶ್ವೆಯು ಪದಾತಿ ಸೇನೆಯೊಡನೆ ಹೋಗಿ ಜುನ್ನಾರಿಗೆ ಉತ್ತರದಲ್ಲಿದ್ದ ಅನೇಕ ದುರ್ಗಗಳನ್ನು ಹಿಡಿದನು. ನೇತಾಜಿ ಪಾಲ್ಕ

ರನು ಮಳೆಗಾಲವು ತೀರುತ್ತಲೆ ಮೊಗಲರ ರಾಜ್ಯದ ಮೇಲೆ ದಂಡೆತ್ತಿ ಹೋಗಿ ಹಳ್ಳಿಗಳನ್ನು ಸೂರೆಗೊಂಡು, ಪಟ್ಟಣಗಳಲ್ಲಿ ಚೌತ್ಥಾಯಿ ಯನ್ನು ಸಂಗ್ರಹಿಸಿ, ಅವರಂಗಾಬಾದಿನ ವರೆಗೆ ದೇಶವೆಲ್ಲವನ್ನೂ ಬಾಯ್ಬಿಡಿಸಿದನು. ಇದಕ್ಕೆ ಮುಯ್ಯಾಗಿ ಷಯಿಸ್ತಾಖಾನನು ಅವರಂಗಾ ಬಾದಿನಿಂದ ಹೊರಟು ದಾರಿಯಲ್ಲಿ ಸಿಕ್ಕಿದ ಗ್ರಾಮಗಳಿಗೆಲ್ಲ ಬೆಂಕಿ ಯಿಟ್ಟು ಹೊಲ ಗದ್ದೆಗಳನ್ನೆಲ್ಲ ಹಾಳುಮಾಡಿ ಶಿವಾಜಿಯ ವಶದಲ್ಲಿದ್ದ ಸ್ಥಳಗಳನ್ನೆಲ್ಲ ತೆಗೆದುಕೊಳ್ಳುವ ನಿಮಿತ್ತವಾಗಿ ದಂಡು ದಾಳಿಗಳನ್ನು ಕಳುಹಿಸಿ ಕಡೆಗೆ ಪುಣೆಗೆ ಬಂದಿಳಿದನು.

ಈ ನಡುವೆ ಮೊಗಲ್ ಅಧಿಕಾರಿಗಳು ತಾವು ಸಂಗ್ರಹಿಸಿಟ್ಟಿದ್ದ ಕಂದಾಯದ ಹಣವನ್ನು ಮರಾಟೆಯವರ ಭಯದಿಂದ ಅವರಂಗಾ ಬಾದಿಗೆ ಕಳುಹಿಸುವುದಕ್ಕೆ ಆಗದಿದೆಯೆಂದು ಷಯಿಸ್ತಾಖಾನನಿಗೆ ತಿಳಿ ಸಲು ಖಾನನು, "ನೀವು ಗಂಡುಸರಾದರೂ ಮರಾಟೆಯವರೆದುರಿಗೆ ಹೋಗಲಂಜುತ್ತಿದ್ದೀರಿ. ನಾನು ಹೆಂಗುಸೊಬ್ಬಳನ್ನು ಕಳುಹಿಸು ತ್ತೇನೆ, ಆಕೆ ಅವರಿಗೆ ಅಂಜುವುದಿಲ್ಲ" ಎಂದು ಬರೆದು ಉದಾರಾಮ ದೇಶಮುಖನೆಂಬವನ ಹೆಂಡಿತಿಯಾದ ರಾಯ್ ಬಾಗಿನಿಯನ್ನು ದಂಡಿ. ನೊಡನೆ ಕಳುಹಿಸಿದನು. ಅವಳು ಹೆಂಗುಸಾದರೂ ಶೂರಳು, ರಣ ನಿಪುಣೆ; ಅವಳು ಹೆದರದೆ ಶಿವಾಜಿಯ ಸಂಗಡ ಯುದ್ಧಮಾಡಿದಳು. ಅವನು ಅವಳನ್ನು ಕೈಸೆರೆ ಹಿಡಿದು ಅವಳ ಸೇನೆಯನ್ನು ಚದರಿಸಿ ಬಿಟ್ಟನು.

ಷಯಿಸ್ತಾಖಾನನು ಪುಣೆಗೆ ಬಂದ ಸುದ್ದಿಯನ್ನು ಕೇಳಿ ಶಿವಾಜಿ ರಾಯಗಡದಿಂದ ಹೊರಟು ಶತ್ರುಗಳಿಗೆ ಅಭೇದ್ಯವಾದ ಸಿಂಹಗಡಕ್ಕೆ ಹೋಗಿ ಹೆಂದಿರು ಮಕ್ಕಳನ್ನು ಅಲ್ಲಿ ಬಿಟ್ಟು, ಮುಂದೆ ಷಯಿಸ್ತಾ ಖಾನನನ್ನು ಗೆಲ್ಲುವ ಉಪಾಯವನ್ನು ಯೋಚಿಸಿದನು.

ಪುಣೆ ಕೈಸೇರಿದ ತರುವಾಯ ಷಯಿಸ್ತಾಖಾನನು ಚಾಕಣ ದುರ್ಗವನ್ನು ಹಿಡಿಯಲು ಹೊರಟನು. ಫಿರಂಗಜಿ ನರಸಾಲನೆಂಬ ವೀರನು ಈ ದುರ್ಗಕ್ಕೆ ಅಧಿಕಾರಿಯಾಗಿದ್ದನು. ಖಾನನು ಸೇನಾ ಸಮೇತನಾಗಿ ಬರುವ ವರ್ತಮಾನವನ್ನು ಕೇಳುತ್ತಲೆ ಮರಾಟೆಯವರು

ಕೋಟೆಯನ್ನು ಸದ್ದುಮಾಡದೆ ಒಪ್ಪಿಸಿಬಿಡುವರೆಂದು ಷಯಿಸ್ತಾ ಖಾನನು ಭಾವಿಸಿದನು. ಪರಂತು, ಚಾಕಣ ದುರ್ಗವನ್ನು ಗೆಲ್ಲು ವುದು ಅವನೆಣಿಸಿದಂತೆ ಸುಖ ಸಾಧ್ಯವಾಗಲಿಲ್ಲ. ಫಿರಂಗಜಿ ನರಸಾ ಲನು ಅವನು ಬರುತ್ತಿರುವ ವರ್ತಮಾನವನ್ನು ಕೇಳಿ ಯುದ್ಧಕ್ಕೆ ಸಿದ್ಧ ನಾದನು. ಮೊಗಲ್ ಸೈನಿಕರು ಚಾಕಣ ದುರ್ಗವನ್ನು ಮುತ್ತಿ ಯುದ್ಧ ವಾರಂಭಿಸಿ ಎಷ್ಟೋ ಪರಾಕ್ರಮದಿಂದ ಕಾಳೆಗ ಮಾಡಿದರು. ಆದರೂ ಮರಾಟೆಯವರು ಕೋಟೆಯನ್ನು ಬಿಟ್ಟುಕೊಡಲಿಲ್ಲ. ಫಿರಂಗಜಿಯು ಪ್ರಾಣದ ಮೇಲಣ ಆಸೆಯನ್ನು ತೊರೆದು ನಿರ್ಭಯದಿಂದ ಮುಂದಾಳಾಗಿ ನಿಂತು, ತನ್ನ ಸೈನಿಕರಲ್ಲಿ ಪ್ರೀತಿಯನ್ನು ತೋರಿಸುತ್ತ, ಅವರನ್ನು ಪ್ರೋತ್ಸಾಹಿಸಿ ಅವರ ಸಾಹಸವನ್ನೂ ಕ್ಷಿಪ್ರಕಾರಿತೆಯನ್ನೂ ಕಾರ್ಯ ಪರಾಯಣತೆಯನ್ನೂ ವೃದ್ಧಿಗೊಳಿಸಿದನು. ಉಭಯ ಪಕ್ಷದವರೂ ಹಿಂದೆಗೆಯದೆ ಕಾಳೆಗ ಮಾಡಿದರು. ಒಂದು ದಿನವಾಯಿತು, ಒಂದು ವಾರವಾಯಿತು, ಒಂದು ತಿಂಗಳೂ ಆಯಿತು. ಚಾಕಣ ದುರ್ಗವು ಮೊಗ ಲರ ವಶವಾಗಲಿಲ್ಲ. ಹೀಗೆ ವಿಫಲ ಮನೋರಥರಾಗಿ ಐವತ್ತಾರನೆಯ ದಿವಸ ಮೊಗಲರು ಈಶಾನ್ಯ ದಿಕ್ಕಿನ ಕೊತ್ತಳವನ್ನು ಸುರಂಗ ಹಾಕಿ ಒಡೆ ದರು; ಅನಂತರ ಕೋಟೆಯೊಳಗೆ ನುಗ್ಗುವುದಕ್ಕೆ ಹೊರಟರು. ಈ ವಿಪ ತ್ಕಾಲದಲ್ಲಿ ಫಿರಂಗಜಿ ಹಿಂದುಳಿಯದೆ ತನ್ನ ಶೌರ್ಯವನ್ನೂ ಪ್ರಭು ಪರಾ ಯಣತೆಯನ್ನೂ ಸ್ವದೇಶ ಪ್ರೇಮವನ್ನೂ ತೋರುವುದಕ್ಕವಕಾಶವು ಸಿಕ್ಕಿತೆಂದು ಹಿಗ್ಗುತ್ತ ಮೊಗಲರ ಮೇಲೆ ಬಿದ್ದನು. ಮೊಗಲರು ಕೋಟೆ ಯೊಳಗೆ ಹೋಗಲಾರದೆ ಹೋದರು. ಒಡೆದ ಕೋಟೆಯ ಗೋಡೆಯ ಬಳಿ ಮರಾಟೆಯವರು ದಾರಿಯನ್ನು ಕಟ್ಟಿ ನಿಂತು ದುರ್ಗವನ್ನು ರಕ್ಷಿಸಿದರು; ರಾತ್ರಿಯಾಯಿತು; ಮೊಗಲರು ಕಾಳೆಗವನ್ನು ನಿಲ್ಲಿಸಿದರು. ಆ ಭಗ್ನಾವಸ್ಥೆಯಲ್ಲಿದ್ದ ದುರ್ಗವನ್ನು ರಕ್ಷಿಸಲು ಪ್ರಯಾಸಪಡುವುದು ವ್ಯರ್ಥವೆಂದೆಣಿಸಿ ಫಿರಂಗಜಿಯು ಷಯಿಸ್ತಾಖಾನನಿಗೆ ದುರ್ಗವನ್ನು ಅರ್ಪಿಸಿದನು. ಷಯಿಸ್ತಾಖಾನನು ಫಿರಂಗಜಿಯ ವೀರತ್ವಕ್ಕೆ ಮೆಚ್ಚಿ ಮರುಳಾಗಿ ಅವನನ್ನು ಸ್ವಪಕ್ಷಕ್ಕೆ ಬರುವ ಹಾಗೆ ಮಾಡುವ ಉದ್ದೇಶ ದಿಂದ ಬಗೆ ಬಗೆಯ ಆಸೆಗಳನ್ನಿಟ್ಟನು. ಆ ವೀರ ಹೃದಯನು, "ಶಿವಾಜಿಯ

ಸೇವಕರಲ್ಲಿ ನಾನು ಅತಿ ನಿಕೃಷ್ಟನು. ನಾನು ಅವನ ಕಡೆ ಇದ್ದರೆ ಲಾಭ ವಿಲ್ಲ, ಇಲ್ಲದಿದ್ದರೆ ನಷ್ಟವಿಲ್ಲ. ಇದೂ ಅಲ್ಲದೆ, ಅವನು ನನ್ನ ಜೀವನ ಕ್ಕಾಗಿ ಏನು ಕೊಡುತ್ತಿದ್ದಾನೊ ಅದು ನನ್ನ ಸಂಸಾರಕ್ಕೆ ಸಾಕಾಗಿ ಅತಿಥಿ ದೇವತೆಗಳ ಪೂಜೆಗೂ ಸಾಕಾಗುವಷ್ಟು ಮಿಗುವುದು. ನನ್ನ ಬದುಕಿನಲ್ಲಿ ನಾನು ತೃಪ್ತನಾಗಿರುವೆನು'' ಎಂದು ಹೇಳಿದನು. ಯಾವ ಸಮಯದಲ್ಲಿ ದಿಳ್ಳೀಶ್ವರನು ಜಗದೀಶ್ವರನೆಂದು ವಿಖ್ಯಾತನಾಗಿದ್ದನೊ, ಯಾವ ಸಮಯದಲ್ಲಿ ಅವನ ಕೈಯ ಕೆಳಗೆ ಸಾಮಾನ್ಯವಾದ ಕೆಲಸ ಸಿಕ್ಕಿದರೂ ಪರಮ ಭಾಗ್ಯವು ಲಭಿಸಿದಂತೆ ಜನರು ಭಾವಿಸುತ್ತಿದ್ದರೊ ಆ ಸಮಯದಲ್ಲಿ ಫಿರಂಗಜಿಯು ಮೊಗಲ್ ಸಮ್ರಾಜನ ಅನುಗ್ರಹ ಕ್ಕಾಸೆಪಡದೆ ತೋರಿಸಿದ ಸ್ವದೇಶಾನುರಾಗವು ಸಾಮಾನ್ಯವಾದುದಲ್ಲ. ಅವನು ಷಯಿಸ್ತಾಖಾನನ ಅಪ್ಪಣೆಯನ್ನು ಪಡೆದು ಶಿವಾಜಿಯ ಬಳಿಗೆ ಹೋಗಿ ನಡೆದ ನಡತೆಗಳನ್ನೆಲ್ಲ ವಿವರಿಸಿದನು. ಶಿವಾಜಿ ಅವನನ್ನು ಪ್ರೀತಿ ಯಿಂದ ಕಂಡು ಸನ್ಮಾನಿಸಿದುದಲ್ಲದೆ ಭೂಪಾಲಗಡಕ್ಕೆ ದುರ್ಗಾಧಿಪತಿ ಯನ್ನಾಗಿ ನೇಮಿಸಿ ಕಳುಹಿಸಿದನು.

ಚಾಕಣ ದುರ್ಗದ ಮುತ್ತಿಗೆಯಲ್ಲಿ ಒಂಬೈನೂರು ಮಂದಿಗೆ ಕಡಿಮೆ ಇಲ್ಲದೆ ಮೊಗಲ್ ಸೈನಿಕರು ಹತರಾದರು. ಆದರೆ ಬಂದಿದ್ದ ಮೊಗಲರ ಸೇನೆಯನ್ನೆಲ್ಲ ನೋಡಲಾಗಿ ಹತರಾದವರ ಸಂಖ್ಯೆ ಅತ್ಯಲ್ಪ ವೆಂದು ಹೇಳಬೇಕು. ಆದರೂ ಅಲ್ಲಿ ನಡೆದ ಯುದ್ಧದಿಂದ—ಗಿರಿ ದುರ್ಗ ಗಳನ್ನು ಜಯಿಸುವುದು ಕಷ್ಟಸಾಧ್ಯವು, ಮಹಾರಾಷ್ಟ್ರೀಯರು ಬಲಾಢ್ಯರು, ಯುದ್ಧ ನಿಪುಣರು, ಅವರು ಜೀವಗಳ್ಳರಲ್ಲ, ಅರ್ಧಕ್ಕಾನೆ ಬಿದ್ದು ವಶರಾಗುವರಲ್ಲ—ಎಂಬೀ ವಿಷಯಗಳು ಷಯಿಸ್ತಾಖಾನನ ಹೃದಯದಲ್ಲಿ ಚೆನ್ನಾಗಿ ಅಂಕಿತವಾದುವು. ಅವನು ಚಾಕಣದಿಂದ ಪುಣೆಗೆ ಹೋಗಿ ಅಲ್ಲಿ ದಾದಾಜಿ ಕೊಂಡದೇವನು ಕಟ್ಟಿಸಿದ್ದ ರಂಗಮಹಲಿನಲ್ಲಿ ಕೆಲವು ದಿನಗಳಿದ್ದನು. ಅವರಂಗಜೇಬನು ತನ್ನ ಸೋದರ ಮಾವನು ಪುಣೆಯಲ್ಲಿ ತೂಕಡಿಸುತ್ತಿದ್ದ ವರ್ತಮಾನವನ್ನು ಕೇಳಿ ಜೋಧಪುರ ಸಂಸ್ಥಾನದ ದೊರೆಯಾದ ಯಶವಂತಸಿಂಹನನ್ನು ಸೇನೆಯೊಡನೆ ಅವನ ಬಳಿಗೆ ಕಳುಹಿಸಿದನು. ಇತ್ತ, ನೇತಾಜಿ ಪಾಲ್ಕರನು ಅಹಮದ್‌ನಗರ,

ಅವರಂಗಾಬಾದು ಮೊದಲಾದ ಪ್ರದೇಶಗಳಿಗೆ ಹೋಗಿ ಊರುಗಳನ್ನು ಕೊಳ್ಳೆಗೊಂಡು ತಲ್ಲಣಗೊಳಿಸಿದನು. ಅವನು ವಿಜಯ ಲಬ್ಧ ದ್ರವ್ಯ ವನ್ನು ಸಾಗಿಸಿಕೊಂಡು ಹಿಂದಿರುಗಿ ಹೋಗುತ್ತಿರುವಾಗ ಶತ್ರುಗಳ ಕೈಗೆ ಸಿಕ್ಕಿ ಹತನಾಗುತ್ತಿದ್ದನು; ಆದರೆ ತನ್ನ ಪ್ರತ್ಯುತ್ಪನ್ನ ಬುದ್ಧಿ ಬಲದಿಂದಲೂ ಬಿಜಾಪುರದ ಸೇನಾಪತಿಯಾದ ರುಸ್ತುಮ್ ಜುಮಾನ ನೆಂಬವನ ಸಹಾಯದಿಂದಲೂ ತಪ್ಪಿಸಿಕೊಂಡನು.

ಶಿವಾಜಿಯು ಸಿಂಹಗಡದಲ್ಲಿರುತ್ತ ಷಯಿಸ್ತಾಖಾನನ ಕಾರ್ಯ ಕಲಾಪಗಳನ್ನು ಕಾಯುತ್ತಿದ್ದನು. ಷಯಿಸ್ತಾಖಾನನು ತಾನೇ ಶೂರನೂ ಸುಚತುರನೂ ಎಂಬ ಹೆಮ್ಮೆಯಿಂದ, ಶಿವಾಜಿಯು ಮಂಗ ನೆಂದೂ ಮಂಗನು ಕಾಡಿನಲ್ಲಿರುವುದೇ ಕ್ಷೇಮಕರವೆಂದೂ ಪರಿಹಾಸ ಮಾಡಿ ಪಾರ್ಸೀಕ ಭಾಷೆಯಲ್ಲಿ ಒಂದು ಶ್ಲೋಕವನ್ನು ಬರೆಯಿಸಿ ಕಳು ಹಿಸಿದನು. ಅದಕ್ಕೆ ಶಿವಾಜಿ ತಾನು ಮಂಗನು ಮಾತ್ರವೇ ಅಲ್ಲದೆ ಮಂಗೇಶನೂ ಅಹುದೆಂದೂ, ಶ್ರೀರಾಮನು ಮಂಗಗಳ ಸಹಾಯದಿಂದ ರಾವಣಾಸುರನನ್ನು ಸಂಹಾರಮಾಡಿದಂತೆ ತಾನು ಷಯಿಸ್ತಾಖಾನ ನನ್ನು ಸಂಹಾರಮಾಡಲು ಪ್ರತಿಜ್ಞೆಮಾಡಿರುವೆನೆಂಬ ಅರ್ಥಕ್ಕೆ ಸಂಸ್ಕೃತದಲ್ಲೊಂದು ಶ್ಲೋಕವನ್ನು ಬರೆಯಿಸಿ ಕಳುಹಿಸಿದನು; ಅದು ಹಾಗಿರಲಿ, ಶಿವಾಜಿಗೆ ಅಂಜಿ ಮರಾಟಿಯ ಕಾಲಾಳುಗಳನ್ನಾಗಲಿ ಸವಾರ ರನ್ನಾಗಲಿ ಪುಣೆಯೊಳಗೆ ಬಿಡಕೂಡದೆಂದೂ ಮರಾಟಿಯವರು ಯಾರೇ ಆಗಲಿ ಅಪ್ಪಣೆಯನ್ನು ಪಡೆಯದೆ ಮನೆಯಲ್ಲಿ ಆಯುಧಗಳನ್ನಿಟ್ಟರೆ ಅವರು ಕಠಿನ ದಂಡನೆಗೆ ಗುರಿಯಾಗುವರೆಂದೂ ಆಜ್ಞೆಮಾಡಿದನು. ಹೀಗಿರಲು, ಶಿವಾಜಿಯು ಒಂದು ದಿನ ಸಿಂಹಗಡದ ಸುತ್ತಮುತ್ತಲಿರುವ ಬೆಟ್ಟಗಳ ಮೇಲೂ ದಾರಿಯಲ್ಲಿ ಗಿಡಗಳ ಮೇಲೂ ಪಂಜುಗಳನ್ನು ಕಟ್ಟಿಸಿ ಪ್ರಕೃತಬಿದ್ದಾಗ ಅವುಗಳನ್ನು ಹೊತ್ತಿಸುವಂತೆ ಆಜ್ಞೆಮಾಡಿ ದನು; ದಾರಿಯಲ್ಲಿ ಅಲ್ಲಲ್ಲಿ ಸೇನೆಯನ್ನಿಟ್ಟನು. ಆ ಬಳಿಕ ತಾನಾಜಿ ಮಲ ಸೂರೆ, ಏಸಾಜಿ ಕಂಕ ಆದಿಯಾಗಿ ಇಪ್ಪತ್ತೈದು ಮಂದಿ ಯೋಧರನ್ನು ಕರೆದುಕೊಂಡು ಪುಣೆಯೊಳಗೆ ಹೋಗಲು ನಿಶ್ಚಯಿಸಿದನು. ರಾತ್ರಿ ಕಾಲ; ಕೃಷ್ಣ ಪಕ್ಷ; ಎಲ್ಲೂ ಜನ ಸಂಚಾರವಿರಲಿಲ್ಲ; ಮದುವೆಯ ಮೆರೆ

ವಣಿಗೆಯೊಂದು ಮಾತ್ರ ಹೋಗುತ್ತಿದ್ದಿತು. ಶಿವಾಜಿಯೂ ಅವನ ಅನು ಚರರೂ ಆ ಗುಂಪಿನ ಸಂಗಡ ಸೇರಿ ಪುಣೆಯನ್ನು ಪ್ರವೇಶಮಾಡಿದರು. ಆ ಅರಮನೆಯ ಸಂದಿಗೊಂದಿಗಳೆಲ್ಲವೂ ಅವರಿಗೆ ಚೆನ್ನಾಗಿ ತಿಳಿದಿದ್ದುವು. ಶಿವಾಜಿ ಪ್ರಭೃತಿಗಳು ಅರಮನೆಯೊಳಗೆ ಹೊಕ್ಕರು. ಆಗ ಮಲಗಿದ್ದ ದಾಸಿಯರು ಬೆಚ್ಚಿಬಿದ್ದೆದ್ದು ಷಯಿಸ್ತಾಖಾನನನ್ನು ಎಬ್ಬಿಸಿದರು. ಅವನು ಹೆದರಿ ಗವಾಕ್ಷದಿಂದಿಳಿದು ಓಡಿಹೋಗಲು ಯತ್ನಿಸಿದನು. ಆ ಸಮಯದಲ್ಲಿ ಶಿವಾಜಿಯು ಬೀಸಿದ ಕತ್ತಿಯ ಪೆಟ್ಟಿನಿಂದ ಅವನ ಬೆರಳು ಕತ್ತರಿಸಿ ಹಾರಿಹೋಯಿತು. ಹೇಗಾದರೂ ಆಗಲಿ, ಅವನು ಜೀವ ಸಹಿತ ತಪ್ಪಿಸಿಕೊಂಡು ಹೋದನು; ಆದರೆ ಅವನ ಮಗನೂ ಅನುಚರರೂ ಅಲ್ಲೇ ಹತರಾದರು. ಅನಂತರ, ಮೊದಲು ಮಾಡಿದ್ದ ಸಂಕೇತದ ಮೇರೆಗೆ ಶಿವಾಜಿಯ ಕಡೆಯ ಮಾವಳಿಗಳು ಗಿಡಗಳ ಮೇಲೂ ಬೆಟ್ಟಗಳ ಮೇಲೂ ಪಂಜುಗಳನ್ನು ಹೊತ್ತಿಸಿಟ್ಟು ರಣವಾದ್ಯ ಮಾಡುತ್ತಾ ಮೆಲ್ಲ ಮೆಲ್ಲಗೆ ಹೋಗಲಾರಂಭಿಸಿದರು. ಮೊಗಲ್ ಸೈನಿಕರ ದೃಷ್ಟಿ ಆ ಕಡೆಗೆ ಬಿದ್ದಿತು. ಅವರು ಆ ಕಡೆಗೆ ತಿರುಗಲು, ಶಿವಾಜಿ ಇನ್ನೊಂದು ದಾರಿಯನ್ನು ಹಿಡಿದು ಸೇನೆಯೊಡನೆ ಸಿಂಹಗಡಕ್ಕೆ ನಿರ್ವಿಘ್ನವಾಗಿ ಹೋಗಿ ಸೇರಿದನು. ಮಾರನೆಯ ಪ್ರಾತಃಕಾಲ ಮೊಗಲರು ಹಿಂದಿನ ರಾತ್ರಿ ಪಂಜುಗಳುರಿಯುತ್ತಿದ್ದ ಸ್ಥಳಕ್ಕೆ ಹೋಗಿ ಬೆಟ್ಟಗಳ ಮೇಲೂ ಗಿಡಗಳ ಮೇಲೂ ಬೆಂದುಳಿದಿದ್ದ ಪಂಜುಗಳನ್ನು ನೋಡಿದರು. ಅವು ಮಹಾರಾಷ್ಟ್ರ ಸೇನೆ ಅಪರಿಮಿತವಾಗಿ ಬಂದಿರುವುದೆಂದು ತಮ್ಮನ್ನು ಮರುಳುಗೊಳಿಸುವುದಕ್ಕಾಗಿ ಶಿವಾಜಿ ಮಾಡಿದ ಎತ್ತುಗಡೆಯೆಂದು ತಿಳಿದು ಮೊಗಲರು ಕೈಕೈ ಹಿಸುಕಿಕೊಂಡರು. ಕೂಡಲೆ ಅಲ್ಲಿ ಅವಿತು ಕೊಂಡಿದ್ದ ಮಾವಳಿಗಳು ಅವರನ್ನು ಮುತ್ತಿದರು. ಮೊಗಲರು ದಾಯು ಗೆಟ್ಟು ತಾರುತಟ್ಟಾಗಿ ಓಡಿಹೋದರು. ಷಯಿಸ್ತಾಖಾನನು ನಡೆದ ಸಂಗತಿಗಳನ್ನೆಲ್ಲ ಕೇಳಿ ಕೋಪಗೊಂಡು ಸೇನೆಯೊಡನೆ ತಾನೇ ಸಿಂಹ ಗಡಕ್ಕೆ ಪಯಣಮಾಡಿದನು. ಶತ್ರುಗಳು ಕೋಟೆಯ ಹತ್ತಿರ ಬರುವ ವರೆಗೂ ಮಹಾರಾಷ್ಟ್ರರು ಸುಮ್ಮನಿದ್ದು, ಅವರು ಹತ್ತಿರ ಬರುತ್ತಲೆ ತೆರಪು ಕೊಡದೆ ಗುಂಡುಗಳನ್ನು ಹೊಡೆದರು. ಗುಂಡಿನ ಏಟುಗಳಿಗೆ

ನಿಲ್ಲಲಾರದೆ ಶತ್ರುಗಳು ಪುಣೆಗೆ ಓಡಿಹೋದರು. ಖಾನನು ಈ ರೀತಿ ಯಾಗಿ ಹುರುಳುಗೆಟ್ಟು, ಯಶವಂತಸಿಂಹನು ಶಿವಾಜಿಗೆ ಒಳಗಾಗಿದ್ದಾ ನೆಂದು ಅವನ ಮೇಲೆ ದೋಷಾರೋಪಣೆಮಾಡಿ ಅವರಂಗಜೇಬನಿಗೆ ಕಾಗದವನ್ನು ಬರೆದನು. ಅವರಂಗಜೇಬನು ರೇಗಿ ಇಬ್ಬರನ್ನೂ ಹಿಂದಕ್ಕೆ ಕರೆಯಿಸಿದನು; ತರುವಾಯ ತನ್ನ ಮಗನಾದ ಮುಆಜಿಮ್ಮನ ಕೈಯ ಕೆಳಗೆ ಯಶವಂತಸಿಂಹನನ್ನು ಸೇನಾಪತಿಯನ್ನಾಗಿಟ್ಟು ಮತ್ತೆ ದಕ್ಷಿಣ ದೇಶಕ್ಕೆ ಕಳುಹಿಸಿದನು.

ಯಶವಂತಸಿಂಹನು ದಕ್ಷಿಣ ದೇಶಕ್ಕೆ ಮರಳಿ ಬಂದು ಸಿಂಹಗಡಕ್ಕೆ ಮುತ್ತಿಗೆ ಹಾಕಿದನು; ಆದರೆ ವಿಫಲ ಮನೋರಥನಾಗಿ ಚಾಕಣ ಮತ್ತು ಜುನ್ನಾರ್ ಎಂಬ ದುರ್ಗಗಳಲ್ಲಿ ಸೇನೆಯನ್ನಿಳಿಸಿ ನಿಶ್ಚೇಷ್ಟನಾಗಿ ಕುಳಿತನು. ಶಿವಾಜಿ ಆ ಸೇನೆಯನ್ನು ರಾಜ್ಯದಿಂದಟ್ಟುವ ಸಲುವಾಗಿ ತನ್ನ ದಂಡನ್ನು ಕಲ್ಯಾಣದಲ್ಲೂ ದಂಡರಾಜಪುರದಲ್ಲೂ ಜೋಡಿಸಿಟ್ಟನು; ಕೂಡಲೆ ಪ್ರತಾಪರಾವ್ ಗುಜರ್, ಅನ್ನಾಜಿ ದತ್ತೋ ಮೊದಲಾದ ವೀರ ರೊಡಗೂಡಿ ಸೇನಾಸಹಿತ ಅಕಸ್ಮಾತ್ತಾಗಿ ಸೂರತ್ತಿಗೆ ಹೋಗಿ ಮುತ್ತಿಗೆ ಹಾಕಿದನು. ಮೊಗಲರು ಸಂಪೂರ್ಣವಾಗಿ ಸೋತು ಸೂರತ್ತನ್ನು ಬಿಟ್ಟೋಡಿದರು. ಈ ಯುದ್ಧದಲ್ಲಿ ಎಷ್ಟೇ ಕಡಿಮೆಯೆಂದರೂ ಒಂದು ಕೋಟಿ ಇಪ್ಪತ್ತುಲಕ್ಷ ರೂಪಾಯಿ ಬಾಳುವಷ್ಟು ದ್ರವ್ಯವು ಶಿವಾಜಿಗೆ ಸಿಕ್ಕಿತು. ಈ ವಿಜಯ ಲಬ್ಧ ದ್ರವ್ಯದೊಡನೆ ಶಿವಾಜಿ ನಿರ್ವಿಘ್ನವಾಗಿ ರಾಯಗಡಕ್ಕೆ ಹೋಗಿ ಮೊಗಲರ ಸಂಗಡ ಕಾಳೆಗಮಾಡುವುದಕ್ಕೆ ಬೇಕಾದ ಸನ್ನಾಹಗಳನ್ನು ಮಾಡಲುಪಕ್ರಮಿಸಿದನು. ಶಿವಾಜಿಯು ಷಯಿಸ್ತಾಖಾನನ ಸಂಗಡ ಹೋರಾಡುತ್ತ ಮೊಗಲ್ ರಾಜ್ಯದ ಮೇಲೆ ದಿಕ್ಕು ದಿಕ್ಕಿಗೂ ದಂಡನ್ನು ಕಳುಹಿಸುತ್ತಿದ್ದ ಸಮಯದಲ್ಲಿ ಶಿವಾಜಿಯ ಎರಡನೆಯ ಮಗನು ಹುಟ್ಟಿದನು. ಪುತ್ರೋತ್ಸವವಾದುದಕ್ಕೆ ಶಿವಾಜಿ ಆನಂದಪಟ್ಟು ವಿಶೇಷ ದಾನ ಧರ್ಮಗಳನ್ನು ಮಾಡಿದನು.

ಕ್ರಿ. ಶ. ೧೬೬೪ನೆಯ ಸಂವತ್ಸರದಲ್ಲಿ ಷಾಹಜಿಯು ಶಿವಮೊಗ್ಗ ಪ್ರಾಂತದಲ್ಲಿ, ತುಂಗಭದ್ರಾ ತೀರದಲ್ಲಿರುವ ಬಸವಪಟ್ಟಣ ಎಂಬ ಗ್ರಾಮದ ಬಳಿ ಬೇಟೆಯಾಡುತ್ತಿರುವಾಗ ಕುದುರೆಯಿಂದ ಬಿದ್ದು ಮೃತ

ನಾದನು. ಒಡನೆಯೇ ಅವನ ಅನುಚರರು ವೆಂಕೋಜಿಗೆ ವರ್ತಮಾನ ವನ್ನು ಕೊಟ್ಟರು. ಅವನು ತಂಜಾವೂರಿಂದ ಬಂದು ತಂದೆಯನ್ನು ದಹನ ಮಾಡಿ ಉತ್ತರ ಕ್ರಿಯೆಗಳನ್ನು ಮಾಡಿದನು. ಈ ವರ್ತಮಾನವನ್ನು ಕೇಳಿ ಶಿವಾಜಿ ಅತ್ಯಂತವಾಗಿ ವ್ಯಥೆಪಟ್ಟನು. ಗಂಡನು ಮೃತನಾದ ನೆಂದು ಕೇಳಿ ಜೀಜಾಬಾಯಿ ಅಗ್ನಿಪ್ರವೇಶಮಾಡತೊಡಗಿದಳು. ಆದರೆ ಶಿವಾಜಿಪ್ರಭೃತಿಗಳ ಪ್ರೇರಣೆಯಿಂದ ಅವಳು ಆ ಆಲೋಚನೆಯನ್ನು ಬಿಟ್ಟಳು. ಪಿತೃವತ್ಸಲನಾದ ಶಿವಾಜಿ ಲಕ್ಷಾಂತರ ರೂಪಾಯಿಗಳನ್ನು ವೆಚ್ಚಮಾಡಿ ತಂದೆಗೆ ಶ್ರಾದ್ಧಾದಿ ಕರ್ಮಗಳನ್ನು ನಡಯಿಸಿ, ಅವನು ಬಿದ್ದೆಡೆಯಲ್ಲಿ ಸಮಾಧಿಯನ್ನು ಕಟ್ಟಿಸಿ, ಪವಿತ್ರ ದೀಪಾರಾಧನೆಗಾಗಿ ಮಾನ್ಯವನ್ನು ಕೊಟ್ಟನು.

ಷಾಹಜಿ ಉದಾರ ಹೃದಯನು, ಪಾಪಭೀರು, ಪ್ರಭು ಪರಾಯ ಣನು, ಭಾಗ್ಯಶಾಲಿ, ವೀರನು. ವಿಪತ್ಸಾಗರದಲ್ಲಿ ಮಗ್ನವಾಗಿದ್ದ ನೈಜಾಮ್‌ಷಾಹಿ ರಾಜ್ಯವು ಹೆಸರಿಲ್ಲದೆ ಹೋಗುತ್ತಿದ್ದ ಸಮಯದಲ್ಲಿ ಷಾಹಜಿಯು ಅಹಮುದಾನಗರಕ್ಕೆ ಹೋಗಿ ಅಲ್ಲಿಯ ರಾಜನ ಉತ್ತ ರಾಧಿಕಾರಿಗೆ ಪಟ್ಟವನ್ನು ಕಟ್ಟಿ ರಾಜ್ಯವನ್ನಾಳಿಸಿದನು; ಬಿಜಾಪುರ ಸಂಸ್ಥಾನದಲ್ಲಿ ಮೂವತ್ತು ವರ್ಷಗಳ ಕಾಲ ಸೇನಾಪತಿಯಾಗಿದ್ದು ಆ ರಾಜ್ಯದ ವಿಸ್ತೀರ್ಣವನ್ನು ಹೆಚ್ಚಿಸಿದನು. ಅವನು ಮೊತ್ತಮೊದಲು ೧೬೩೭ರಲ್ಲಿ ಕರ್ಣಾಟಕ ದೇಶವನ್ನು ಸೇನಾ ಸಮೇತನಾಗಿ ಹೊಕ್ಕು ಇಪ್ಪತ್ತೈದು ವರ್ಷಗಳ ಕಾಲ ಕಾದಿ ಬಿಜಾಪುರ ಸಂಸ್ಥಾನದವರಿಗೆ ಮೈಸೂರು, ವೇಲೂರು, ಚಂಜಿ, ಎಂಬೀ ನಾಡುಗಳನ್ನು ಗೆದ್ದು ಕೊಟ್ಟನು. ಅವನ ಸಾಹಸಕ್ಕೂ ರಾಜಭಕ್ತಿಗೂ ಮೆಚ್ಚಿ ೧೬೪೮ರಲ್ಲಿ ಸುಲ್ತಾನನು ಬೆಂಗಳೂರು, ಕೋಲಾರ ಮೊದಲಾದ ಊರುಗಳನ್ನು ಅವನಿಗೆ ಜಹಗೀರುಗಳನ್ನಾಗಿ ಕೊಟ್ಟನು. ಅವನ ಸಾಹಸದಿಂದಲೇ ಮಧುರೆ ತಂಜಾವೂರುಗಳ ನಾಯಕರು ಆ ಸಂಸ್ಥಾನಕ್ಕೆ ಸಾಮಂತ ರಾಗಿ ಕಪ್ಪವನ್ನು ಕೊಡಲು ಒಡಂಬಟ್ಟರು. ಆ ಸಂಸ್ಥಾನದಲ್ಲಿ ತನ ಗೆಷ್ಟೋ ವಿಧವಾದ ಕ್ಲೇಶವುಂಟಾದರೂ ಅವಮಾನವಾದರೂ ಬೇಸ ರದೆ ಅವನು ತನ್ನೊಡೆಯನ ಹಿತವನ್ನೇ ಚಿಂತಿಸುತ್ತಿದ್ದನು. ಅವನು

ಮನಸ್ಸುಮಾಡಿದ್ದರೆ ಮಗನ ಸಂಗಡ ಸೇರಿ ಆ ಸಂಸ್ಥಾನವನ್ನು ನಾಶ ಮಾಡಬಹುದಾಗಿದ್ದಿತು. ಆದರೆ ಅವನ ಉದಾರ ಹೃದಯದಲ್ಲಿ ಆ ವಿಧ ವಾದ ಜಘನ್ಯ ಭಾವಕ್ಕೆ ಅವಕಾಶವಿರಲಿಲ್ಲ; ದೂತನಾಗಿ ತನ್ನ ಮಗನ ಬಳಿಗೆ ಹೋಗಿದ್ದಾಗ ಅವನಿಗೆ ಬಿಜಾಪುರ ಸಂಸ್ಥಾನಕ್ಕೆ ಹಿತವಾಗುವ ಉಪದೇಶವನ್ನು ಮಾಡಿದನು. ಆ ಸಂಸ್ಥಾನಕ್ಕೆ ಅಹಿತವನ್ನು ಮಾಡಿ ಯಾಗಲಿ ಬಗೆದಾಗಲಿ ಅವನ ಕೈ ಮನಗಳು ಮಲಿನವಾಗಲಿಲ್ಲ. ಆ ಸಂಸ್ಥಾನದವರು ಷಾಹಜಿಯ ಮರಣ ವೃತ್ತಾಂತವನ್ನು ಕೇಳುತ್ತಲೆ ಶೋಕಪಟ್ಟು ಅವನ ಗುಣವನ್ನು ಗ್ರಹಿಸಿ ಅವನಿಂದ ತಮಗಾದ ಉಪ ಕಾರಗಳನ್ನು ಸ್ಮರಣೆಗೆ ತಂದುಕೊಂಡು ಬೆಂಗಳೂರು, ತಂಜಾವೂರು ಮೊದಲಾದ ಅವನ ಜಹಗೀರುಗಳನ್ನು ವೆಂಕೋಜಿಗೆ ಕೊಟ್ಟರು.

ತಂದೆಗಿಂತಲೂ ಮಗನು ಯಶೋವಂತನಾದರೂ, ಶಿವಾಜಿಯು ಹೆಜ್ಜೆಯಿಡುವುದಕ್ಕೆ ಮುಂದೆಯೇ ಷಾಹಜಿಯು ತಾನು ಮಾಡಿದ ಕಾರ್ಯಗಳನ್ನು ಮಾಡದಿದ್ದ ಪಕ್ಷದಲ್ಲಿ, ಶಿವಾಜಿಯು ಸಂಕಲ್ಪಿಸಿದ ಕಾರ್ಯಗಳು ಕೈಗೂಡುತ್ತಿದ್ದುವೊ ಇಲ್ಲವೊ ಹೇಳುವುದು ಕಷ್ಟ. ಸೇನಾ ಪತಿತ್ವವನ್ನು ವಹಿಸಿ ಹಿಂದೂ ಸೈನಿಕರನ್ನು ಕಟ್ಟಿಕೊಂಡು ವೈರಿಗಳ ಸಂಗಡ ಯುದ್ಧಮಾಡಿ ಹಿಂದೂ ಸೇನಾನಾಯಕರೂ ಸೈನಿಕರೂ ಯುದ್ಧದಲ್ಲಿ ಮುಸಲ್ಮಾನ್ ಸೈನಿಕರಿಗೆ ಸಮಾನವಾದ ಬಲವನ್ನೂ ಧೈರ್ಯವನ್ನೂ ಉಳ್ಳವರೆಂದೆನಿಸಿದವನು ಆ ವೀರನೇ.

---

## ಹನ್ನೊಂದನೆಯ ಪ್ರಕರಣ

---

## ಪುರಂದರ ದುರ್ಗ ರಕ್ಷಣೆ, ಮೊಗಲರಿಗೂ ಶಿವಾಜಿಗೂ ಸಂಧಿ.

ಯಶವಂತಸಿಂಹನು ಯುದ್ಧವನ್ನು ನಿಲ್ಲಿಸಿ ಸುಮ್ಮನೆ ಕಾಲವನ್ನು ಕಳೆಯುತ್ತಿದ್ದನು. ಆಗ ಶಿವಾಜಿ ಶೀಘ್ರವಾಗಿ ಜಲ ಸ್ಥಲ ಮಾರ್ಗಗಳೆರಡರಲ್ಲೂ ಮೊಗಲರ ಮೇಲೆ ದಂಡನ್ನು ಕಳುಹಿಸುತ್ತಿದ್ದನು. ಸ್ಥಲ ಮಾರ್ಗದಲ್ಲಿ ನೇತಾಜಿ ಪಾಲ್ಕರನು ಮೊಗಲರ ರಾಜ್ಯಕ್ಕೆ ಹೋಗಿ ಅಲ್ಲಲ್ಲಿ ಚೌತ್ಥಾಯಿಯನ್ನು ಸಂಗ್ರಹಿಸಿ ಮಳೆಗಾಲಕ್ಕೆ ಮುಂಚೆಯೇ ರಾಯಗಡಕ್ಕೆ ಹೋದನು. ಜಲ ಯುದ್ಧ ನಿಪುಣರಾದ ಅವನ ಸೈನಿಕರು ಯುದ್ಧದ ನಾವೆಗಳನ್ನೂ ವ್ಯಾಪಾರದ ಹಡಗುಗಳನ್ನೂ ಮೆಕ್ಕಾವಿಗೆ ಯಾತ್ರೆ ಹೋಗುತ್ತಿದ್ದವರ ಹಡಗುಗಳನ್ನೂ ಸೆರೆಹಿಡಿದರು. ಶಿವಾಜಿಯು ತಾನೇ ಅಹಮುದಾನಗರವನ್ನು ಸೂರೆಗೊಂಡು ಅವರಂಗಾಬಾದಿನ ವರೆಗೆ ದಂಡೆತ್ತಿ ಹೋದನು. ಈ ಕಾರ್ಯಗಳಿಂದ ಶಿವಾಜಿಯು ಬಿಜಾಪುರದ ಸುಲ್ತಾನನ ಕೋಪಕ್ಕೂ ದಿಳ್ಳಿಯ ಪಾದಷಾಹನ ಕೋಪಕ್ಕೂ ಗುರಿಯಾದನು.

ಶಿವಾಜಿಯಿಲ್ಲದ ಸಮಯವನ್ನು ನೋಡಿ ಬಿಜಾಪುರ ಸಂಸ್ಥಾನದ ಸೇನೆಯು, ಹಿಂದೆ ಷಾಹಜಿಯು ಮಧ್ಯವರ್ತಿಯಾಗಿ ನಿಂತು ಬಿಜಾಪುರ ಸುಲ್ತಾನನಿಗೂ ತನ್ನ ಮಗನಿಗೂ ಮಾಡಿಸಿದ ಸಂಧಿಗೆ ವಿರೋಧವಾಗಿ, ಕೊಂಕಣ ದೇಶವನ್ನು ಜಯಿಸಲು ಯತ್ನಿಸಿತು. ಪ್ರಸಕ್ತ ಸಮಯದಲ್ಲಿ ಶಿವಾಜಿಯು ತೋರಿಸಿದ ಕಾರ್ಯ ತತ್ಪರತೆಯು ಅತಿ ವಿಸ್ಮಯಕರವಾದುದು. ಅವನು ನಿಮಿಷ ಮಾತ್ರದಲ್ಲಿ ಎಲ್ಲೆಂದರಲ್ಲಿರುತ್ತಿದ್ದನು. ಅವನು ಬಿಜಾಪುರದ ದಂಡು ಕೊಂಕಣ ದೇಶದ ಮೇಲೆ ಹೋದ ವರ್ತಮಾನವನ್ನು ಕೇಳಿದನೋ ಇಲ್ಲವೋ, ಅಲ್ಲಿಗೆ ಹೋಗಿ ಆ ದಂಡನ್ನು ಒಕ್ಕಲಿಕ್ಕಿದನು; ತರುವಾಯ ಕೃಷ್ಣಾ ನದಿಯ ದಕ್ಷಿಣಕ್ಕಿರುವ, ಬಿಜಾಪುರ ಸಂಸ್ಥಾನಕ್ಕೆ ಸೇರಿದ, ಪ್ರದೇಶದ ಮೇಲೆ ದಂಡನ್ನು ಕಳುಹಿಸಿದನು.

ಅನಂತರ, ಯುದ್ಧದ ಹಡಗುಗಳನ್ನು ಸೇರಿಸಿಕೊಂಡು ಹೋಗಿ ಗೋವೆ ಎಂಬ ಪಟ್ಟಣಕ್ಕೆ ದಕ್ಷಿಣದಲ್ಲಿರುವ ಬಾರಿಸಿಲೋರ್ ಎಂಬ ನಗರಕ್ಕೆ ಮುತ್ತಿಗೆ ಹಾಕಿದನು. ಅಲ್ಲಿಂದ ಬಹು ಮೂಲ್ಯ ಪದಾರ್ಥಗಳನ್ನು ಸಂಗ್ರಹಿಸಿ ನಾಲ್ಕು ಸಾವಿರ ಸೈನಿಕರೊಡನೆ ಗೋಕರ್ಣದ ವರೆಗೆ ಜಲ ಮಾರ್ಗವಾಗಿ ಹೋದನು; ಗೋಕರ್ಣದಿಂದ ನಾವೆಯನ್ನು ಹಿಂದಕ್ಕೆ ಕಳುಹಿಸಿ ಆ ಕ್ಷೇತ್ರದಲ್ಲಿ ದೇವರ ಸೇವೆಯನ್ನು ಮಾಡಿಕೊಂಡು ಸ್ಥಲ ಮಾರ್ಗವಾಗಿ ರಾಯಗಡಕ್ಕೆ ಹಿಂದಿರುಗಿದನು; ದಾರಿಯಲ್ಲಿ ಕಾರವಾರ ವೆಂಬ ಸ್ಥಳಕ್ಕೆ ಹೋಗಿ ಅಲ್ಲಿದ್ದ ಇಂಗ್ಲೀಷರು ಸಂವತ್ಸರಕ್ಕೆ ೧,೧೨೦ ರೂಪಾಯಿ ತೆರಿಗೆಯನ್ನು ತನಗೆ ಸಲಿಸುವಂತೆ ಮಾಡಿ ಮತ್ತೆ ಸಮುದ್ರ ಮಾರ್ಗವಾಗಿ ಸಿಂಹಗಡಕ್ಕೆ ಹಿಂದಿರುಗಿದನು.

ಅವರಂಗಜೇಬನು ಶಿವಾಜಿಯ ಬಲ ವೃದ್ಧಿಯನ್ನೂ ತನ್ನ ಕಡೆಯ ಅಧಿಕಾರಿಗಳ ಅಕರ್ಮಣ್ಯತೆಯನ್ನೂ ಕೇಳಿ ಒಳಗೊಳಗೆ ಕುದಿಯು ತ್ತಿದ್ದನು. ಅವನು ಶಿವಾಜಿಯು ಸೂರತ್ತಿಗೆ ಹಾಕಿದ ಮುತ್ತಿಗೆ, ಮೊಗಲ್ ಸೇನೆಯ ಪರಾಭವ, ಮುಸಲ್ಮಾನ್ ಯಾತ್ರಿಕರ ಸೆರೆ ಎಂಬ ಮೈಯುರಿವ ಸಂಗತಿಗಳನ್ನು ಕೇಳಿ ೧೬೬೫ರಲ್ಲಿ ಅಂಬರ್ ಸಂಸ್ಥಾನಾಧಿಪತಿಯಾದ ಜಯಸಿಂಹನನ್ನೂ ಆಫ್ಘನ್ ಯೋಧನಾದ ದಿಲೇರಖಾನನನ್ನೂ ಸೇನೆ ಯೊಡನೆ ದಕ್ಷಿಣ ದೇಶಕ್ಕೆ ಕಳುಹಿಸಿದನು. ಇವರಿಬ್ಬರೂ ಶೂರರು, ಬುದ್ಧಿವಂತರು; ಅಲ್ಲದೆ, ಬಹು ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರರು. ಸಂಶಯಾತ್ಮನಾದ ಅವರಂಗಜೇಬನು ಅವರ ಪ್ರಾಬಲ್ಯವನ್ನು ನೋಡಿ ಅವರನ್ನು ಸಮೀಪದಲ್ಲಿಟ್ಟುಕೊಳ್ಳಲಿಷ್ಟವಿಲ್ಲದೆ, ದೂರ ದೇಶದಲ್ಲಿ ಯುದ್ಧ ಕಾರ್ಯದಲ್ಲಿಟ್ಟರೆ ಉಭಯಾರ್ಥ ಸಿದ್ಧಿಯಾಗುವುದೆಂದೆಣಿಸಿ, ದಕ್ಷಿಣ ದೇಶಕ್ಕೆ ಕಳುಹಿಸಿದನು. ಆದರೆ ಅವರನ್ನು ನಂಬುತ್ತಿರಲಿಲ್ಲವಾದುದ ರಿಂದ ಅವರಿಗೆ ಅವನು ಸಮಯೋಚಿತವಾಗಿ ಅಧಿಕಾರವನ್ನಾಗಲಿ ಸೇನೆ ಯನ್ನಾಗಲಿ ಕೊಡಲು ಅಂಜುತ್ತಿದ್ದನು. ಅವರಿಬ್ಬರೂ ಸೇರಿ ಬಿಜಾ ಪುರ ಸಂಸ್ಥಾನದವರ ಶಕ್ತಿಯನ್ನೂ ಶಿವಾಜಿಯ ಶಕ್ತಿಯನ್ನೂ ಮೆಲ್ಲ ಮೆಲ್ಲಗೆ ಮೆತ್ತಗೆ ಮಾಡುತ್ತಿದ್ದರೆ ಕಡೆಗೆ ತಾನು ಹೋಗಿ ಅನಾಯಾಸ ವಾಗಿ ಅವರನ್ನು ಕವಳಿಸಬಹುದೆಂದು ಯೋಚಿಸಿ ಅವರಿಗೆ ಅಷ್ಟು ಪಾರು

ಪತ್ರವನ್ನು ಕೊಡಲಿಲ್ಲ. ಅದೂ ಅಲ್ಲದೆ, ಜಯಸಿಂಹನು ಹೆಚ್ಚು ಕೆಲಸಕ್ಕೆ ಹೋಗದಂತೆ ರಾಮಸಿಂಹನೆಂಬ ಅವನ ಮಗನನ್ನು ತನ್ನ ಹತ್ತಿರ ಅವನಿಗೆ ಹೊಣೆಯಾಗಿಟ್ಟುಕೊಂಡನು.

೧೬೬೫ರಲ್ಲಿ ಜಯಸಿಂಹನೂ ದಿಲೇರಿಖಾನನೂ ಪುಣೆಗೆ ಬಂದಿಳಿದರು. ಯುದ್ಧ ಕಾರ್ಯಗಳು ಆರಂಭವಾದುವು. ಜಯಸಿಂಹನು ಪುರಂದರ ದುರ್ಗಕ್ಕೆ ಮುತ್ತಿಗೆ ಹಾಕಿದನು. ಇವನು ತಾನೇ ಒಂದೆರಡು ದಿವಸಗಳು ಅಲ್ಲಿಯ ಕಾರ್ಯವನ್ನು ನಡೆಯಿಸಿ, ದಿಲೇರಿಖಾನನ ಮೇಲೆ ಆ ಕಾರ್ಯಭಾರವನ್ನು ಬಿಟ್ಟು, ಸಿಂಹಗಡಕ್ಕೆ ದಂಡೆತ್ತಿಹೋದನು.

ದಿಲೇರಿಖಾನನು ಪುರಂದರ ದುರ್ಗವನ್ನು ಸಾಧಿಸುವ ಸಲುವಾಗಿ ಸರ್ವಪ್ರಯತ್ನಗಳನ್ನೂ ಮಾಡುತ್ತಿದ್ದನು. ಆದರೆ ಆ ಬೆಟ್ಟವು ದುರಾರೋಹವಾದುದು. ಅದರ ಎತ್ತರವು ೧೭೦೦ ಅಡಿಗಳಿಗೆ ಕಡಿಮೆಯಿಲ್ಲದಿರುವುದು. ಬೆಟ್ಟದ ಮೇಲೆ ಕೆಳಕೋಟೆ ಮೇಲಕೋಟೆ ಎಂದು ಎರಡು ಕೋಟೆಗಳಿರುವುವು. ದಿಲೇರಿಖಾನನು ಮುತ್ತಿಗೆ ಹಾಕಿದ ಸಮಯದಲ್ಲಿ ಈ ಪುರಂದರ ದುರ್ಗಕ್ಕೆ ಮುರಾರಿ ಬಾಜಿಪ್ರಭುವೆಂಬ ಕಾಯಸ್ಥ ವೀರನು ನಾಯಕನಾಗಿದ್ದನು. ದುರ್ಗರಕ್ಷಣೆಗಾಗಿ ಅವನ ಕೈಯ ಕೆಳಗೆ ಎರಡು ಸಾವಿರ ಮಂದಿ ಸೈನಿಕರಿದ್ದರು. ಮೊಗಲ್ ಸೈನಿಕರು ತಮ್ಮ ಬಾಹು ಬಲವನ್ನೆಲ್ಲ ತೋರಿಸಿದರು; ದುರ್ಗವು ಅವರ ಕೈಗೆ ಬರಲಿಲ್ಲ. ಮೊಗಲ್ ಸಮ್ರಾಜನ ಭಯಂಕರವಾದ ಹೆಸರು, ಅಧೋಪಪತ್ತಿ, ವಿಪುಳಸೇನೆ—ಇವೊಂದೂ ಕೆಂದಲಿಲ್ಲ. ಕಾಯಸ್ಥ ವೀರನು ಶತ್ರುಗಳನ್ನು ಕೋಟೆಯೊಳಗೆ ಬಿಡದೆ ತಡೆದನು. ಕಡೆಗೆ ದಿಲೇರಿಖಾನನು ಕೆಳ ಕೋಟೆಯ ಅಟ್ಟಳೆಯ ತಳದಲ್ಲಿ ಸುರಂಗ ಹಾಕಿಸತೊಡಗಿದನು. ದುರ್ಗ ರಕ್ಷಕರು ಬಾರಿ ಬಾರಿಗೂ ಕೋಟೆಯಿಂದ ಹೊರಬಿದ್ದು ಶತ್ರುಗಳನ್ನು ಹಿಂದಟ್ಟಿದರು. ಕಡೆಗೆ ಮೊಗಲ್ ಸೈನಿಕರು ಅಟ್ಟಳೆಯ ಕೆಳಗಿನ ಬಂಡೆಯನ್ನೊಡೆದು ಹೊರವಳಯದ ಮರೆ ತೆರೆಗಳನ್ನೆಲ್ಲ ಕಿತ್ತು ಬೀಸಾಡಿ ಸಾಹಸದಿಂದ ಕೆಳ ಕೋಟೆಯನ್ನು ಹಿಡಿದರು.

ಆಗ ದುರ್ಗರಕ್ಷಕರು ಕೈದೆಗೆದು ಮೇಲ ಕೋಟೆಗೆ ಹೋಗಲು ಆರಂಭಿಸಿದರು. ವಿಜಯೋನ್ಮತ್ತರಾದ ಮೊಗಲರು ಹೆಡ ತಲೆಯ ಗಂಡ

ವನ್ನು ಮರೆತು ಮನೆಗಳನ್ನು ಸೂರೆಗೊಳ್ಳುವುದಕ್ಕೆ ಹೊರಟರು. ಕೂಡಲೆ ಮೇಲಿನ ಕೋಟೆಯಿಂದ ದುರ್ಗರಕ್ಷಕರು ಅಗ್ನಿವೃಷ್ಟಿಯನ್ನು ಕರೆದು ಅವರನ್ನು ಹುಟ್ಟುಗೆಡಿಸಿದರು. ಆ ಬಳಿಕ, ಖಡ್ಗಧಾರಿಗಳಾದ ಏಳ್ನೂರು ಮಂದಿ ಮಾವಳಿಗಳೊಡನೆ ಬಾಜಿಪ್ರಭು ಹೊರಗೆ ಒಂದು ಮೊಗಲರನ್ನು ಮುತ್ತಿ ಕತ್ತಿಯಿಂದ ಕತ್ತರಿಸಿ ಉಳಿದವರನ್ನು ಬೆಟ್ಟದಿಂದ ಕೆಳಕ್ಕೋಡಿಸಿದನು. ಕ್ಷಣಕಾಲ ಕೈತಪ್ಪಿ ಹೋಗಿದ್ದ ದುರ್ಗವು ಮತ್ತೆ ಹಸ್ತಗತವಾಯಿತು. ಮೊಗಲರು ಪಲಾಯನ ಮಾಡಲಾರಂಭಿಸಿದರು. ರಣಮದೋನ್ಮತ್ತನಾದ ಬಾಜಿಪ್ರಭು ಯುದ್ಧ ಮಾಡುತ್ತ ಮಾಡುತ್ತ ಮುಸಲ್ಮಾನರ ಸೇನೆಯ ನಡುವೆ ಹೊಕ್ಕನು. ಕಾಳಗವು ಕಡೆಗಾಣಲಿಲ್ಲ. ಮಾವಳಿಗಳ ಸೇನೆ ಸವೆಯುತ್ತ ಬಂದಿತು.

ಆಗ ತನ್ನ ಸೈನಿಕರನ್ನು ಕುರಿತು ಬಾಜಿಪ್ರಭು, "ಅಲ್ಲಿ ನೋಡಿರಿ, ಶಿವಾಜಿ ಮಹಾರಾಜನ ವೀರರೂ ನಮ್ಮ ಸಹಚರರೂ ಯುದ್ಧಕ್ಷೇತ್ರದಲ್ಲಿ ಮಡಿದು ಬಿದ್ದಿರುವರು. ಆ ಮಹಾ ಪುರುಷರಿಗೆ ಯಾರು ದಿಕ್ಕು? ಅವರನ್ನು ಬಿಟ್ಟು ಹೇಗೆ ಹೋಗುವಿರಿ? ಈ ಮಿತ್ರದ್ರೋಹವನ್ನು ಮಾಡಿ ಜನಗಳಿಗೆ ಹೇಗೆ ಮುಖವನ್ನು ತೋರಿಸುವಿರಿ?" ಎಂದು ಹೇಳಿ ಮೆಲ್ಲಮೆಲ್ಲಗೆ ದಿಲೇರಿಖಾನನಿದ್ದೆಡೆಗೆ ಹೋದನು. ಅವನು ಆ ಕಾಯುಸ್ಥ ವೀರನ ಶೌರ್ಯಕ್ಕೆ ಬೆರಗಾಗಿ, "ವೀರವರ್ಯನೇ! ನೀನು ನಮ್ಮ ಕಡೆಗೆ ಬಾ, ನಿನಗೆ ತಕ್ಕ ಸನ್ಮಾನವನ್ನು ಮಾಡಿಸುವೆನು" ಎಂದನು. ಆ ಮಾತನ್ನು ಕೇಳಿ ವೀರೋಚಿತ ಗರ್ವದಿಂದ ಬಾಜಿಪ್ರಭು, "ನಾನು ಶಿವಾಜಿ ಮಹಾರಾಜನ ಬಂಟನು, ನಿಮ್ಮ ಪ್ರಶಂಸೆಯೂ ನನಗೆ ಬೇಡ, ನಿಮ್ಮನುಗ್ರಹವೂ ನನಗೆ ಬೇಡ" ಎಂದು ದಿಲೇರಿಖಾನನ ಮೇಲೆ ಕತ್ತಿಯನ್ನು ಪ್ರಯೋಗಮಾಡಿದನು. ಖಾನನು ಆ ಪೆಟ್ಟನ್ನು ತಪ್ಪಿಸಿಕೊಂಡು ಅಂಬನ್ನು ಬಿಟ್ಟು ಬಾಜಿಪ್ರಭುವನ್ನು ಕೊಂದನು. ಅವನು ಇದಕ್ಕೆ ಮುಂಚೆಯೇ ಎಷ್ಟೋ ನೊಂದು ತಟ್ಟಾಗಿದ್ದನು. ಆ ಕಾಯುಸ್ಥಕುಲವೀರನು ತನ್ನ ಪ್ರತಾಪದಿಂದ ರಿಪುದಳವನ್ನು ದಹಿಸಿ ಅಕಾಲದಲ್ಲಿ ರಾಹುಗ್ರಸ್ತನಾದನು. ಕೂಡಲೆ, "ಹರ ಹರ ಮಹಾದೇವ" ಎಂಬ ಶಬ್ದವು ದಿಙ್ಮಂಡಲವನ್ನು ಹಬ್ಬಿತು.

ಮಾವಳಿಗಳು ಹಿಂದಿರುಗಿ ಮೇಲಿನ ಕೋಟೆಗೆ ಹೋದರು. ಮೊಗಲರು ಮತ್ತೆ ಕೆಳ ಕೋಟೆಯನ್ನು ಹಿಡಿದರು. ಮೇಲಿಂದ ಬರುತ್ತಿದ್ದ ಗುಂಡಿ ನೇಟುಗಳನ್ನು ಸೈರಿಸಲಾರದೆ ಅವರು ಕೋಟೆಯನ್ನು ಬಿಟ್ಟೋಡಿದರು.

ಈ ರೀತಿಯಾಗಿ ಖಾನನು ಯಾವ ಬಗೆಯಲ್ಲೂ ಕೃತ ಕಾರ್ಯನಾಗದೆ ಪುರಂದರ ದುರ್ಗದ ಹತ್ತಿರವಿದ್ದ ವಜ್ರಗಡವೆಂಬ ದುರ್ಗಕ್ಕೆ ಹೋಗಿ ಪುರಂದರದ ಮೇಲ ಕೋಟೆಯನ್ನೊಡೆಯಲು ಉದ್ಯುಕ್ತನಾದನು. ಅನೇಕ ವಾರಗಳು ಕಳೆದುವು; ಹೇರಳವಾಗಿ ಮದ್ದುಗುಂಡುಗಳು ವೆಚ್ಚ ವಾದುವು; ದುರ್ಗವು ಮಾತ್ರ ಸುರಕ್ಷಿತವಾಗಿಯೇ ಇದ್ದಿತು. ದಿಲೇರಿ ಖಾನನು ತನ್ನ ಸೈನಿಕರನ್ನು ಕುರಿತು, "ನೀವೆಂದಿನ ವರೆಗೆ ದುರ್ಗವನ್ನು ಗೆಲ್ಲುವುದಿಲ್ಲವೋ ಅಂದಿನ ವರೆಗೆ ನಾನು ಬರಿಯ ತಲೆಯಲ್ಲಿರುವೆನು" ಎಂದು ತಲೆಯಿಂದ ರುಮಾಲನ್ನು ತೆಗೆದು ನಿಂತನು. ದಿಲೇರಿಖಾನನ ಪಂತವನ್ನು ಕೇಳಿ ಅವನ ಸೈನಿಕರು ಇನ್ನಿಲ್ಲದಷ್ಟು ಸಾಹಸವನ್ನು ಮಾಡಿದರು. ದುರ್ಗ ರಕ್ಷಕರು ತಮ್ಮ ಅಧಿನಾಯಕನ ಮರಣದಿಂದ ದುಃಖಿತರಾದರೂ ಅವರ ಅಧ್ಯವಸಾಯವೂ ಸಾಹಸವೂ ಶೌರ್ಯವೂ ಇಮ್ಮಡಿಯಾದುವು. ಮುಸಲ್ಮಾನರು ಅವರ ಪ್ರತಾಪಕ್ಕೆ ತಡೆಯ ಲಾರದೆ ಹಿಮ್ಮೆಟ್ಟಿದರು.

ಹಾಗೆಯೇ ಮಳೆಗಾಲವೂ ತಲೆಹಾಕಿತು. ಮೊಗಲರ ಫಿರಂಗಿ ಗಳೂ ತೆಪ್ಪಗಾದುವು. ಶತ್ರುಗಳು ಹಾಳುಮಾಡಿದ್ದ ಕೋಟೆಯನ್ನು ಮಾವಳಿಗಳು ಪುತ್ತೆ ಮೊದಲಿನಂತೆ ಸರಿಮಾಡಿ ಬಲಪಡಿಸಿದರು. ಆದರೂ ಶಿವಾಜಿಯು ಮೊಗಲ್ ಸಮ್ರಾಜನೊಡನೆ ಸಂಧಿ ಮಾಡಿ ಕೊಳ್ಳುವುದು ಕ್ಷೇಮಕರವೆಂದೆಣಿಸಿ ರಘುನಾಥ ಪಂತನನ್ನು ಜಯ ಸಿಂಹನ ಬಳಿಗೆ ಕಳುಹಿಸಿದನು. ಮರಾಟೆಯವರು ವೈರಿಗಳಿಗಂಜದೆ ಪರಾಕ್ರಮದಿಂದ ಕಾಳೆಗವನ್ನು ಮಾಡಿದರು. ಶಿವಾಜಿಯಾದರೋ, ತಾನು ಸೇನೆಗೆ ಅಧಿನಾಯಕನಾಗಿ ನಿಂತು ಯಾವ ಯಾವ ಯುದ್ಧ ಗಳನ್ನು ನಡೆಯಿಸಿದನೋ ಅವುಗಳಲ್ಲೆಲ್ಲ ತಪ್ಪದೆ ಗೆದ್ದನು. ಬಂದ ವಿಪತ್ತುಗಳಲ್ಲಿ ಅವನು ಕಣ್ಣೆಡುತ್ತಿರಲಿಲ್ಲ. ಸಂಕಟ ಕಾಲದಲ್ಲಿ ಅವನ ಸಾಹಸವೂ ಶೌರ್ಯವೂ ಹುರಿಯೇರುತ್ತಿದ್ದುವೇ ಹೊರತು ಕುಂದು

ತ್ತಿರಲಿಲ್ಲ; ಕಷ್ಟವು ಬಂದ ಸಮಯದಲ್ಲಿ ಅವಿಚಲಿತ ಧೈರ್ಯದಿಂದ ಅದಕ್ಕೆ ಪ್ರತೀಕಾರವನ್ನು ಹುಡುಕುತ್ತಿದ್ದನಲ್ಲದೆ ಎದೆಗುಂದಿ ಬುದ್ಧಿಗೆಡುತ್ತಿರಲಿಲ್ಲ. ಹೀಗಿರುವಲ್ಲಿ, ಶಿವಾಜಿಯು ಜಯಸಿಂಹನಿಗೆ ಶರಣಾಗತನಾಗಿ ಸಂಧಿಗೊಪ್ಪಿದುದಕ್ಕೇನು ಕಾರಣವೊ ತಿಳಿಯದು.

ಶಿವಾಜಿ ದೂರ ದೃಷ್ಟಿಯುಳ್ಳವನು; ಯೋಚನೆ ಮಾಡದೆ ಯಾವ ಕಾರ್ಯವನ್ನೂ ಮಾಡುವನಲ್ಲ. ಯಾವುದೋ ಒಂದು ಪ್ರಬಲ ಕಾರ್ಯವನ್ನುದ್ದೇಶಿಸಿಯೇ ಅವನು ಸಂಧಿಗೊಪ್ಪಿರಬಹುದೆಂದು ತೋರುವುದು. ಸದ್ಯದಲ್ಲಿ ಮೊಗಲ್ ಸಮ್ರಾಜನಿಗೆ ವಿಧೇಯನಾಗಿ ದಿಳ್ಳಿಗೆ ಹೋಗುವುದರಿಂದ ತನ್ನ ಕಾರ್ಯಕ್ಷೇತ್ರವು ವಿಸ್ತರಿಸುವುದೆಂದೋ, ಮೊಗಲ್ ಸಮ್ರಾಜನಲ್ಲಿ ಪ್ರಮುಖರಾಗಿಯೂ ಪ್ರಬಲರಾಗಿಯೂ ಇದ್ದ ರಾಜಪುತ್ರ ಸರ್ದಾರರ ಸ್ನೇಹವನ್ನು ಸಂಪಾದಿಸಬೇಕೆಂದೋ, ಈಗ ಕೊಂಚ ಮಟ್ಟಿಗೆ ಸೋತು ಜಯಸಿಂಹನ ಸ್ನೇಹವನ್ನು ಬೆಳೆಯಿಸಿ ಅವನ ಮೂಲಕವಾಗಿ ತನ್ನ ಗುರುತರವಾದ ಕಾರ್ಯಗಳನ್ನು ಮುಂದೆ ಸಾಧಿಸಬೇಕೆಂದೆಣಿಸಿಯೋ ಅವನು ಕದನವನ್ನು ನಿಲ್ಲಿಸಿರಬಹುದು. ಏನೇ ಹೋಗಲಿ, ಆಗ ಸಂಧಿಯೇ ಕ್ಷೇಮಕರವೆಂದು ಅವನೂ ಅವನ ಮಂತ್ರಿಗಳೂ ನಿಶ್ಚಯಿಸಿದರು. ಮಹಾರಾಜ ಜಯಸಿಂಹನೂ ಅದಕ್ಕಭಿಮತನಾಗಿ ತನ್ನಿಂದಾಗಬಹುದಾದ ಸಹಾಯವನ್ನೆಲ್ಲ ಮಾಡುವೆನೆಂದು ಶಿವಾಜಿಗೆ ಹೇಳಿಕಳುಹಿಸಿದನು.

ಶಿವಾಜಿ ಸಾವಿರ ಮಂದಿ ಆಯುಧ ಪಾಣಿಗಳಾದ ಮಾವಳಿಗಳನ್ನು ಕರೆದುಕೊಂಡು, ತಾಯಿಯ ಅಪ್ಪಣೆಯನ್ನು ಪಡೆದು, ಜಯಸಿಂಹನ ದರ್ಶನಕ್ಕಾಗಿ ರಾಯಗಡದಿಂದ ಹೊರಟನು. ಸಂದರ್ಶನ ಸಮಯದಲ್ಲಿ ಶಿವಾಜಿ, "ಧರ್ಮ ರಕ್ಷಣೆಗಾಗಿ ನಾನು ತಮ್ಮ ಬಳಿಗೆ ಬಂದಿರುವೆನು; ತಾವು ನಮ್ಮ ತಂದೆಗೆ ಸಮಾನರು; ಧರ್ಮರಕ್ಷಣೆಯ ಕಾರ್ಯದಲ್ಲಿ ತಾವು ನನಗೆ ಸಹಾಯ ಮಾಡಿ ಕೀರ್ತಿ ಪಡೆಯುವಿರೆಂದು ಕೋರುವೆನು" ಎಂದನು. ಅದಕ್ಕೆ ಜಯಸಿಂಹನು, "ನೀವು ನನ್ನ ಮಗನಿಗೆ ಸಮಾನರು, ಈ ವೃದ್ಧ ರಾಜಪುತ್ರನ ಶರೀರದಲ್ಲಿ ಒಂದು ಬಿಂದು ರಕ್ತವುಳಿದಿರುವವರೆಗೂ ನಿಮಗೆ ಭಯವೇನೂ ಇಲ್ಲ" ಎಂದು ಹೇಳಿ ಸಂಧಿಯನ್ನು

ಕುರಿತು, "ನೀವು ಸಮ್ರಾಜನ ಯಾವ ಯಾವ ದುರ್ಗಗಳನ್ನೂ ನಾಡು ಗಳನ್ನೂ ತೆಗೆದುಕೊಂಡಿರುತ್ತೀರೋ ಅವುಗಳನ್ನೆಲ್ಲ ಹಿಂದಕ್ಕೆ ಕೊಡುವ ರಾದರೆ ಸಂಧಿಯಾಗುವುದಕ್ಕೆ ಯಾವ ಅಡ್ಡಿಯೂ ಇರದು" ಎಂದನು. ಈ ರೀತಿಯಾಗಿ ಇಬ್ಬರಿಗೂ ಮಾತು ಕಥೆಗಳು ನಡೆದ ಬಳಿಕ ದಿಲೇರಿಖಾನ ನನ್ನೊಂದು ಸಾರಿ ನೋಡುವ ಹಾಗೆ ಶಿವಾಜಿಗೆ ಹೇಳಿ ಶಿವಾಜಿಯು ರಕ್ಷಣೆ ಗಾಗಿ ತನ್ನ ಸೋದರ ಮಾವನಾದ ಶೋಭಾನುಸಿಂಹನನ್ನೂ ಐವತ್ತು ಜನ ರಾಜಪುತ್ರ ವೀರರನ್ನೂ ಅವನ ಸಂಗಡವಿಟ್ಟು ಕಳುಹಿಸಿದನು.

ಯುದ್ಧ ಕಾರ್ಯದಲ್ಲಿ ಮಗ್ನನಾಗಿದ್ದ ದಿಲೇರಿಖಾನನು ಶಿವಾಜಿ ಬಂದುದನ್ನು ಕೇಳಿ ವಿಸ್ಮಿತನಾದನು. ಕ್ಷೇಮಾಲಿಂಗನವಾದ ಬಳಿಕ ಎಲ್ಲರೂ ಕುಳಿತರು. ದಿಲೇರಿಖಾನನು ಕೊಂಚ ಹೊತ್ತು ಸುಮ್ಮನಿದ್ದು, ಜಯುಸಿಂಹನನ್ನು ನೋಡಬಂದಿರೋ? ಎಂದನು. ಶೋಭಾನುಸಿಂಹನು, "ಶಿವಾಜಿ ಮಹಾರಾಜರು ತಮ್ಮೊಡನೆ ಸಂಧಿಯನ್ನಪೇಕ್ಷಿಸಿ ಬಂದಿರು ವರು" ಎಂದನು. ದಿಲೇರಿಖಾನನು, "ಪುರಂದರವನ್ನು ಹಿಡಿದಲ್ಲದೆ ನಾನು ರುಮಾಲನ್ನಿಟ್ಟುಕೊಳ್ಳೆನೆಂದು ಪ್ರತಿಜ್ಞೆ ಮಾಡಿರುವೆನು" ಎಂದನು. ಶಿವಾಜಿ, "ನಾನು ದುರ್ಗದ ಬೀಗದಕೈಗಳನ್ನೊಪ್ಪಿಸುವೆನು, ದುರ್ಗವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು" ಎಂದುತ್ತರ ಕೊಟ್ಟನು. ಆ ಬಳಿಕ ಶೋಭಾನುಸಿಂಹನು, "ದಂಡೆತ್ತಿ ಹೋಗಿ ಮತ್ತೆ ದುರ್ಗಕ್ಕೆ ಮುತ್ತಿಗೆ ಹಾಕುವುದು ನಿಷ್ಪ್ರಯೋಜನ, ಸಂಧಿಗೆ ತಾವು ಅಭಿಮತರೆಂದು ಜಯುಸಿಂಹ ಮಹಾರಾಜರು ತಮಗೆ ತಿಳಿಸು ವಂತೆ ಹೇಳಿರುವರು" ಎಂದನು.

ಈ ಪ್ರಕಾರವಾಗಿ ಸಂಭಾಷಣೆಯಾದ ಬಳಿಕ ಶಿವಾಜಿ ದಿಲೇರಿಖಾನ ನಿಂದ ತಾಂಬೂಲವನ್ನು ತೆಗೆದುಕೊಂಡು ಮತ್ತೆ ಜಯುಸಿಂಹನ ಬಳಿಗೆ ಹೋಗಿ ನಡೆದ ಸಂಗತಿಗಳನ್ನೆಲ್ಲ ಅವನಿಗೆ ವಿವರಿಸಿ ಹೇಳಿದನು. ಜಯು ಸಿಂಹನು ದಿಲೇರಿಖಾನನು ಮೊದಲಾದ ಅಧಿಕಾರಿಗಳನ್ನು ಕರೆಯಿಸಿ ೧೬೬೫ರಲ್ಲಿ ಸಂಧಿಪತ್ರವನ್ನು ಬರೆದು ಸಮ್ರಾಜನ ಬಳಿಗೆ ಕಳುಹಿಸಿದನು. ಪುರಂದರ ದುರ್ಗದ ಕೌಲಿನ ಪ್ರಕಾರ ಶಿವಾಜಿಯು ತಾನು ಮೊಗಲರ ರಾಷ್ಟ್ರದಲ್ಲಿ ಜಯಿಸಿದ್ದ ಪ್ರದೇಶಗಳನ್ನೂ, ಪುರಂದರ, ಸಿಂಹಗಡ ಮೊದ

ಲಾದ ದುರ್ಗಗಳನ್ನೂ ಮೊಗಲರಿಗೆ ಕೊಟ್ಟನು ; ಮೊಗಲ್ ರಾಜ್ಯಕ್ಕೆ ಸೇರದೆಯೂ ಅವನಧಿಕಾರಕ್ಕೊಳಗಾಗಿಯೂ ಇದ್ದ ಮಿಕ್ಕ ನಾಡು ಗಳನ್ನೂ ದುರ್ಗಗಳನ್ನೂ ಅವನೇ ಇಟ್ಟುಕೊಂಡನು. ಸಾಂಬಾಜಿಯು ಸಮ್ರಾಜನ ಕೈಯ ಕೆಳಗೆ ಐದು ಸಾವಿರ ಕುದುರೆಗೆ ಮನಸಬ್ದಾರ ನಾದನು. ಶಿವಾಜಿ ತನ್ನ ಮಗನಿಗಾಗಿ ಬಿಜಾಪುರ ಸಂಸ್ಥಾನದಿಂದ ಚೌತ್ಥಾಯಿಯನ್ನೂ ಸರ್ದೇಶಮುಖಿಯನ್ನೂ ಸಂಗ್ರಹಿಸಲಧಿಕಾರಿ ಯಾದನು. ಒಬ್ಬರ ಶತ್ರು ಮಿತ್ರರನ್ನು ಇನ್ನೊಬ್ಬರು ತಮ್ಮ ಶತ್ರು ಮಿತ್ರರನ್ನಾಗೆಣಿಸಿ ಯುದ್ಧ ಕಾಲದಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡಲೊಡಂಬಟ್ಟರು. ಇನ್ನುಳಿದ ವಿಷಯಗಳನ್ನು ಶಿವಾಜಿಯು ದಿಳ್ಳಿಗೆ ಹೋಗಿ ಸಮ್ರಾಜನ ಸಮಕ್ಷದಲ್ಲಿ ಮಾತಾಡಿ ಬಗೆಹರಿಸ್ಸಿ ಕೊಳ್ಳುವಂತೆ ನಿಶ್ಚಯಿಸಿಕೊಂಡರು.

ಕೆಲವು ದಿನಗಳ ಮೇಲೆ ಜಯಸಿಂಹನು ಬಿಜಾಪುರದ ಮೇಲೆ ದಂಡೆತ್ತಿ ಹೋದನು. ಮೇಲೆ ಕಂಡ ಕೌಲಿಗನುಸಾರವಾಗಿ ಶಿವಾಜಿ ಎರಡು ಸಾವಿರ ಕುದುರೆಯನ್ನೂ ಎಂಟು ಸಾವಿರ ಕಾಲಾಳನ್ನೂ ತೆಗೆದು ಕೊಂಡು ನೇತಾಜಿ ಪಾಲ್ಕರನ ಸಂಗಡ ಮೊಗಲ್ ಸೇನೆಗೆ ನೆರವಾಗಿ ಬಿಜಾಪುರಕ್ಕೆ ಹೋದನು. ಈ ಯುದ್ಧದಲ್ಲಿ ಬಿಜಾಪುರ ಸಂಸ್ಥಾನದವರು ಸೋತು ಮೊಗಲರಿಗೆ ಕಪ್ಪವನ್ನು ಕೊಡಲೊಪ್ಪಿಕೊಂಡರು. ಮೊಗಲ್ ಸಮ್ರಾಜನು ಶಿವಾಜಿಯ ಶೌರ್ಯ ಸಾಹಸಾದಿ ಗುಣಗಳನ್ನು ಕೇಳಿ ಸಂತುಷ್ಟನಾಗಿ ಸನ್ಮಾನಗಳನ್ನು ಮಾಡಿ ದಿಳ್ಳಿಗೆ ಬರುವಂತೆ ಅವನಿಗೆ ಆಹ್ವಾನ ಪತ್ರವನ್ನು ಬರೆದನು.

ವೃದ್ಧ ಜಯಸಿಂಹನು ಬಹು ಕಾಲ ಶಿವಾಜಿಯ ಸಹವಾಸದ ಲ್ಲಿದ್ದು ಅವನ ಮಧುರ ವಾಕ್ಪಟುತ್ವ, ಬುದ್ಧಿ, ಸ್ವದೇಶಾನುರಾಗ ಮೊದ ಲಾದ ಸದ್ಗುಣಗಳನ್ನು ಕಂಡು ಅವನಿಗೆ ಮಿತ್ರನಾಗಿ ಸಹಾಯ ಮಾಡಲು ಸಿದ್ಧನಾಗಿದ್ದನು.

---

## ಹನ್ನೆರಡನೆಯ ಪ್ರಕರಣ

---

# ಶಿವಾಜಿ ದಿಳ್ಳಿಗೆ ಹೋಗಿ ಸೆರೆಯಿಂದ ತಪ್ಪಿಸಿಕೊಂಡುದು.

ದೇಶ ಕಾಲಜ್ಞನಾದ ಶಿವಾಜಿಯು ಬಿಜಾಪುರದ ಯುದ್ಧವನ್ನು ತೀರಿಸಿಕೊಂಡು ರಾಯಗಡಕ್ಕೆ ಬಂದನು. ತಾನು ದಿಳ್ಳಿಗೆ ಹೋಗುವುದಕ್ಕೆ ಮುಂಚೆ ತನ್ನ ರಾಜ್ಯದಲ್ಲಿಯ ಮುಖ್ಯ ಮುಖ್ಯ ನಗರಗಳನ್ನೂ ದುರ್ಗಗಳನ್ನೂ ನೋಡಿಕೊಂಡು ತಾನಿಲ್ಲದ ಕಾಲದಲ್ಲಿ ಹಗೆಗಳಿಂದ ಬಾಧೆಯುಂಟಾಗದಿರುವುದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವ ಸಲುವಾಗಿ ರಾಯಗಡದಿಂದ ಹೊರಟನು. ಶಿವಾಜಿಯು ದುರ್ಗಗಳನ್ನು ನೋಡಿಕೊಂಡು ಬಂದು, ರಾತ್ರಿಯ ವೇಳೆ ಯಾರೇ ಒಂದರೂ ಕೋಟೆಯ ಬಾಗಿಲನ್ನು ತೆರೆಯಕೂಡದೆಂದು ಕಟ್ಟುಮಾಡಿದನು. ತನ್ನಾಜ್ಞೆಯನ್ನು ಕಾವಲುಗಾರರು ಎಷ್ಟು ಮಟ್ಟಿಗೆ ಪಾಲಿಸುವರೊ ನೋಡಬೇಕೆಂದು ಒಂದಾನೊಂದು ದಿನ ಶಿವಾಜಿಯು ರಾತ್ರಿಕಾಲದಲ್ಲಿ ಪನ್ಹಾಲ ದುರ್ಗದ ಬಾಗಿಲ ಬಳಿ ಹೋಗಿ ನಿಂತು, '' ನನ್ನನ್ನು ಶತ್ರುಗಳು ಮುತ್ತಿರುವರು; ಬಾಗಿಲನ್ನು ತೆರೆದು ಒಳಗೆ ಬಿಡಿ '' ಎಂದನು. ಪಹರೆಯವರು ಬಾಗಿಲನ್ನು ತೆರೆಯಲೊಪ್ಪದೆ ದುರ್ಗ ರಕ್ಷಕರನ್ನು ಕರೆದರು. ಶಿವಾಜಿ ಬಂದ ಸುದ್ದಿಯನ್ನು ಕೇಳಿ ಎಲ್ಲರೂ ಬಂದರು. ಶಿವಾಜಿ ಬಾಗಿಲನ್ನು ತೆರೆಯಿರೆಂದು ಕೋಪಗೊಂಡವನಂತೆ ಮತ್ತೊಂದು ಸಾರಿ ಕೇಳಿದನು. ದುರ್ಗ ರಕ್ಷಕರು, '' ಇನ್ನೇನು ಬೆಳಗಾಗುವ ಹೊತ್ತು; ತಮ್ಮಾಜ್ಞೆಯ ಮೇರೆಗೆ ನಾವು ಬಾಗಿಲನ್ನು ಹಾಕಿರುವೆವು; ಇಷ್ಟು ಹೊತ್ತಿನಲ್ಲಿ ತೆರೆಯಲಾಗುವುದಿಲ್ಲ; ಶತ್ರುಗಳನ್ನು ತಡೆದಟ್ಟಲು ನಾವೆಲ್ಲರೂ ಸೊಂಟಗಟ್ಟಿ ನಿಂತಿರುವೆವು'' ಎಂದು ವಿನಯದಿಂದ ಹೇಳಿದರು.

**ಬೆಳಗಾಗುತ್ತಲೆ ಬಾಗಿಲನ್ನು ತೆರೆದು ಎಲ್ಲರೂ ಶಿವಾಜಿಯ ಕಾಲಿಗೆ ಬಿದ್ದರು. ಶಿವಾಜಿ ಅವರ ಕರ್ತವ್ಯ ನಿಷ್ಠತೆಗೆ ಮೆಚ್ಚಿ ಎಲ್ಲರಿಗೂ ಬಹುಮಾನ**

ವನ್ನು ಕೊಟ್ಟು ರಾಯಗಡಕ್ಕೆ ಹೋದನು. ಅಲ್ಲಿ ಸಂಸ್ಥಾನದ ಮುಖ್ಯಾಧಿಕಾರಿಗಳನ್ನೆಲ್ಲ ಕರೆಯಿಸಿ ಸಭೆಯನ್ನು ಮಾಡಿ ತಾನು ದಿಲ್ಲಿಗೆ ಹೋಗುವ ವಿಷಯವನ್ನು ತಿಳಿಸಿ, ಸದಸ್ಯರನ್ನು ಕುರಿತು ಹೇಳಿದುದೇನೆಂದರೆ, "ನಾವು ಅಸ್ಥಿರವಾದ ಈ ಪ್ರಪಂಚದ ನಿವಾಸಿಗಳು; ಕಾಲ ಗತಿಯಿಂದ ನಮ್ಮೊಳಗೆ ಯಾರಾದರೂ ಶತ್ರು ಪಕ್ಷದಲ್ಲಿ ನಾವು ಇಷ್ಟು ಪರಿಶ್ರಮ, ಕ್ಲೇಶ, ಅಧ್ಯವಸಾಯಗಳಿಂದ ಧರ್ಮ ಸಂಸ್ಥಾಪನೆಯನ್ನು ಮಾಡಿ ಪಡೆದ ಸ್ವಾಧೀನತೆಯು ಮತ್ತೆ ಚಿರ ದಾಸತ್ವವಾಗಿ ಪರಿಣಮಿಸು ವುದೋ ಹೇಗೋ ತಿಳಿಯದು. ನಾವೆಲ್ಲರೂ ಒಂದಾಗಿ ಒಂದೇ ಮನಸ್ಸಿನಿಂದ ಕಾರ್ಯಗಳನ್ನು ಮಾಡುತ್ತಿರುವ ವರೆಗೂ ದೇವತೆಗಳೆಲ್ಲರೂ ನಮ್ಮನ್ನು ಕೃಪಾ ಕಟಾಕ್ಷದಿಂದ ನೋಡುವರು ; ಇದಕ್ಕೇನೂ ಸಂಶಯ ವಿಲ್ಲ. ತಂದೆಯಿಲ್ಲದ ವೇಳೆಯಲ್ಲಿ ಯಾವ ಪುತ್ರನು, ಮಿತ್ರನಿಲ್ಲದ ವೇಳೆ ಯಲ್ಲಿ ಯಾವ ಸ್ನೇಹಿತನು, ಒಡೆಯನಿಲ್ಲದ ವೇಳೆಯಲ್ಲಿ ಯಾವ ಭೃತ್ಯನು ತನ್ನ ಕಾರ್ಯವನ್ನು ನಿಯಮ ನಿಷ್ಠೆಗಳಿಂದ ಮಾಡುವನೊ ಅವನೇ ಪುತ್ರನು, ಅವನೇ ಸ್ನೇಹಿತನು, ಅವನೇ ಭೃತ್ಯನು. ಈಗ ನಾನು ದಿಲ್ಲಿಗೆ ಹೋಗುವುದು ಸ್ವಪ್ರಯೋಜನಕ್ಕಲ್ಲ. ಈಗಿನ ಕಾರ್ಯಸ್ಥಿತಿಯಲ್ಲಿ ನಾವು ಮೊಗಲರ ಸಂಗಡ ಸಂಧಿಮಾಡಿಕೊಳ್ಳದಿದ್ದರೆ, ಯಾವ ವೀರರು ತಮ್ಮೆದೆಯ ರಕ್ತವನ್ನು ಬಸಿದು ಈ ರಾಜ್ಯವನ್ನು ನೆಲೆಗೊಳಿಸಿರುವರೋ, ಯಾವ ಮಹಾ ಪುರುಷರು ಪರಿಶ್ರಮದಿಂದಲೂ ಸ್ವಾರ್ಥ ತ್ಯಾಗದಿಂದಲೂ ಈ ರಾಜ್ಯವನ್ನು ಉನ್ನತಿಗೆ ತಂದಿರುವರೋ, ಯಾವ ಮಹಾ ಪ್ರಾಣರು ಜೀವಾವಧಿ ಸಕಲ ಸುಖಗಳನ್ನೂ ತೊರೆದು ಎಲ್ಲರನ್ನೂ ಒಟ್ಟುಗೂಡಿಸಿ ಏಕಮತ್ಯದಿಂದ ಬಾಳುವಂತೆ ಮಾಡಿರುವರೋ, ಆ ಮಹಾತ್ಮರ ಕಾರ್ಯ ಗಳೆಲ್ಲವೂ ವ್ಯರ್ಥವಾಗುವುವು. ಹೀಗಾಗುವ ಸಂಭವವೇನೋ ತೋರು ತ್ತಿದೆ. ನಿಮ್ಮಂತಹ ಕರ್ತವ್ಯ ಪರಾಯಣರು ಒಂದಾದರೆ ಸಸಾಗರ ದ್ವೀಪ ಪೃಥ್ವಿಯನ್ನೂ ಗೆಲ್ಲಬಹುದು. ಆದರೂ ಸಂದೇಹಾಸ್ಪದವಾದ ಕಾರ್ಯದಲ್ಲಿ ಬುದ್ಧಿವಂತರು ಪ್ರವರ್ತಿಸರು. ಈಗ ಬಿಜಾಪುರ ಸಂಸ್ಥಾ ನಕ್ಕೂ ನಮಗೂ ಶತ್ರುತ್ವವು ಹೊಮ್ಮಿರುವುದು. ಇದರ ಮೇಲೆ ಮೊಗ ಲರ ಸಂಗಡಲೂ ನಾವು ದ್ವೇಷವನ್ನು ಬೆಳೆಯಿಸಿ ನೋತರೆ, ಸ್ವರ್ಗಸ್ಥ

ರಾದ ಆ ಮಹಾ ಪುರುಷರಿಗೆ ನಾವೇನು ಉತ್ತರವನ್ನು ಹೇಳೋಣ? ಮುಂದೆ ಹುಟ್ಟುವ ಪುತ್ರ ಪೌತ್ರಾದಿಗಳು ನಮ್ಮ ಕಾರ್ಯಗಳನ್ನೆಲ್ಲ ಪರ್ಯಾಲೋಚಿಸಿ ಏನೆನ್ನುವರು? ನಮ್ಮ ಅದೂರ ದೃಷ್ಟಿಯಿಂದ ಈ ರಾಜ್ಯಾಂಕುರವು ಅಕಾಲದಲ್ಲಿ ನಾಶವಾದರೆ ನಾವು ಅಪಕೀರ್ತಿಗೆ ಗುರಿ ಯಾಗುವುದೇನೋ ನಿಶ್ಚಯ. ಆದುದರಿಂದ ಮೊಗಲರ ಸಂಗಡ ಸ್ನೇಹವನ್ನು ಬೆಳೆಯಿಸುವ ಉದ್ದೇಶದಿಂದ ನಾನು ದಿಳ್ಳಿಗೆ ಹೋಗಿ ಬರುವೆನು. ಅಲ್ಲೇನಾಗುವುದೊ ಯಾರು ಬಲ್ಲರು? ಕಾಲ ಗತಿಯಿಂದ ನಾನೇನಾದರೂ ಆಗಿಹೋದರೆ ನೀವೆಲ್ಲರೂ ಒಂದಾಗಿ ಶ್ರೀಮಂತ ರಾಜಾರಾಮನಿಗೆ ಪಟ್ಟವನ್ನು ಕಟ್ಟಿ ಏಕಮತ್ಯದಿಂದ ಕಾರ್ಯಗಳನ್ನು ನಡೆಯಿಸಿರಿ. ದೇಶವು ಧನ ಧಾನ್ಯಗಳಿಂದ ಸಮೃದ್ಧಿಯಾಗಿದ್ದರೂ ಪ್ರಜೆ ಗಳು ಹೊಟ್ಟೆಗೆ ಸಿಕ್ಕಿದರೆ ಸಾಕೆನ್ನುತ್ತಿರುವರು; ಜಡತನದಿಂದ ಬತ್ತಿ ಬಳಲಿ ಅಕಾಲ ಮರಣವನ್ನು ಹೊಂದುತ್ತಿರುವರು. ಜನ್ಮ ಭೂಮಿಯು ಪ್ರಾಣಕ್ಕಿಂತ ಪ್ರಿಯವಾದುದು. ಯಾವ ಮಹಾತ್ಮನು ಜನ್ಮ ಭೂಮಿಯ ಕ್ಷೇಮ ಲಾಭಕ್ಕಾಗಿ ಪ್ರಾಣವನ್ನರ್ಪಿಸುವನೊ ಅವನು ಸ್ವದೇಶ ಹಿತೈಷಿ, ಅವನೇ ಸಂನ್ಯಾಸಿ. ಆದುದರಿಂದ, ವೀರರೇ! ಸಮಯ ಬಂದಲ್ಲಿ ಕರ್ತವ್ಯ ಪರಾಙ್ಮುಖರಾಗುವುದು ಉಚಿತವಲ್ಲ. ಯಾವನು ಇಂತಹ ಪವಿತ್ರ ಕಾಲದಲ್ಲಿ ಪ್ರಾಣವನ್ನರ್ಪಿಸಲು ಹಿಂದೆಗೆವನೊ ಅವನು ನೀಚನು.'' ಹೀಗೆ ಹೇಳಿದ ಶಿವಾಜಿಯ ಉತ್ತೇಜಕ ವಚನಗಳನ್ನು ಕೇಳಿ ಎಲ್ಲರೂ ಅವನ ಆಜ್ಞಾನುಸಾರವಾಗಿ ಕಾರ್ಯಗಳನ್ನು ಮಾಡಲು ದೃಢ ಸಂಕಲ್ಪರಾಗಿ ತಮಗಿದ್ದ ಸ್ವಾಮಿಭಕ್ತಿಯನ್ನು ತೋರಿದರು.

ಶಿವಾಜಿಯು ಜೀಜಾಬಾಯಿ, ಮೋರೋಪಂತ ಪೇಶ್ವೆ, ನೀಲೋ ಪಂತ ಮುಜುಮ್‌ದಾರ್, ನೇತಾಜಿ ಪಾಲ್ಕರ ಎಂಬೀ ನಾಲ್ವರ ಕೈಯಲ್ಲಿ ರಾಜ್ಯಭಾರವನ್ನಿಟ್ಟು, ತಾಯಿಯ ಆಜ್ಞೆಯನ್ನೂ ರಾಮದಾಸ ಸ್ವಾಮಿಯ ಉಪದೇಶವನ್ನೂ ಕೈಕೊಂಡು ನೀರಾಜಿ ರಾವುಜಿ, ತ್ರ್ಯಂಬಕ ಸೋನದೇವ, ದತ್ತಾಜಿ, ರಘುನಾಥ ಪಂತ, ಪ್ರತಾಪರಾವ್ ಗುಜರ್, ಹೀರೋಜಿ ಫರ್ಜಂದ್ ಮೊದಲಾದ ತನ್ನ ಕೈಯ ಕೆಳಗಿನ ಆಪ್ತರಾದ ಅಧಿ ಕಾರಿಗಳನ್ನೂ ಒಂದು ಸಾವಿರ ಮಂದಿ ಮಾವಳಿಗಳನ್ನೂ ಮೂರು ಸಾವಿರ

ಮುಂದಿ ರಾವುತರನ್ನೂ ಎಂಟು ವರ್ಷದವನಾದ ತನ್ನ ಮಗ ಸಾಂಬಾಜಿ ಯನ್ನೂ ಕರೆದುಕೊಂಡು ದಿಳ್ಳಿಗೆ ಪಯಣಮಾಡಿದನು. ದಾರಿಯಲ್ಲಿ ಅವನು ಅವರಂಗಾಬಾದಿಗೆ ಹೋಗಲು, ಅವನನ್ನು ನೋಡುವುದಕ್ಕೆ ಜನರು ಸಹಸ್ರಶಃ ಕುತೂಹಲದಿಂದ ಬಂದರು. ಅವರಂಗಾಬಾದು ಜನ ಮಯವಾಯಿತು. ಅಲ್ಲಿ ಜಯಸಿಂಹನ ಆತಿಥ್ಯವನ್ನು ಸ್ವೀಕರಿಸಿ ಅವನ ಉಪದೇಶಗಳನ್ನೆಲ್ಲ ಕೇಳಿ ಶಿವಾಜಿ ಅಲ್ಲಿಂದ ದಿಳ್ಳಿಗಭಿಮುಖವಾಗಿ ಹೊರ ಟನು. ಅವನು ಬರುತ್ತಿದ್ದ ವರ್ತಮಾನವನ್ನು ಕೇಳಿ ಅವರಂಗಜೇಬನು ದಾರಿಯ ಕಡೆಗೂ ಊರೂರುಗಳಲ್ಲಿ ಶಿವಾಜಿಗೆ ಯಥೋಚಿತವಾಗಿ ಉಪಚಾರಗಳನ್ನು ಮಾಡಿ ಮರ್ಯಾದೆಯಿಂದ ಅವನನ್ನು ಸಾಗಕಳು ಹಿಸುವ ಹಾಗೆ ಅಧಿಕಾರಿಗಳಿಗೆಲ್ಲ ಆಜ್ಞೆಮಾಡಿದನು.

ಶಿವಾಜಿಯು ಮಥುರೆ, ಬೃಂದಾವನ ಮೊದಲಾದ ಪುಣ್ಯಕ್ಷೇತ್ರ ಗಳನ್ನೂ ನಗರಗಳನ್ನೂ ನೋಡಿಕೊಂಡು, ಹೋದ ಕಡೆಯಲ್ಲೆಲ್ಲ ದೇವರ ಸೇವೆಯನ್ನು ಮಾಡಿ ಮಾನ ಮರ್ಯಾದೆಗಳನ್ನು ಹೊಂದಿ, ಹೊರಟ ಎರಡು ತಿಂಗಳಿಗೆ ದಿಳ್ಳಿಯ ಸಮೀಪಕ್ಕೆ ಹೋದನು. ಶಿವಾಜಿ ಬರುತ್ತಿರುವ ವರ್ತಮಾನವನ್ನು ಕೇಳಿ ಅವರಂಗಜೇಬನು ಅವ ನನ್ನು ಇದಿರುಗೊಳ್ಳುವುದಕ್ಕೆ ಜಯಸಿಂಹನ ಮಗನಾದ ರಾಮಸಿಂಹ ನನ್ನೂ ಸಾಮಾನ್ಯರಾದ ಅಧಿಕಾರಿಗಳಲ್ಲಿ ಕೆಲವರನ್ನೂ ಕಳುಹಿಸಿದನು. ಸಮ್ರಾಜನು ತೋರಿಸಿದ ಅನಾದರವನ್ನು ಶಿವಾಜಿ ಅರಿತು, ತನ್ನ ಅಸಮಾ ಧಾನವನ್ನು ತೋರಿಸುವುದಕ್ಕೆ ಅದು ಸಮಯವಲ್ಲವೆಂದು, ಸುಮ್ಮನೆ ದಿಳ್ಳಿಗೆ ಹೋದನು. ಇದಕ್ಕೆ ಹಿಂದೆಯೇ, ವರ್ಣಾಶ್ರಮ ಧರ್ಮ ಗಳನ್ನು ರಕ್ಷಿಸುವ ವಿಷಯದಲ್ಲಿ ಅವನು ಮಾಡುತ್ತಿದ್ದ ಪ್ರಯತ್ನಗಳೂ, ಷಯಿಸ್ತಾಖಾನನು ದಂಡೆತ್ತಿ ಹೋಗಿ ಪರಾಭವವನ್ನು ಹೊಂದಿದ ವರ್ತ ಮಾನವೂ ಭಾರತ ಭೂಮಿಯಲ್ಲೆಲ್ಲ ಪ್ರಸಿದ್ಧವಾಗಿದ್ದುವು. ಆ ಲೋಕೋ ತ್ತರ ಪುರುಷನನ್ನು ನೋಡಬೇಕೆಂಬಾಸೆಯಿಂದ ಹಿಂದೂಗಳೂ ಮುಸ ಲ್ಮಾನರೂ ದಿಳ್ಳಿಯ ರಾಯ ಬೀದಿಯಲ್ಲಿ ತಂಡ ತಂಡವಾಗಿ ನೆರೆದರು. ಎಲ್ಲರೂ ಅವನ ಆಗಮನದಿಂದ ಆನಂದಿಸಿದರು. ಅವನಿಳಿದಿದ್ದ ಸ್ಥಳಕ್ಕೆ ಜನಗಳು ಶಿವಪುರವೆಂದು ಹೆಸರಿಟ್ಟರು. ಶಿವಾಜಿ ಅವರಂಗಜೇಬನ

ಸಂದರ್ಶನಕ್ಕೆ ಹೋಗುವ ದಿವಸವು ಗೊತ್ತಾಯಿತು. ಅವನು ಮಾಯಾವಿಯೆಂದೆಣಿಸಿ ಅವರಂಗಜೇಬನು ಲೋಹ ಕವಚವನ್ನೂ ಅಸ್ತ್ರ ಶಸ್ತ್ರಗಳನ್ನೂ ತೊಟ್ಟು ಮೈಗಾವಲನ್ನಿಟ್ಟುಕೊಂಡು ಸಿಂಹಾಸನದಲ್ಲಿ ಬಂದು ಕುಳಿತನು. ಶಿವಾಜಿಯು ಅವರಂಗಜೇಬನನ್ನು ನೋಡ ಹೋಗುವುದಕ್ಕೆ ಮೊದಲೇ ಸಮ್ರಾಜನ ಮುಂದೆ ಯಾವ ರೀತಿಯಲ್ಲಿ ನಡೆದುಕೊಳ್ಳತಕ್ಕದೋ ಹೇಳಿರೆಂದು ಕೇಳಲು, ರಾಜಾ ರಾಮ ಸಿಂಹನು, "ನೆಲವನ್ನು ಮುಟ್ಟಿ ಸಮ್ರಾಜನಿಗೆ ಸಲಾಮು ಮಾಡುವುದು ಪದ್ಧತಿಯಾಗಿದೆ, ಹಾಗೆಯೇ ತಾವೂ ಮಾಡಬೇಕು" ಎಂದನು. ಅದಕ್ಕೆ ಶಿವಾಜಿ, "ಅಷ್ಟು ನನ್ನಿಂದಾಗಲಾರದು; ಈ ಜನ್ಮದಲ್ಲಿ ಯಾವ ಮುಸಲ್ಮಾನನಿಗೂ ನಾನು ಹೀಗೆ ನಮಸ್ಕಾರ ಮಾಡಲಿಲ್ಲ, ಮುಂದೆಯೂ ಮಾಡಲಾರೆನು" ಎಂದನು. ರಾಮಸಿಂಹನು ಈ ಮಾತನ್ನು ಕೇಳಿ ಕಳ ವಳಗೊಂಡು, "ಇದೊಂದು ಧರ್ಮಸಂಕಟವಾಗಿದೆಯಲ್ಲ! ಗರ್ವಿಷ್ಠ ನಾದ ಸಮ್ರಾಜನು ಕೋಪಿಸಿಕೊಂಡರೆ ಕೆಲಸವು ಕೆಡುವುದು" ಎಂದನು. ಇಷ್ಟೆಲ್ಲವನ್ನೂ ಹೇಳಿದ ಮೇಲೆ ಶಿವಾಜಿ ಹಾಗೇ ಆಗ ಲೆಂದೊಪ್ಪಿ ಸಾಂಬಾಜಿಯನ್ನೂ ತನ್ನ ಕಡೆಯ ಮುಖ್ಯಾಧಿಕಾರಿ ಗಳನ್ನೂ ಕರೆದುಕೊಂಡು ರಾಮಸಿಂಹನ ಸಂಗಡ ಅವರಂಗಜೇಬನ ಆಸ್ಥಾನವನ್ನು ಹೊಕ್ಕನು; ಅವರಂಗಜೇಬನಿಗೆ ಮೂರು ಸಾರಿ ಸಲಾ ಮನ್ನು ಮಾಡಿದನು; ಆದರೆ ನೆಲವನ್ನು ಮುಟ್ಟಿ ಸಲಾಮು ಮಾಡಲಿಲ್ಲ. ಅವರಂಗಜೇಬನು ಅದನ್ನು ನೋಡದೆ ಹೋಗಲಿಲ್ಲ. ಕೆಲವರು ಮಹಾ ರಾಷ್ಟ್ರೀಯರು ಶಿವಾಜಿ ಮೂರು ಸಾರಿ ಸಲಾಮು ಮಾಡಿದುದು ಅವ ರಂಗಜೇಬನನ್ನುದ್ದೇಶಿಸಿಯಲ್ಲ, ಮಹಾದೇವ, ಭವಾನಿ, ಷಾಹಜಿ— ಇವರನ್ನುದ್ದೇಶಿಸಿ ಎಂದು ಹೇಳುವರು. ಅದು ಹೋಗಲಿ, ಶಿವಾಜಿ ಕುಳಿತುಕೊಳ್ಳುವುದಕ್ಕೆ ಮಹಾರಾಜ ಯಶವಂತನ ಬಲಗಡೆಯಲ್ಲಿ ಸ್ಥಳ ವನ್ನು ಮಾಡಿದ್ದರು. ಶಿವಾಜಿ ತನ್ನ ಮಗನೊಡನೆ ಆ ಸ್ಥಳದಲ್ಲಿ ನಿಂತು ರಾಮಸಿಂಹನ ಕಡೆಗೆ ತಿರುಗಿ, "ನನ್ನ ಪಾರ್ಶ್ವದಲ್ಲಿ ಕುಳಿತಿರುವರು ಯಾರು?" ಎಂದು ಕೇಳಿದನು. ರಾಮಸಿಂಹನು, "ಅವರು ಮಾರವಾಡ ಸಂಸ್ಥಾನದ ಮಹಾರಾಜರಾದ ಯಶವಂತಸಿಂಹರು" ಎಂದನು. ಯಶ

ವಂತಸಿಂಹನ ಹೆಸರನ್ನು ಕೇಳುತ್ತಲೆ ಶಿವಾಜಿ ಕಿಡಿ ಕಿಡಿಯಾಗಿ ತನಗೆ ಅಪಮಾನವಾಯಿತೆಂದು, "ಯಶವಂತಸಿಂಹನು ಮೊದಲಾದವರೊಳಗೆ ನಾನೂ ಒಬ್ಬನೊ? ಇವನಂತಹ ಮನುಷ್ಯರು ನಮ್ಮ ಸೇನೆಯೊಳಗೆ ಲೆಕ್ಕವಿಲ್ಲದಿರುವರು ; ನಾನು ಮಿತ್ರ ರಾಜನಾಗಿ ಬಂದಿರುವೆನು, ನನ್ನನ್ನು ಅರಮನೆಗೆ ಕರೆದು ಹೀಗೆ ಅಗೌರವವನ್ನು ತೋರಿಸುವುದು ಸರಿಯೊ?" ಎಂದನು.

ಶಿವಾಜಿ ಮೈಮರೆತು ಬೊಬ್ಬಿಡುವುದನ್ನು ರಾಮಸಿಂಹನು ನೋಡಿ ಸ್ಮರಣೆಯನ್ನು ತಂದುಕೊಳ್ಳುವ ಹಾಗೆ ಎಷ್ಟೋ ಬಗೆಯಲ್ಲಿ ಹೇಳಿದನು. ಇವರಿಬ್ಬರಿಗೂ ನಡೆದ ಮಾತುಗಳನ್ನು ಕೇಳಿ ಅವರಂಗಜೇಬನು ಅದೇನೆಂದು ಕೇಳಿದನು. ರಾಮಸಿಂಹನು, "ವನಸಿಂಹವು ಬೋನಿನಲ್ಲಿ ಸಿಕ್ಕಿಬಿದ್ದಿರುವುದರಿಂದ ತಳಮಳಿಸುತ್ತಿದೆ" ಎಂದನು. ಹಾಗಾದರೆ ಅದನ್ನು ಹಿಡಿದುಕೊಂಡು ಹೋಗಿ ಸುಮ್ಮನಾದ ಮೇಲೆ ಮತ್ತೆ ತೆಗೆದುಕೊಂಡು ಬನ್ನಿರೆಂದು ಪಾದಷಾಹನು ಆಜ್ಞೆ ಮಾಡಿದನು. ಶಿವಾಜಿಯು ಪರಿವಾರ ಸಮೇತನಾಗಿ ರಾಮಸಿಂಹನ ಸಂಗಡ ರಾಜ ಸಭೆಯನ್ನು ಬಿಟ್ಟು ಹೊರಗೆ ಹೋದನು. ಈ ರೀತಿಯಾಗಿ ಶಿವಾಜಿ ಮೊಗಲ್ ಸಮ್ರಾಜನನ್ನು ನೋಡುವುದಕ್ಕೆ ಮೊತ್ತಮೊದಲು ಹೋದುದು ಕಟ್ಟಕಡೆಯೂ ಆಯಿತು.

ಈ ಸಂದರ್ಭವು ನಡೆದ ಕಾಲದಲ್ಲಿ ಅವರಂಗಜೇಬನು ಮೊಗಲ್ ಸಾಮ್ರಾಜ್ಯದ ಶಿಖರದಲ್ಲಿ ಅಧಿರೂಢನಾಗಿದ್ದನು ; ಆ ಕಾಲದಲ್ಲಿ ಮೊಗಲರ ಸಂಪತ್ತಿಗೆ ಪಾರವಿಲ್ಲದೆ ಇದ್ದಿತು ; ಅವರ ಐಶ್ವರ್ಯ, ಜಗದ್ವಿಖ್ಯಾತ ಮಯೂರ ಸಿಂಹಾಸನ, ಸಮ್ರಾಜನ ವಿಲಾಸ ವೈಭವ–ಇವುಗಳನ್ನು ನೋಡಿ ಸಾಧಾರಣರಂತೆ ಶಿವಾಜಿ ಬೆರಗಾಗಲಿಲ್ಲ. ಆ ಸಮಯದಲ್ಲಿ ಭಾರತವರ್ಷದ ಪೂರ್ವಪ್ರಭೆಯೂ ಪೂರ್ವಮಹಿಮೆಯೂ ಪೂರ್ವೈಶ್ವರ್ಯವೂ ಮೂರ್ತಿಮತ್ತಾಗಿ ಅವನ ಜ್ಞಾಪಕಕ್ಕೆ ಬಂದುವು ; ಹಿಂದೂಗಳ ಶಿಲ್ಪ ಕೌಶಲಕ್ಕೆ ಸಾಕ್ಷ್ಯವಾದ ಕುತುಬ್ ಮಿನಾರನ್ನೂ, ಪೃಥ್ವೀರಾಜ ಮೊದಲಾದ ರಾಜರ ದುರ್ಗಗಳನ್ನೂ ಅರಮನೆಗಳನ್ನೂ

ಅವನು ನೆನೆದನು. ಹಿಂದೆ ಆರ್ಯಾವರ್ತದ ರಾಜರೆಲ್ಲರೂ ಸೇರಿ ಕೈ ಜೋಡಿಸಿಕೊಂಡು ಭಾರತವರ್ಷದ ಮಹಿಮೆಯನ್ನು ಮುಕ್ತ ಕಂಠದಿಂದ ಗಾನಮಾಡುತ್ತಿದ್ದ ಆ ಇಂದ್ರಪ್ರಸ್ಥವೇ ಇದು; ಯಾವ ಸ್ಥಾನದಿಂದ ಆರ್ಯಕುಲೋದ್ಭವರಾದ ರಾಜನ್ಯರು ಭಾರತವರ್ಷದಲ್ಲಿ ರಾಜ್ಯ ಶಾಸನ ದಂಡವನ್ನು ಪರಿಚಾಲಿಸುತ್ತಿದ್ದರೋ ಆ ಸ್ಥಾನವೇ ಇದು; ಇಲ್ಲಿಯೇ ಈಗ ಮೊಗಲರು ಮನಸ್ಸು ಬಂದಂತೆಲ್ಲ ರಾಜದಂಡವನ್ನು ಪರಿಚಾಲಿಸುತ್ತಿರುವರು—ಎಂಬೀ ವಿಷಯಗಳೆಲ್ಲವೂ ಅವನ ಸ್ಮೃತಿ ಪಥಕ್ಕೆ ಬಂದು ಅವನಿಗಾದ ಅಪಮಾನವನ್ನು ಇಮ್ಮಡಿಸಿದುವು. ಬಿಡಾರಕ್ಕೆ ಹೋದ ಬಳಿಕಲೂ ಶಿವಾಜಿ ರಾಮಸಿಂಹನನ್ನು ಕುರಿತು, "ಯಶವಂತಸಿಂಹನನ್ನೂ ನನ್ನನ್ನೂ ಒಂದು ಮಾಡಿದನಲ್ಲ! ಅವರಂಗಜೇಬನು ಎಂತಹ ಕಳಿಂಗನು!" ಎಂದನು. ಅದಕ್ಕೆ ರಾಮಸಿಂಹನು, "ಈಗ ತಾವು ಸುರಕ್ಷಿತವಾಗಿ ಊರನ್ನು ಸೇರಿಕೊಂಡರೆ ನನ್ನ ಭಾರವನ್ನು ಇಳಿಸಿಕೊಂಡಂತಾಗುವುದು, ತಾವು ದುಡುಕಕೂಡದು" ಎಂದು ಗುಟ್ಟಾಗಿ ಅವನಿಗೆ ಹಿತೋಪದೇಶವನ್ನು ಮಾಡಿದನು.

ಅಷ್ಟರಲ್ಲಿ, ಅವರಂಗಜೇಬನು ಶಿವಾಜಿಯು ಓಡಿಹೋಗದೆಯೂ ಯಾವ ಹೆಚ್ಚು ಕೆಲಸಕ್ಕೂ ಯತ್ನಿಸದೆಯೂ ಇರುವ ಹಾಗೆ ಅವನ ಮೇಲೆ ಕಾವಲು ಹಾಕಿದನು. ಸಾವಿರ ಮಂದಿ ಸೈನಿಕರು ಶಿವಾಜಿ ಇಳಿದಿದ್ದ ಮನೆಯ ಸುತ್ತಲೂ ಹಗಲೂ ಇರುಳೂ ಸಶಸ್ತ್ರರಾಗಿ ಕಾಯುತ್ತಿದ್ದರು. ಹೀಗಿರುವಲ್ಲಿ, ಶಿವಾಜಿಯು ರಘುನಾಥ ಪಂತನನ್ನು ಕರೆಯಿಸಿ, "ಇಲ್ಲಿಯ ನೀರೂ ಗಾಳಿಯೂ ನಮ್ಮ ಸೈನಿಕರಿಗೆ ಆಗವು. ಅವರನ್ನೆಲ್ಲ ಹಿಂದಕ್ಕೆ ಕಳುಹಿಸಲು ಆಜ್ಞೆಯಾಗಬೇಕು" ಎಂದು ಅವರಂಗಜೇಬನ ಬಳಿಗೆ ಹೇಳಿಕಳುಹಿಸಿದನು. ಅವರಂಗಜೇಬನು ಆ ಪ್ರಸ್ತಾವಕ್ಕೊಡಂಬಟ್ಟನು; ಆದರೆ ಶಿವಾಜಿಯ ಸೈನಿಕರು ಅವನನ್ನು ಬಿಟ್ಟುಹೋಗಲು ಇಷ್ಟಪಡಲಿಲ್ಲ; ಎಲ್ಲರೂ ನೆರಳಿನಂತೆ ಅವನ ಸಂಗಡಲೇ ಇದ್ದು ಸುಖದುಃಖಗಳನ್ನನುಭವಿಸಲು ಸಂಕಲ್ಪಮಾಡಿದ್ದರು. ಶಿವಾಜಿ ಅವರನ್ನು ಕರೆಯಿಸಿ, ರಾಜ್ಯಕ್ಕೆ ಹೋಗುವ ಸಲುವಾಗಿ ಹೀಗೆ ಉಪದೇಶ ಮಾಡಿದನು:—"ನೀವೆಲ್ಲರೂ ನನ್ನ ಸಂಗಡಲೇ ಇದ್ದರೆ ವಿಪತ್ತುಗಳು

ಹೆಚ್ಚುವುವು; ಮೂರು ನಾಲ್ಕು ಮಂದಿ ಇದ್ದರೆ ಸಾಕು; ಅನಾಯಾಸ ವಾಗಿ ಶತ್ರುಗಳ ಕಣ್ಣಿಗೆ ಮಣ್ಣುಹಾಕಿ ಕಾರ್ಯವನ್ನು ಗೆಲ್ಲಬಹುದು. ಇಷ್ಟು ಜನರನ್ನೂ ಕಟ್ಟಿಕೊಂಡು ಗುಟ್ಟಾಗಿ ಹೋಗುವುದು ಅಸಾಧ್ಯ; ಇಷ್ಟು ಅಲ್ಪ ಸೇನೆಯನ್ನು ನಂಬಿ ಶತ್ರುಗಳ ಮೇಲೆ ಬೀಳುವುದು ಹುಚ್ಚುತನ. ನೀವೆಲ್ಲರೂ ದೇಶಕ್ಕೆ ಹೋಗಿ ನನಗಾದ ಅಪಮಾನಕ್ಕೆ ಪ್ರತೀಕಾರವನ್ನು ಯೋಚಿಸಿರಿ; ನಾನೂ ಕೂಡಲೆ ಬಂದು ಸೇರು ವೆನು. ಒಂದು ವೇಳೆ ದೇಶಕ್ಕೆ ಹೋಗುವುದು ಈಶ್ವರೇಚ್ಛೆಗೆ ಬಾರದೆ ಹೋದರೆ ಸಾವಿಗಂಜಿ ಹೇಡಿಗಳಾಗಿ ಸುಮ್ಮನಿರಬೇಡಿರಿ; ಜನ್ಮ ಭೂಮಿಯ ರಕ್ಷಣಾರ್ಥವಾಗಿ ನೀವು ಸೊಂಟಗಟ್ಟಿ ನಿಲ್ಲಿರಿ. ಈ ಪವಿತ್ರ ಕಾರ್ಯಕ್ಕೆ ದೇವತೆಗಳೂ ನಿಮಗೆ ನೆರವಾಗುವರು. ಸಹ್ಯಾದ್ರಿ ಮುಂತಾದ ದಕ್ಷಿಣ ದೇಶದ ಪರ್ವತ ರಾಜಿಗಳೂ ಗೋದಾವರಿ ಮೊದ ಲಾದ ನದಿಗಳೂ ನಿಮ್ಮ ಕಾರ್ಯಕ್ಕನುಕೂಲವಾಗಿ, ಮುಸಲ್ಮಾನರಿಗೆ ಅಡಿಗಡಿಗೂ ಅಡ್ಡಬಂದು ಕ್ಲೇಶವನ್ನುಂಟುಮಾಡುವುವು. ನಿಮಗೆ ನಾನೊಂದು ಮಾತನ್ನು ಹೇಳುತ್ತೇನೆ ಕೇಳಿರಿ; ಇದನ್ನು ಯಾವಾ ಗಲೂ ಮನಸ್ಸಿನಲ್ಲಿಡಿರಿ; ಅದೇನೆಂದರೆ:—ಸೈನಿಕರನ್ನು ಬರಿಯ ಮಾತಿ ನಿಂದ ಹುರಿಗೊಳಿಸುವುದಕ್ಕೆ ಪ್ರಯಾಸಪಡಬೇಡಿರಿ; ಹಾಗೆ ಮಾಡು ವುದು ನಿಷ್ಫಲ. ರಣರಂಗದಲ್ಲಿ ಹೃದಯ ಭೇದಕವಾದ ಭೀಷಣ ಶಬ್ದ ವನ್ನು ಕೇಳಿದರೂ ಕತ್ತಿಯ ಹೊಳಪು, ರಕ್ತದ ಕೋಡಿ ಮೊದಲಾದ ಭೀತಿ ಜನಕ ದೃಶ್ಯವನ್ನು ನೋಡಿದರೂ ಯಾರಿಗೇ ಆಗಲಿ ಇಂದ್ರಿಯ ಗಳೆಲ್ಲವೂ ಶಿಥಿಲವಾಗಿ ತಮ್ಮ ತಮ್ಮ ಕಾರ್ಯಗಳನ್ನು ನಿಲ್ಲಿಸುವುವು. ಅನೇಕ ವೀರ ಪುರುಷರು ರಣರಂಗಕ್ಕೆ ಬಂದು ಹೇಡಿಗಳಾಗಿ ಹಿಮ್ಮೆ ಟ್ಟಿರುವುದನ್ನು ನೀವು ಎಷ್ಟೋ ಸಾರಿ ನೋಡಿರುವಿರಿ; ಇಂತಹ ಅವಸ್ಥೆ ಯಲ್ಲಿ ಕೇವಲ ವಾಕ್ಕಿನಿಂದ ಸೈನಿಕರನ್ನು ಧೈರ್ಯಗೊಳಿಸುವಷ್ಟು ಸಮರ್ಥನಾದ ವಾಗ್ಮಿ ಯಾರೂ ಇಲ್ಲ. ಸೇನಾನಾಯಕನು ಸಾವಿಗೆ ಹೆದರದೆ ಮುಂದಾಳಾಗಿ ನುಗ್ಗಿ ತನ್ನ ವಿಕ್ರಮವನ್ನು ತೋರಿ ಎಲ್ಲ ರನ್ನೂ ಪ್ರೋತ್ಸಾಹಗೊಳಿಸಿದ ಹೊರತು ಅವರು ಭಯವನ್ನು ಬಿಟ್ಟು ರಣಮದೋನ್ಮತ್ತರಾಗಿ ಯುದ್ಧರಂಗದಲ್ಲಿ ವಿಕ್ರಮವನ್ನು ತೋರಿಸರು.

ಆದುದರಿಂದ ಬರಿಯ ಮಾತಿನಿಂದ ಭಟರನ್ನು ಉತ್ತೇಜಿಸಲು ಯತ್ನಿಸು ವುದು ಉನ್ಮತ್ತ ಪ್ರಲಾಪವಾಗುವುದೇ ಹೊರತು ಬೇರೆಯಲ್ಲ. ಅಲ್ಪ ಸೇನೆಯೇ ಅಪರಿಮಿತ ಶತ್ರು ಸೇನೆಯನ್ನು ಸಂಪೂರ್ಣವಾಗಿ ಮರ್ದನೆ ಮಾಡಿರುವುದೆಂದು ಇತಿಹಾಸದೊಳಗೆ ಅನೇಕ ಸ್ಥಳಗಳಲ್ಲಿ ಹೇಳಿದೆ. ಅಂತಹ ಅಲ್ಪ ಸಂಖ್ಯೆಯ ಸೇನೆ ಹೆದರದೆ ದೃಢವಾಗಿ ನಿಂತು ಪ್ರಚಂಡ ವಿಕ್ರಮದಿಂದ ಯುದ್ಧಮಾಡಿದುದರಿಂದಲೇ ವಿಜಯ ಲಕ್ಷ್ಮಿ ಆ ಸೇನೆ ಗೊಲಿದಳು. ವಿಜಯಕ್ಕೆ ಇದು ಹೊರತು ಬೇರೆ ಯಾವ ಕಾರಣವೂ ಇಲ್ಲ. ನಾನು ಹೇಳುವ ಯುದ್ಧದ ಈ ಮೂಲ ಮಂತ್ರವನ್ನನುಸರಿಸಿ ಕಾರ್ಯದಲ್ಲಿ ಪ್ರವೃತ್ತರಾದರೆ, ಶತ್ರುಗಳ ಸೇನೆ ಎಷ್ಟೇ ಇದ್ದರೂ, ನೀವು ಅಂಜದಿರಬಹುದು. ಈಗ ನೀವೆಲ್ಲರೂ ಜಾಗ್ರತೆಯಿಂದ ನಮ್ಮ ದೇಶಕ್ಕೆ ಹೋಗಿ ಯುದ್ಧಕ್ಕೆ ತಕ್ಕ ಸಂಧಾನಗಳನ್ನು ಮಾಡಿರಿ.'' ಈ ಉಪದೇಶ ವನ್ನು ಕೇಳಿ ಶಿವಾಜಿಯ ಸೇನೆ ಹಿಂದಿರುಗಿತು. ಅವನ ಸರ್ವ ವ್ಯಾಪಕ ಬುದ್ಧಿಯ ಮುಂದೆ ಅವರಂಗಜೇಬನ ಬುದ್ಧಿ ಕುಂಠಿತವಾಯಿತು.

ಒಂದು ದಿವಸ ಶಿವಾಜಿಯು ನೀರಾಜಿ ಪಂತ, ದತ್ತಾಜಿ ಪಂತ, ತ್ರ್ಯಂಬಕಪಂತ—ಇವರನ್ನು ಕರೆಯಿಸಿ, ಸೆರೆಯಿಂದ ಬಿಡುಗಡೆಯಾಗು ವುದಕ್ಕೆ ಏನು ಉಪಾಯವೆಂದು ಅವರೊಡನೆ ಯೋಚಿಸಿದನು. ಯಾವ ಯೋಚನೆಯೂ ಅವನಿಗೆ ಸರಿಬೀಳಲಿಲ್ಲ. ಬಳಿಕ ಭವಾನಿಯ ಅಭಯವನ್ನು ಹೊಂದಿ ಶಿವಾಜಿಯು ಪ್ರತಿ ಬೃಹಸ್ಪತಿ ವಾರವೂ ಗುರು ಪೂಜೆಯನ್ನು ಮಾಡಲಾರಂಭಿಸಿದನು. ಪ್ರತಿ ಗುರುವಾರದಲ್ಲೂ ಹಗಲು ಮಹೋತ್ಸವ ದಿಂದ ಪೂಜೆಯನ್ನೂ ರಾತ್ರಿಯಲ್ಲಿ ಭಗವನ್ನಾಮ ಸಂಕೀರ್ತನೆಯನ್ನೂ ಮಾಡಿ ದೇವರಿಗೆ ನಿವೇದನ ಮಾಡಿದ ಭಕ್ಷ್ಯಾದಿಗಳನ್ನು ದೊಡ್ಡ ದೊಡ್ಡ ಬಿದಿರ ಬುಟ್ಟಿಗಳಲ್ಲಿ ತುಂಬಿ, ಶುಕ್ರವಾರದ ದಿನ ಬ್ರಾಹ್ಮಣರಿಗೂ ಮುಖ್ಯ ರಾದ ಅಧಿಕಾರಿಗಳಿಗೂ ಬೈರಾಗಿಗಳಿಗೂ ಫಕೀರರಿಗೂ ಹಂಚುವಂತೆ ಆಜ್ಞೆ ಮಾಡಿದನು. ಮೊದಲು ಮೊದಲು ಕಾವಲುಗಾರರು ಬುಟ್ಟಿ ಗಳನ್ನು ಶೋಧಿಸದೆ ಬಿಡುತ್ತಿರಲಿಲ್ಲ. ಯಾವಾಗ ಪ್ರತಿ ಶುಕ್ರವಾರವೂ ಈ ರೀತಿಯಾಗಿ ಭಕ್ಷ್ಯದ ಬುಟ್ಟಿಗಳು ಹೋಗಲಾರಂಭಿಸಿದುವೊ ಆಗ ಕಾವಲುಗಾರರು ತಮ್ಮ ಕಾರ್ಯದಲ್ಲಿ ಉದಾಸೀನರಾಗಿ ಪರೀಕ್ಷೆ

ಮಾಡದೆಯೇ ಬುಟ್ಟಿಗಳನ್ನು ಬಿಡುತ್ತಬಂದರು. ಯಾರೂ ಬುಟ್ಟಿಗಳನ್ನು ಶೋಧಿಸುವುದಿಲ್ಲವೆಂದು ಯಾವಾಗ ತಿಳಿದನೊ ಆಗ ಶಿವಾಜಿಯು ತನ್ನ ಮೈ ಸ್ವಸ್ಥವಾಗಿಲ್ಲವೆಂದು ಕೆಲವು ದಿನಗಳು ಹಾಸಿಗೆಯಲ್ಲಿ ಮಲಗಿ ದನು; ಗೊತ್ತಾಗಿದ್ದ ಆಳುಗಳ ಹೊರತು ಮತ್ತೆ ಯಾರನ್ನೂ ಮನೆ ಯೊಳಗೆ ಬಿಡದಂತಾಜ್ಞೆ ಮಾಡಿದನು. ಹೀಗಿರಲು, ಬಂದಾನೊಂದು ಶುಕ್ರವಾರ ಎಂದಿನಂತೆ ಎಲ್ಲರಿಗೂ, ಯಥೇಚ್ಛವಾಗಿ ಕಾವಲು ಗಾರರಿಗೂ ಬಡವರಿಗೂ ಪೀರರಿಗೂ ಫಕೀರರಿಗೂ, ಭಕ್ಷ್ಯಗಳನ್ನು ಕಳುಹಿಸಿದರು. ಅನಂತರ, ಆ ದಿನವೇ ಶಿವಾಜಿಯೂ ಸಾಂಬಾಜಿಯೂ ಒಂದೊಂದು ಬುಟ್ಟಿಯೊಳಗೆ ಕುಳಿತುಕೊಳ್ಳಲು, ಭೀಮ ಕಾಯರಾದ ಇಬ್ಬರು ಮಾವಳಿಗಳು ಆ ಬುಟ್ಟಿಗಳನ್ನು ತಲೆಯ ಮೇಲೆ ಹೊತ್ತು ಕೊಂಡು ಮನೆಯಿಂದ ಹೊರಟು ದಿಳ್ಳಿಯಿಂದಾಚೆಗೆ ಹೋಗಿ ಒಂದು ನಿರ್ಜನ ಸ್ಥಾನದಲ್ಲಿ ಬುಟ್ಟಿಗಳನ್ನಿಳಿಸಿದರು; ತಂದೆ ಮಕ್ಕಳಿಬ್ಬರೂ ಬುಟ್ಟಿ ಗಳಿಂದ ಹೊರಗೆ ಬಂದರು. ಶಿವಾಜಿಯ ಕೆಲವು ಮಂದಿ ಉದ್ಯೋಗಸ್ಥರು ಮುಂಚಿತವಾಗಿ ಹೋಗಿ ಒಬ್ಬ ಕುಂಬಾರನ ಮನೆಯಲ್ಲಿ ಕಾದಿದ್ದರು; ಅಲ್ಲಿ ಎಲ್ಲರೂ ಸೇರಿ ಮಥುರೆಗೆ ಹೊರಟರು. ಶಿವಾಜಿ ಪಲಾಯನ ಮಾಡಿದ ಬಳಿಕ ಹೀರೋಜಿ ಫರ್ಜಂದ್ ಎಂಬವನು ಶಿವಾಜಿಯ ಉಡಿಗೆ ತೊಡಿಗೆಗಳನ್ನು ಹಾಕಿಕೊಂಡು ಅವನ ಹಾಸಿಗೆಯಲ್ಲಿ ಮಲಗಿದ್ದನು; ಹಾಸಿಗೆಯ ಬಳಿಯಲ್ಲಿ ಒಬ್ಬ ಹುಡುಗನೂ ಇದ್ದನು. ಕಡೆಯ ಶುಕ್ರ ವಾರವು ಕಳೆಯಿತು. ಶನಿವಾರ ಮೂರು ಗಂಟೆಯಾಯಿತು. ಹೀರೋ ಜಿಯು ಶಿವಾಜಿಯ ಬಟ್ಟೆಗಳನ್ನು ತೆಗೆದುಹಾಕಿ ತನ್ನ ಬಟ್ಟೆಗಳನ್ನು ಹಾಕಿಕೊಂಡು ಹುಡುಗನೊಡನೆ ಹೊರಗೆ ಹೊರಟನು. ಕಾವಲು ಗಾರರು ಶಿವಾಜಿಗೆ ಹೇಗಿದೆಯೆಂದು ಕೇಳಿದರು. ಅದಕ್ಕೆ ಹೀರೋಜಿ, "ಹಾಗೆಯೇ ಇದೆ, ಈಗ ತಾನೆ ಕೊಂಚ ನಿದ್ದೆ ಹತ್ತಿದೆ. ನಾನು ಒಂದು ಮೂಲಿಕೆಯನ್ನು ತರುವುದಕ್ಕೆ ಅಂಗಡಿಗೆ ಹೋಗುತ್ತೇನೆ; ನಾನು ಬರುವ ವರೆಗೂ ಯಾರೂ ಒಳಕ್ಕೆ ಹೋಗದ ಹಾಗೆ ನೋಡು ತ್ತಿರಿ" ಎಂದು ಹೇಳಿ ರಾಮಸಿಂಹನನ್ನು ಕಂಡು, ಹುಡುಗನೊಡನೆ ಸ್ವದೇಶಾಭಿಮುಖವಾಗಿ ಪ್ರಯಾಣ ಮಾಡಿದನು. ಶನಿವಾರವೆಲ್ಲವೂ

ಕಳೆಯಿತು; ಭಾನುವಾರ ಒಂಬತ್ತು ಗಂಟೆ ಹೊಡೆಯಿತು. ಶಿವಾಜಿ ಯಿದ್ದ ಮನೆ ಸಂದಡಿಯಿಲ್ಲದೆ ನಿಶ್ಶಬ್ದವಾಗಿದ್ದಿತು. ಕಾವಲುಗಾರರು ಸಂಶಯಪಟ್ಟು ಒಳಗಿನ ಗುಟ್ಟನ್ನು ತಿಳಿಯಬೇಕೆಂದು ಮನೆ ಯೊಳಗೆ ಹೋದರು. ಬರಿಯ ಹಾಸಿಗೆ ಬಿದ್ದಿದ್ದಿತು; ಒಂದು ಪ್ರಾಣಿ ಯೂ ಇರಲಿಲ್ಲ; ಸರ್ವವೂ ಶೂನ್ಯವಾಗಿದ್ದಿತು. ಶಿವಾಜಿಯಿಲ್ಲದ ಸಮಾ ಚಾರವು ಅವರಂಗಜೇಬನಿಗೆ ವರದಿಯಾಯಿತು. ಅವನು ಕೂಡಲೆ ದಿಕ್ಕು ದಿಕ್ಕಿಗೂ ಜನಗಳನ್ನು ಕಳುಹಿಸಿದನು; ಸಂನ್ಯಾಸಿ, ಯೋಗಿ, ಬೈರಾಗಿ, ಫಕೀರ ಮೊದಲಾದವರ ವೇಷದಿಂದ ಗೂಢಚಾರರನ್ನು ನಾಲ್ಕು ದಿಕ್ಕಿಗೂ ಓಡಿಸಿದನು. ನಗರ ನಗರಗಳಲ್ಲೂ ಗ್ರಾಮ ಗ್ರಾಮ ಗಳಲ್ಲೂ ಘೋಷಣ ಪತ್ರವನ್ನು ಪ್ರಚಾರ ಮಾಡಿಸಿದನು; ಶಿವಾಜಿ ಸಿಕ್ಕ ಲಿಲ್ಲ. ಅವನ ಸುದ್ದಿಯೇ ಇಲ್ಲ! ಅವರಂಗಜೇಬನು ಮುಖ್ಯಾಧಿಕಾರಿ ಗಳ ಮೇಲೂ ಕಾವಲುಗಾರರ ಮೇಲೂ ರೇಗಿ ಅವರನ್ನು ಕಠಿನವಾಗಿ ದಂಡಿಸಿ ತನ್ನ ಕೋಪವನ್ನಿಳಿಸಿಕೊಂಡನು.

ಶಿವಾಜಿ ಮಥುರೆಗೆ ಹೋಗಿ ಮೋರೋಪಂತ ಪೇಶ್ವೆಯ ಮೈದುನ ನಾದ ಕೃಷ್ಣಾಜಿ ಪಂತನ ಮನೆಯಲ್ಲಿಳಿದನು. ಕೃಷ್ಣಾಜಿ ಪಂತನೂ ಅವನ ಸಹೋದರರೂ ಯಾತ್ರಿಕರಾಗಿ ಮಥುರೆಗೆ ಹೋಗಿದ್ದರು. ಅವರು ಶಿವಾಜಿಗೆ ಬಂದ ಕಷ್ಟವನ್ನು ಕೇಳಿ ವಿಷಾದಪಟ್ಟು ಸಾಂಬಾಜಿಯನ್ನು ತಮ್ಮ ಸಮೀಪದಲ್ಲಿಟ್ಟುಕೊಂಡು ಅವನನ್ನು ಸುರಕ್ಷಿತವಾಗಿ ರಾಯ ಗಡಕ್ಕೆ ಕಳುಹಿಸಿಕೊಡುವೆವೆಂದು ಶಿವಾಜಿಗೆ ಧೈರ್ಯವನ್ನು ಹೇಳಿ ಕಳುಹಿಸಿದರು. ಶಿವಾಜಿಯೂ ನೀರಾಜಿ ಪಂತನೂ ದತ್ತಾಜಿ ಪಂತನೂ ರಾಘೋಮಿತ್ರನೂ ಜುಟ್ಟು ಮೀಸೆಗಳನ್ನು ವಪನ ಮಾಡಿಸಿಕೊಂಡು, ಕಾವಿಯ ಶಾಟಿಯನ್ನೂ ರುದ್ರಾಕ್ಷ ಮಾಲೆಯನ್ನೂ ಧರಿಸಿ, ಅಲ್ಲಿಂದ ಪ್ರಯಾಗಕ್ಕೆ ಹೋಗಿ ತ್ರಿವೇಣಿಯಲ್ಲಿ ಸ್ನಾನಮಾಡಿಕೊಂಡು, ಕಾಶಿ ಯಲ್ಲಿ ಬಂದಿಳಿದರು. ಅಲ್ಲಿ ಗಂಗಾಸ್ನಾನ ವಿಶ್ವೇಶ್ವರ ದರ್ಶನಾದಿ ಸತ್ಕಾ ರ್ಯಗಳನ್ನು ಮಾಡಿ ಗಯೆಗೆ ಹೋದರು. ಆ ಕ್ಷೇತ್ರದಲ್ಲಿ ವಿಷ್ಣುಪಾದದ ಮೇಲೆ ಪಿಂಡ ಪ್ರದಾನವನ್ನೂ, ವಂಗ ದೇಶದಲ್ಲಿ ಗಂಗಾ ಸಾಗರ ಸಂಗಮ ದಲ್ಲಿ ಸ್ನಾನವನ್ನೂ ಮಾಡಿ ಅಲ್ಲಿಂದ ಕಟಕ್ಕಿಗೆ ಪ್ರಯಾಣ ಮಾಡಿದರು.

ಶಿವಾಜಿ ಪಯಣದ ಮೇಲೆ ಪಯಣ ಮಾಡಿ ಕಾಲ ಕಾಲಕ್ಕೆ ನಿದ್ರಾಹಾರ ಗಳಿಲ್ಲದೆ ಹೋದುದರಿಂದ ಕಣ್ಗೆಟ್ಟು ಬಳಲಿ ದುರ್ಬಲನಾದನು ; ನಡೆವುದಕ್ಕೆ ತ್ರಾಣವಿಲ್ಲದವನಾಗಿ ಒಂದು ಕುದುರೆಯುನ್ನು ಬೆಲೆಗೆ ತೆಗೆದು ಕುದುರೆಯವನಿಗೆ ಚಿನ್ನದ ನಾಣ್ಯವನ್ನು ಕೊಟ್ಟನು. ಸಂನ್ಯಾಸಿಯಾದವನು ಚಿನ್ನದ ನಾಣ್ಯವನ್ನು ಕೊಟ್ಟುದನ್ನು ನೋಡಿ ಅವನು ಸಂಶಯಗ್ರಸ್ತನಾಗಿ, ತಾವು ಶಿವಾಜಿ ಮಹಾರಾಜರಲ್ಲವೆ ? ಎಂದನು. ಶಿವಾಜಿ ಅದಕ್ಕುತ್ತರವನ್ನು ಕೊಡದೆ ಗಂಭೀರವಾಗಿದ್ದು ಅಲ್ಲಿಂದ ಜಗನ್ನಾಥಕ್ಕೆ ಹೊರಟನು. ಅಲ್ಲಿಗೆ ಅವನು ಬರುವುದಕ್ಕೆ ಮುಂಚೆಯೇ ದಿಳ್ಳಿಯಿಂದ ಅವನು ಓಡಿಹೋದ ವರ್ತಮಾನವು ಎಲ್ಲೆಲ್ಲಿಯೂ ಹರಡಿದ್ದಿತು. ಜಗನ್ನಾಥದಿಂದ ಭಾಗಾನಗರ(ಹೈದರಾಬಾದು)ಕ್ಕೆ ಹೋಗಿ ಅಲ್ಲಿಂದ ತನ್ನ ರಾಜ್ಯಕ್ಕೆ ಬಂದು ಸೇರಿದನು.

ಶಿವಾಜಿ ಮಹಾರಾಷ್ಟ್ರ ದೇಶದಲ್ಲಿ ಪ್ರಯಾಣ ಮಾಡುತ್ತ ಒಂದು ದಿನ ಒಬ್ಬ ಬ್ರಾಹ್ಮಣನ ಮನೆಗೆ ಊಟಕ್ಕೆ ಹೋದನು. ಆ ವೃದ್ಧ ಬ್ರಾಹ್ಮಣನು ಯಥೋಚಿತ ಸತ್ಕಾರವನ್ನು ಮಾಡಿ ಬೈರಾಗಿಯ ವೇಷವನ್ನು ತಾಳಿದ್ದ ಶಿವಾಜಿ ಹೊರಡುವ ಸಮಯದಲ್ಲಿ, ''ಅಯ್ಯಾ! ನಾವು ಬಡವರು, ಇದರ ಮೇಲೆ ಕೆಲವು ದಿವಸಗಳ ಹಿಂದೆ ಸೈನಿಕರು ಬಂದು ಇದ್ದುದನ್ನೆಲ್ಲ ದೋಚಿಕೊಂಡು ಹೋದರು'' ಎಂದನು. ಸೈನಿಕರೆನ್ನುತ್ತಲೆ ಶಿವಾಜಿ, ''ಯಾರ ಸೈನಿಕರು ?'' ಎಂದನು. ವೃದ್ಧನು, ''ತೈಲಂಗ ರಾಯನ ಸೇನಾಪತಿತ್ವದಲ್ಲಿ ಬಂದಿರುವ ಶಿವಾಜಿ ಮಹಾರಾಜನ ಸೈನಿಕರು. ಮಹಾರಾಜನು ಇಲ್ಲದಿರುವುದರಿಂದ ಅವರು ಅವನ ಕಟ್ಟಳೆಯನ್ನು ಮೀರಿ ಸ್ವೇಚ್ಛೆಯಾಗಿ ನಮ್ಮನ್ನೆಲ್ಲ ಕೊಳ್ಳೆಗೊಳಿಸುತ್ತಿರುವರು ; ನಮ್ಮ ರಕ್ಷಣಾರ್ಥವಾಗಿ ದೇವರು ಅವನನ್ನು ದಿಳ್ಳಿಯಿಂದ ಶೀಘ್ರವಾಗಿ ಕಳುಹಿಸಲಿ ಎಂದು ಪ್ರಾರ್ಥಿಸುತ್ತಿರುವೆವು'' ಎಂದನು. ಹೊರಡುವ ಕಾಲದಲ್ಲಿ ಶಿವಾಜಿ ಆ ಬಡವನ ಹೆಸರನ್ನು ಗುರುತು ಹಾಕಿಕೊಂಡು ರಾಯಗಡಕ್ಕೆ ಹೋಗಿ ಆ ಬ್ರಾಹ್ಮಣನಿಗೆ ಹಣವನ್ನು ಕಳುಹಿಸಿ ಅವನ ಮಗನಿಗೆ ಒಳ್ಳೆಯ ಉದ್ಯೋಗವನ್ನು ಕೊಟ್ಟನು.

ಶಿವಾಜಿ ನಾನಾ ಪ್ರಕಾರವಾದ ಕಷ್ಟಗಳನ್ನನುಭವಿಸಿ, ನಾನಾ ದೇಶದ ಆಚಾರ ವ್ಯವಹಾರಗಳನ್ನೆಲ್ಲ ತಿಳಿದು, ನೀರಾಜಿ ಪಂತ, ದತ್ತಾಜಿ ಪಂತ, ರಾಘೋಜಿ—ಇವರೊಡನೆ ಶಾ. ಶ. ೧೫೮೮ನೆಯ ಪರಾಭವ ನಾಮ ಸಂವತ್ಸರದ ಮಾರ್ಗಶಿರ ಬಹುಳ ದಶಮಿಯಲ್ಲಿ (೧೬೬೬ನೆಯ ಡಿಶಂಬರು) ರಾಯಗಡದ ದ್ವಾರ ದೇಶದಲ್ಲಿ ಹೋಗಿ ನಿಂತನು. ಬರುತ್ತಿದ್ದ ಸಂನ್ಯಾಸಿ ಚತುಷ್ಟಯವನ್ನು ನೋಡಿ ದುರ್ಗರಕ್ಷಕರು ಅವರನ್ನು ದುರ್ಗದ ಹೊರಗೇ ನಿಲ್ಲಿಸಿ, ಬಂದ ಕೆಲಸವೇನೆಂದು ವಿಚಾರಿಸಿದರು. ಶಿವಾಜಿಯು ಗಂಭೀರ ಸ್ವರದಿಂದ, ''ದುರ್ಗಕ್ಕೆ ಅಧಿಷ್ಠಾತ್ರಿಯಾದ ಜೀಜಾಬಾಯಿಯ ಸಂಗಡ ನಾವು ಮಾತಾಡಬೇಕಾಗಿದೆ, ಆಕೆಗೆ ತಿಳಿಸಿರಿ'' ಎಂದನು. ಜೀಜಾಬಾಯಿ ಆ ವರ್ತಮಾನವನ್ನು ಕೇಳಿ ಪೂಜಾ ದ್ರವ್ಯಗಳನ್ನು ತೆಗೆದುಕೊಂಡು ಹೊರಡಲು ಸಿದ್ಧಳಾದಳು. ಅಷ್ಟರೊಳಗೆ ಶಿವಾಜಿ ಅರಮನೆಯನ್ನು ಹೊಕ್ಕನು. ಜೀಜಾಬಾಯಿ ತೇಜಃಪುಂಜನಾದ ತಪಸ್ವಿಯೊಬ್ಬನು ಬರುತ್ತಿರುವುದನ್ನು ಕಂಡು ಮೇಲಕ್ಕೆದ್ದಳು. ಶಿವಾಜಿ ಕೂಡಲೆ ಜೀಜಾಬಾಯಿಯ ಅಡಿಗೆರಗಿದನು. ಜೀಜಾಬಾಯಿ ಈ ಸಂನ್ಯಾಸಿಯ ಆಚರಣೆಯನ್ನು ನೋಡಿ ಯಾವ ಮಾತನ್ನೂ ಆಡಲರಿಯದೆ ಸುಮ್ಮನೆ ನಿಂತಳು. ತಾಯಿಯ ಕಳವಳವನ್ನರಿತು ಶಿವಾಜಿ ಆಕೆಗೆ ತನ್ನ ಗುರುತನ್ನು ತಿಳಿಸಿದನು. ಜೀಜಾಬಾಯಿ ಆನಂದಾಶ್ರುವನ್ನು ಸುರಿಸಿದಳು. ಕೂಡಲೆ ದುರ್ಗವು ಆನಂದ ಸಾಗರವಾಯಿತು. ಬಾಲಕರೂ ವೃದ್ಧರೂ ಸ್ತ್ರೀಯರೂ ಪುರುಷರೂ ಎಲ್ಲರೂ ಶಿವಾಜಿಯ ಆಗಮನದಿಂದ ಸಂಜೀವಿತರಾದರು. ಶಿವಾಜಿ ಬಂದ ವರ್ತಮಾನವು ವಿದ್ಯುದ್ವೇಗದಿಂದ ಎಲ್ಲೆಲ್ಲೂ ಹಬ್ಬಿತು.

ಕೃಷ್ಣಾಜಿ ಪಂತನೂ ಅವನ ತಮ್ಮಂದಿರೂ ಸಾಂಬಾಜಿಗೆ ದಾರಿಯಲ್ಲಿ ಒಂದೊಂದು ಸಾರಿ ಹೆಣ್ಣು ವೇಷವನ್ನು ಹಾಕಿ ಮೆಲ್ಲ ಮೆಲ್ಲಗೆ ಪಯಣ ಮಾಡಿಕೊಂಡು ಸುರಕ್ಷಿತವಾಗಿ ರಾಯಗಡಕ್ಕೆ ಬಂದು ಸೇರಿದರು. ಅನಂತರ ಶಿವಾಜಿ ಅವರಿಗೂ, ದಿಳ್ಳಿಯಲ್ಲಿ ತನ್ನ ಸುಖ ದುಃಖಗಳೆರಡರಲ್ಲೂ ತನ್ನ ಆಪ್ತ ಸಹಚರರಾಗಿದ್ದ ನೀರಾಜಿ ಪ್ರಭೃತಿಗಳಿಗೂ ನಾನಾ ವಿಧ ಸನ್ಮಾನಗಳನ್ನು ಮಾಡಿದನು.

———

ಹದಿಮೂರನೆಯ ಪ್ರಕರಣ

---

## ಹೋಗಿದ್ದ ನಗರ ದುರ್ಗಗಳನ್ನು ಮತ್ತೆ ವಶಮಾಡಿಕೊಂಡುದು.

ಶಿವಾಜಿ ತನ್ನ ರಾಜ್ಯವನ್ನು ಬಿಟ್ಟು ಹತ್ತು ತಿಂಗಳು ದೇಶಾಂತರ ದಲ್ಲಿದ್ದನು. ಪರಾಕ್ರಮಶಾಲಿಯಾದ ಮೊಗಲ್ ಸಮ್ರಾಜನು ತಂದೆ ಮಕ್ಕಳಿಬ್ಬರನ್ನೂ ಸೆರೆಯಲ್ಲಿಟ್ಟ ಸಂದರ್ಭದಲ್ಲಿ ಅವರು ಮತ್ತೆ ಹಿಂದಕ್ಕೆ ಬರುವ ಪ್ರತ್ಯಾಶೆಯಿರಲಿಲ್ಲ. ನಾಲ್ಕು ಕಡೆಯಲ್ಲೂ ಶತ್ರುಗಳ ಸೇನೆ ತುಂಬಿ ದ್ದಿತು. ಆದರೂ ಶಿವಾಜಿ ಹೊರಟ ಸಮಯದಲ್ಲಿ ರಾಜ್ಯವು ಯಾವ ಸ್ಥಿತಿಯಲ್ಲಿದ್ದಿತೊ ಹಿಂದಿರುಗಿ ಬಂದ ಮೇಲೂ ಅದೇ ಸ್ಥಿತಿಯಲ್ಲಿದ್ದಿತು. ರಾಜಕಾರ್ಯಗಳೆಲ್ಲವೂ ಯಥಾ ರೀತಿಯಾಗಿ ನಡೆಯುತ್ತಿದ್ದುವು. ಈ ಘೋರ ಪರೀಕ್ಷೆಯ ಕಾಲದಲ್ಲಿ ಸಂಸ್ಥಾನಾಧಿಕಾರಿಗಳೆಲ್ಲರೂ ಶ್ರದ್ಧಾ ಭಕ್ತಿಯಿಂದ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುತ್ತಿದ್ದರು. ತಳ ವಾರನು ಮೊದಲ್ಗೊಂಡು ಪ್ರಧಾನ ಮಂತ್ರಿಯ ವರೆಗೂ ಯಾವನೂ ತನ್ನ ಕೆಲಸದಲ್ಲಿ ಅಸಡ್ಡೆಯನ್ನು ತೋರಿಸಲಿಲ್ಲ; ಯಾವನೂ ಸ್ವಾಮಿ ದ್ರೋಹಿ ಯಾಗಿ ಶತ್ರು ಪಕ್ಷವನ್ನು ಸೇರಲಿಲ್ಲ. ಶಿವಾಜಿ ಹಲವು ತಂಡಗಳಾಗಿದ್ದ ಜನಗಳನ್ನು ಒಟ್ಟುಗೂಡಿಸಿ ಎಲ್ಲರನ್ನೂ ಕರ್ತವ್ಯ ಪರಾಯಣರನ್ನಾಗಿ ಮಾಡಿದುದನ್ನು ಪರ್ಯಾಲೋಚಿಸಿ ನೋಡಿದರೆ ಅವನ ಬುದ್ಧಿಯು ಸಾಧಾರಣವಾದುದಲ್ಲವೆಂದು ತಿಳಿಯಬಹುದು. ಪ್ರಭುವನ್ನು ಕೊಂದಾ ಗಲಿ, ಸೆರೆಯಲ್ಲಿಟ್ಟಾಗಲಿ ರಾಜ್ಯವನ್ನು ಅಪಹರಿಸುವುದು ಆ ಕಾಲದಲ್ಲಿ ಸಾಂಕ್ರಾಮಿಕ ರೋಗವಾಗಿದ್ದಿತು. ಇಂತಹ ಭೀಷಣ ಸಾಂಕ್ರಾಮಿಕ ರೋಗದಿಂದ ರಾಜ್ಯವನ್ನು ರಕ್ಷಿಸುವುದು ಸಾಮಾನ್ಯ ಚಿಕಿತ್ಸಕನ ಕಾರ್ಯ ವಾಗಿರಲಿಲ್ಲ. ಮಹಾರಾಷ್ಟ್ರ ರಾಜ್ಯವು ಈ ಭೀಷಣ ಪರೀಕ್ಷೆಯಲ್ಲಿ ಉತ್ತೀರ್ಣವಾದುದು ಉಪದೇಷ್ಟನ ಅಪಾರ ಬುದ್ಧಿಶಕ್ತಿಯನ್ನು ತೋರಿ ಸುವುದು. ಸ್ವಾರ್ಥಪರನೂ ಧೂರ್ತನೂ ಆದ ರಾಜ್ಯಾಪಹಾರಿಯಲ್ಲಿ ಇಂತಹ ಶಕ್ತಿ ಎಂದಿಗೂ ಇರದು.

ಈ ತೆರನಾಗಿ ಶಿವಾಜಿಯು ರಾಷ್ಟ್ರದಲ್ಲಿ ರಾಜ ಕಾರ್ಯಗಳು ಅಚ್ಚು ಕಟ್ಟಾಗಿ ನಡೆಯುತ್ತಿದ್ದುವು. ಬಿಜಾಪುರ ಸಂಸ್ಥಾನಕ್ಕೂ ಮೊಗಲರಿಗೂ ಎಡೆ ಬಿಡದೆ ಯುದ್ಧವು ನಡೆಯುತ್ತಿದ್ದಿತು. ಗೋಲ್ಕೊಂಡ ಸಂಸ್ಥಾನ ದವರು ಆ ಸಂಸ್ಥಾನಕ್ಕೆ ಸಹಾಯವಾಗಿ ದಂಡುಗಳನ್ನು ಕಳುಹಿಸು ತ್ತಿದ್ದರು. ಮೊಗಲ್ ಸಮ್ರಾಜನು ಮಗನ ಮೇಲಣ ಮಮತೆಯಿಂದ ಅವನನ್ನು ಆಕ್ಷೇಪಿಸುತ್ತಿರಲಿಲ್ಲ; ಸೇನಾ ನಾಯಕನ ಮೇಲಣ ಅವಿ ಶ್ವಾಸದಿಂದ ಅವನಿಗೆ ತಕ್ಕಷ್ಟು ಸೇನೆಯನ್ನು ಕೊಡುತ್ತಿರಲಿಲ್ಲ. ಶಿವಾಜಿ ದಿಳ್ಳಿಯಿಂದ ಬಂದು ದಕ್ಷಿಣ ದೇಶದ ಈ ಕಾರ್ಯ ಸ್ಥಿತಿಯನ್ನರಿತು ಸಂತೋಷಿಸಿದನು.

ಅವರಂಗಜೇಬನು ಜಯಸಿಂಹನನ್ನು ಹಿಂದಕ್ಕೆ ಬರುವಂತೆ ಆಜ್ಞೆ ಮಾಡಿದನು. ಆದರೆ ಆ ವೃದ್ಧ ರಾಜಪುತ್ರನು ೧೬೬೭ರಲ್ಲಿ ದಾರಿಯಲ್ಲೇ ಪಂಚತ್ವವನ್ನೈದಿದನು. ಅನಂತರ ಅವರಂಗಜೇಬನು ತನ್ನ ಮಗನಾದ ಮುಆಜಿಮನನ್ನು ಸುಬೇದಾರನನ್ನಾಗಿಯೂ ಜೋಧಪುರ ಮಹಾರಾಜ ನಾದ ಯಶವಂತಸಿಂಹನನ್ನು ಸೇನಾಪತಿಯನ್ನಾಗಿಯೂ ಮಾಡಿ ದಕ್ಷಿಣ ದೇಶಕ್ಕೆ ಕಳುಹಿಸಿದನು. ದಿಳ್ಳಿಯಲ್ಲಿದ್ದ ಕಾಲದಲ್ಲಿ ಶಿವಾಜಿ ಅವರಿಬ್ಬರ ಸಂಗಡಲೂ ಸ್ನೇಹವನ್ನು ಬೆಳೆಯಿಸಿದ್ದನು. ಪೂರ್ವ ಸ್ನೇಹವನ್ನು ನೆನೆದು ಶಿವಾಜಿ ಅವರಿಬ್ಬರ ಕ್ಷೇಮ ಲಾಭವನ್ನು ವಿಚಾರಿಸಿಕೊಂಡು ಬರುವ ಉದ್ದೇಶದಿಂದ ಕಾಣಿಕೆಯೊಂದಿಗೆ ಅವರಂಗಾಬಾದಿಗೆ ದೂತ ರನ್ನು ಕಳುಹಿಸಿದನು. ರಾಜಕುಮಾರನು ದೂತರನ್ನು ಆದರದಿಂದ ಕಂಡು, ಪೂರ್ವದ ಸಂಧಿಗನುಸಾರವಾಗಿ ನಡೆದುಕೊಳ್ಳುವುದಾದರೆ ಸಮ್ರಾಜನು ಅತ್ಯಂತ ಪ್ರೀತನಾಗುವನೆಂದು ಅವರ ಮೂಲಕ ಶಿವಾಜಿಗೆ ಹೇಳಿಕಳುಹಿಸಲು, ಶಿವಾಜಿ ಅದಕ್ಕೊಪ್ಪಿದನು. ಆ ಒಡಂಬಡಿಕೆಯ ಮೇರೆಗೆ ಅವರಂಗಜೇಬನು ಶಿವಾಜಿಗೆ ರಾಜನೆಂಬ ಬಿರುದನ್ನೂ ಬೀರಾರಿ ನಲ್ಲಿ ಒಂದು ಜಹಗೀರನ್ನೂ ಕೊಟ್ಟು ಅವನ ಮಗನನ್ನು ಐದು ಸಾವಿರ ಕುದುರೆಗೆ ಮನಸಬ್ದಾರನನ್ನಾಗಿಟ್ಟನು. ಪುರಂದರ, ಸಿಂಹಗಡ ಎಂಬ ಎರಡು ದುರ್ಗಗಳನ್ನು ಬಿಟ್ಟು ಪುಣೆ, ಚಾಕಣ, ಸೂಪ ಎಂಬ ಜಹಗೀರು ಗಳನ್ನು ಶಿವಾಜಿಗೆ ಹಿಂದಕ್ಕೆ ಕೊಟ್ಟನು. ಹಾಗೆಯೇ, ಶಿವಾಜಿ ಯುದ್ಧ

ಕಾಲದಲ್ಲಿ ಅವರಂಗಜೇಬನಿಗೆ ಸಹಾಯ ಮಾಡುವ ನಿಮಿತ್ತವಾಗಿ ಅಶ್ವ ಸೇನೆಯನ್ನು ಕೊಡುವ ಹಾಗೆ ಒಪ್ಪಿ, ಅದಕ್ಕನುಸಾರವಾಗಿ ಅವರಂಗಾಬಾದಿನಲ್ಲಿ ಒಂದು ಅಶ್ವ ಸೇನೆಯನ್ನಿಟ್ಟು ಅದಕ್ಕೆ ಪ್ರತಾಪರಾವ್ ಗುಜರ್ ಎಂಬವನನ್ನು ಸೇನಾಪತಿಯನ್ನಾಗಿ ನೇಮಿಸಿದನು. ಈ ಸಂಧಿ ಕ್ರಿ. ಶ. ೧೬೬೮ರಲ್ಲಿ ನಡೆಯಿತು. ಎರಡು ವರ್ಷಗಳ ಕಾಲ ಉಭಯ ಪಕ್ಷದವರೂ ಅದಕ್ಕನುಸಾರವಾಗಿ ನಡೆದುಕೊಳ್ಳುತ್ತಿದರು.

ಕ್ರಿ. ಶ. ೧೬೬೯ನೆಯ ವರ್ಷದಲ್ಲಿ ಬಿಜಾಪುರ ಸಂಸ್ಥಾನದವರಿಗೂ ಮೊಗಲರಿಗೂ ಸಂಧಿಯಾಯಿತು. ಮುಆಜಿಮನು ಅನುಕೂಲನಾಗಿದ್ದುದರಿಂದ ಶಿವಾಜಿ ಬಿಜಾಪುರ ಸಂಸ್ಥಾನದಿಂದ ಚೌತ್ಥಾಯಿಯನ್ನೂ ಸರ್ದೇಶಮುಖಿಯನ್ನೂ ತನಗೆ ಸಲಿಸಬೇಕೆಂದು ಕೇಳಲು. ಆ ಸಂಸ್ಥಾನದವರು ಅವುಗಳಿಗೆ ಪ್ರತಿಯಾಗಿ ವರ್ಷಕ್ಕೆ ಮೂರು ಲಕ್ಷ ರೂಪಾಯಿ ಕಪ್ಪವನ್ನು ಕೊಡುವಂತೆ ಒಪ್ಪಿದರು. ಹಾಗೆಯೇ ಗೋಲ್ಕೊಂಡ ಸಂಸ್ಥಾನದವರು ಶಿವಾಜಿಗೆ ಐದು ಲಕ್ಷ ರೂಪಾಯಿಗಳನ್ನು ಕೊಡಲೊಪ್ಪಿದರು. ಈ ರೀತಿಯಾಗಿ ೧೬೬೯ನೆಯ ವರ್ಷದಲ್ಲಿ ಶಿವಾಜಿಯ ಬಲವು ಬಹು ಪ್ರಕಾರದಲ್ಲಿ ವೃದ್ಧಿಯಾಯಿತು. ಹೋಗಿದ್ದ ಜಹಗೀರುಗಳೂ ದುರ್ಗಗಳೂ ಹಿಂದಕ್ಕೆ ಬಂದುವು. ಅವರಂಗಜೇಬನು ಅವನಿಗೊಂದು ಜಹಗೀರನ್ನು ಕೊಟ್ಟು ಅವನ ಮಗನಾದ ಸಾಂಬಾಜಿಯನ್ನು ಉನ್ನತ ಪದವಿಯಲ್ಲಿಟ್ಟನು. ಅದೂ ಅಲ್ಲದೆ, ಶಿವಾಜಿಯು ಬಿಜಾಪುರ ಗೋಲ್ಕೊಂಡ ಸಂಸ್ಥಾನಗಳಿಂದ ಚೌತ್ಥಾಯಿಯನ್ನೂ ಸರ್ದೇಶಮುಖಿಯನ್ನೂ ಸಲಿಸಿಕೊಳ್ಳುವ ಅಧಿಕಾರವನ್ನೂ ಸಂಪಾದಿಸಿದನು.

ಶಿವಾಜಿಯ ಜೀವಾವಧಿಯಲ್ಲಿ ಕ್ರಿ. ಶ. ೧೬೬೮, ೧೬೬೯ನೆಯ ವರ್ಷಗಳು ಅವನಿಗೆ ವಿರಾಮ ಕಾಲವಾಗಿದ್ದುವು. ಆಗ ಅವನು ಯುದ್ಧ ಕಾರ್ಯಗಳನ್ನು ನಿಲ್ಲಿಸಿದ್ದುದನ್ನು ನೋಡಿ ಅನೇಕರು ಅವನು ತೃಪ್ತನಾಗಿಯೊ ಮೊಗಲರ ಮೇಲೆ ಕೈ ಮಾಡುವುದಕ್ಕೆ ಆಗದೆಯೊ ತೆಪ್ಪಗಾದನೆಂದು ಎಣಿಸಿದರು. ಪರಂತು, ಆ ಎರಡು ವರ್ಷಗಳು ಶಿವಾಜಿ ಸುಮ್ಮನಿರಲಿಲ್ಲ; ದಿವಾ ರಾತ್ರಿಯಲ್ಲೂ ಕೆಲಸವನ್ನು ಮಾಡುತ್ತಿದ್ದರೆಯೇ

ಅವನು ಶಾಂತನಾಗಿರುತ್ತಿದ್ದನು. ಆಲಸತೆಯು ಅವನ ಸ್ವಭಾವಕ್ಕೆ ಬಂದುದಲ್ಲ. ಅವನು, "ಇದು ಕರ್ಮಭೂಮಿ, ಕರ್ಮವನ್ನು ಮಾಡುವ ನಿಮಿತ್ತವಾಗಿಯೇ ನಾವು ಇಲ್ಲಿಗೆ ಬಂದಿರುವುದು ; ವಿಶ್ರಾಂತಿಗಾಗಿ ನಾವು ಜನ್ಮವೆತ್ತಲಿಲ್ಲ" ಎಂದು ಆಗಾಗ ಹೇಳುತ್ತಿದ್ದನು. ಮೇಲೆ ಹೇಳಿದ ಎರಡು ವರ್ಷಗಳ ಕಾಲ ಶಿವಾಜಿ ದೇಶ ರಕ್ಷಣೆಯೂ ಪ್ರಜಾ ಪಾಲನೆಯೂ ಪಟುವಾಗಿರುವುದಕ್ಕೆ ಮಾಡಬೇಕಾದ ಕಟ್ಟುಪಾಡು ಗಳನ್ನು ಕುರಿತು ಯೋಚಿಸುತ್ತಿದ್ದನು. ಇವುಗಳನ್ನು ಮುಂದೆ ತಿಳಿಸುವೆವು.

ಶಿವಾಜಿಯು ೧೬೬೮ರಲ್ಲಿ ಅವರಂಗಜೇಬನ ಸಂಗಡ ಸಂಧಿ ಮಾಡಿ ಕೊಂಡಂದಿನಿಂದ ಮೊಗಲರ ಗೋಜಿಗೆ ಹೋಗಲಿಲ್ಲ ; ಅವರ ನೆಲವನ್ನು ಮೆಟ್ಟಲಿಲ್ಲ. ಆದರೂ ಕ್ರಿ. ಶ. ೧೬೭೦ರಲ್ಲಿ ಕುಟಿಲಬುದ್ಧಿಯಾದ ಪಾದಷಾಹನು ಸಂಧಿಯನ್ನು ತೃಣೀಕರಿಸಿ ಶಿವಾಜಿಯನ್ನೂ ಪ್ರತಾಪ ರಾವ್ ಗುಜರ್ ಮೊದಲಾದ ಮುಖ್ಯಾಧಿಕಾರಿಗಳನ್ನೂ ಛಲದಿಂದಲೋ ಬಲದಿಂದಲೋ ಹಿಡಿದು ಕಳುಹಿಸದೆ ಹೋದರೆ ತನ್ನ ಕೋಪಕ್ಕೆ ಪಾತ್ರ ನಾಗುವೆಯೆಂದು ಮಗನಿಗೆ ಕಾಗದವನ್ನು ಬರೆದನು. ಕಾಗದವು ಬರುವುದಕ್ಕೆ ಮುಂಚೆಯೇ ಆ ಸಮಾಚಾರವು ಹೊರಬಿದ್ದುದರಿಂದ ರಾಜಕುಮಾರನು ಸಂಧಿಯ ಮೇರೆಗೆ ಸೇನಾ ಸಮೇತನಾಗಿ ಅವರಂಗಾ ಬಾದಿನಲ್ಲಿ ಪಾಳೆಯ ಮಾಡಿದ್ದ ಪ್ರತಾಪರಾಯನನ್ನು ಬಿಟ್ಟುಕೊಡ ಲೊಲ್ಲದೆ ಅಂತರಂಗವಾಗಿ ಕರೆಯಿಸಿಕೊಂಡು ಇದ್ದ ಸಂಗತಿಯನ್ನು ತಿಳಿಸಿ ಒಡನೆಯೇ ಹೊರಟು ಹೋಗುವಂತೆ ಹೇಳಿದನು. ಆ ರಾಯನು ಆ ರಾತ್ರಿಯೇ ಸೇನೆಯೊಡನೆ ಪುಣೆಗೆ ಹೋದನು. ಶಿವಾಜಿ ಮಂತ್ರಿಗಳ ಸಂಗಡ ಆಲೋಚಿಸಿ ಯುದ್ಧಕ್ಕೆ ಅಣಿಯಾದನು. ಸುಪ್ತ ಸಿಂಹದಂತಿದ್ದು ಅವನು ಕಾರ್ಯಮಾಡತೊಡಗಿದ ಸಂಭ್ರಮವನ್ನು ನೋಡಿ ಅವನು ತೆಪ್ಪಗಾದನೆಂದವರೆಲ್ಲರೂ ಬೆಚ್ಚಿಬಿದ್ದರು. ಸಿಂಹಗಡ ಪುರಂದರ ದುರ್ಗ ಗಳು ಜಯಸಿಂಹನು ತೆಗೆದುಕೊಂಡಂದಿನಿಂದ ಮೊಗಲರ ವಶದಲ್ಲಿದ್ದುವು. ಈ ದುರ್ಗಗಳನ್ನು ಅವರಿಂದ ಬಿಡಿಸಿಕೊಳ್ಳದೆಹೋದರೆ ಆತ್ಮ ರಕ್ಷಣೆಯೂ ಕಷ್ಟವಾಗುವುದೆಂದೆಣಿಸಿ ಶಿವಾಜಿಯು ಸಿಂಹಗಡವನ್ನು ಸಾಧಿಸು

ವುದಕ್ಕೆ ದಂಡನ್ನು ಕಳುಹಿಸಿದನು. ಸೈನಿಕರು ಹೊರಡುವುದಕ್ಕೆ ಮುಂಚೆ ಅವರನ್ನು ಪ್ರೋತ್ಸಾಹಗೊಳಿಸಿ ಸಿಂಹಗಡವನ್ನು ಯಾರು ಗೆಲ್ಲ ಬಲ್ಲಿರಿಯೆಂದು ಕೇಳಲು, ಅವನ ವೀರ ವಾಕ್ಕನ್ನು ಕೇಳಿ ವೀರಾಗ್ರ ಗಣ್ಯನಾದ ತಾನಾಜಿ ಮಾಲಸೂರೆಯೆಂಬವನು ಗಂಭೀರ ಸ್ವರದಿಂದ, "ಸಿಂಹಗಡವನ್ನು ಗೆಲ್ಲುವ ಭಾರವು ನನಗಿರಲಿ; ಅದನ್ನು ಎಷ್ಟು ಅಲ್ಪ ಕಾಲದಲ್ಲಿ, ಎಷ್ಟು ಅಲ್ಪ ಸೇನೆಯಿಂದ ಸಾಧಿಸಬಹುದೊ ಅಷ್ಟಕ್ಕೆ ಮೀರದೆ ದುರ್ಗವನ್ನು ಸಾಧಿಸಲು ಯತ್ನಿಸುವೆನು" ಎಂದು ಹೇಳಿ, ತನ್ನ ಮಗನಿಗೆ ಗೊತ್ತಾಗಿದ್ದ ಮದುವೆಯನ್ನು ನಿಲ್ಲಿಸಿ, ಯುದ್ಧಕ್ಕೆ ಸನ್ನದ್ಧನಾದನು.

ದಕ್ಷಿಣ ದೇಶದಲ್ಲಿ ಸಿಂಹಗಡವು ಒಂದು ಪ್ರಧಾನ ದುರ್ಗವು. ಶಿವಾಜಿ ಅದಕ್ಕೆ ಕೊಟ್ಟ ಹೆಸರು ಅನ್ವರ್ಥನಾಮವಾಗಿದ್ದಿತು. ಆ ದುರ್ಗದ ರಕ್ಷಣೆಗಾಗಿ ಅವರಂಗಜೇಬನು ೧,೨೦೦ ಮಂದಿ ರಾಜಪುತ್ರ ವೀರರನ್ನಿಟ್ಟು ಅವರಿಗೆ ಉದಯಭಾನು ಎಂಬವನನ್ನು ದಳವಾಯಿಯಾಗಿ ನೇಮಿಸಿದ್ದನು. ಸ್ವಾಭಾವಿಕವಾಗಿಯೇ ಈ ದುರ್ಗವು ದುರ್ಭೇದ್ಯ ವಾದುದು; ಅದರ ಮೇಲೆ ರಣವಿಕ್ರಮರಾದ ರಾಜಪುತ್ರರು ಆ ದುರ್ಗ ರಕ್ಷಣೆಯಲ್ಲಿ ಅರ್ಪಿತ ಪ್ರಾಣರಾಗಿದ್ದರು. ತಾನಾಜಿಯೂ ಅವನ ತಮ್ಮನಾದ ಸೂರ್ಯಾಜಿಯೂ ಐನೂರು ಮಂದಿ ಕಟ್ಟಾಳುಗಳಾದ ಮಾವಳಿಗಳನ್ನು ಕರೆದುಕೊಂಡು ವಿಜಯಕ್ಕೆ ಹೊರಟರು. ಹೊರಡು ವುದಕ್ಕೆ ಮುಂಚೆ ಜೀಜಾಬಾಯಿಯು ತಾನಾಜಿಯ ದಂಡಿಗೆ ಔತಣ ಮಾಡಿ ಉಡಿಗೆ ತೊಡಿಗೆಗಳನ್ನೂ ಆಯುಧಗಳನ್ನೂ ಕೊಟ್ಟು ಹರಸಿ ಕಳುಹಿಸಿದಳು. ಶಾ. ಶ. ೧೫೯೧ನೆಯ ಸಂವತ್ಸರದ ಮಾಘ ಮಾಸ, ಕೃಷ್ಣಪಕ್ಷದ ನವಮಿ, ರಾತ್ರಿ ಸರಿಹೊತ್ತು, ತಾನಾಜಿಯು ಬಲಿಷ್ಠ ರಾದ ಸೈನಿಕರಿಬ್ಬರನ್ನು ಸಂಗಡವಿಟ್ಟುಕೊಂಡು ಅತಿ ವೇಗದಿಂದ ಆ ದುರ್ಗಮವಾದ ದುರ್ಗವನ್ನು ಹತ್ತಿ ನೂಲೇಣಿಯನ್ನು ಕಟ್ಟಿದನು. ಚಳಿಯಿಂದ ನಡುಗುತ್ತಿದ್ದರೂ, ಕತ್ತಲೆಯಿಂದ ಮುಗ್ಗರಿಸುತ್ತಿದ್ದರೂ, ಒಬ್ಬ ಭಟನಾದರೂ ಹುಬ್ಬು ಗಂಟಿಕ್ಕಲಿಲ್ಲ, ಧೃತಿಗೆಡಲಿಲ್ಲ. ತಾನಾ ಜಿಯ ಉತ್ಸಾಹವನ್ನು ನೋಡಿ ಎಲ್ಲರೂ ಉತ್ಸಾಹಿತರಾದರು.

ಎಂದಿಗೆ ದುರ್ಗವನ್ನು ಹಿಡಿದೇವು, ಎಂದಿಗೆ ವಿಜಯ ವಾರ್ತೆಯನ್ನು ಶಿವಾಜಿಗೆ ಕಳುಹಿಸಿ ಧನ್ಯರಾದೇವು, ಎಂದಿಗೆ ಸಿಂಹಗಡವನ್ನು ಗೆದ್ದ ಭಟರೆಂದೆನಿಸಿಕೊಂಡು ಕೀರ್ತಿಯನ್ನು ಪಡೆದೇವು ಎಂದು ಎಲ್ಲರೂ ಏಕಾಗ್ರ ಚಿತ್ತರಾಗಿ ಹಂಬಲಿಸುತ್ತಿದ್ದರು. ಯಾವ ಕೆಲಸಕ್ಕೂ ತಾನಾಜಿ ಮುಂದಾಳಾಗುತ್ತಿದ್ದನು. ಅವನೇ ಮುಂದೆ ಹೋಗಿ ನೂಲೇಣಿಯನ್ನು ಕಟ್ಟಿದನು. ಭಟರು ತಿರುಗಿ ನೋಡದೆ ಅದರ ಸಹಾಯದಿಂದ ಒಬ್ಬೊಬ್ಬರಾಗಿ ಮೇಲಕ್ಕೆ ಹತ್ತಿದರು.

ಪೂರ್ವ ದಿಕ್ಕಿನಲ್ಲಿ ಚಂದ್ರೋದಯವಾಯಿತು; ಕತ್ತಲೆಯು ಬೀಡು ತೊಲಗಿತು; ಬೆಟ್ಟದ ಮೇಲೆ ಬೆಳ್ದಿಂಗಳು ಹಬ್ಬಿತು; ಜೀವ ಜಗತ್ತೆಲ್ಲವೂ ನಿಶ್ಯಬ್ದವಾಗಿದ್ದಿತು; ಸಮೀರಣವು ಮಂದ ಗತಿಯಿಂದ ಬೀಸುತ್ತಿದ್ದಿತು. ಎತ್ತ ತಿರುಗಿದರೂ ದುರ್ಗವು ನೀರವವಾಗಿದ್ದಿತು; ಎತ್ತ ನೋಡಿದರೂ ಶಾಂತಿಮಯವಾಗಿದ್ದಿತು. ಹೀಗೆ ಪ್ರಕೃತಿಯೇ ನಿದ್ರಾ ಮುದ್ರಿತವಾಗಿರಲು ಮುನ್ನೂರು ಮಂದಿ ಮಾವಳಿಗಳು ದುರ್ಗದ ಮೇಲೆ ಹತ್ತಿದರು; ಇನ್ನೂರು ಮಂದಿ ಸೂರ್ಯಾಜಿಯ ಸಂಗಡ ದುರ್ಗದ ಕೆಳಗೆ ನಿಂತರು. ಕೂಡಲೆ ಪ್ರಹರಿಯೊಬ್ಬನು ಸೈನಿಕರು ಬರುತ್ತಿದ್ದ ಶಬ್ದವನ್ನು ಕೇಳಿ ಮುಂದಕ್ಕೆ ಹೋಗಲು, ತಾನಾಜಿಯ ಅಂಬಿನೇಟಿನಿಂದ ನೆಲಕ್ಕೆ ಬಿದ್ದನು. ಅವನು ಬಿದ್ದ ಶಬ್ದವು ಮಿಕ್ಕ ಪ್ರಹರಿಗಳಿಗೆ ಕೇಳಿತು. ಅವರೂ ಮಾವಳಿಗಳ ಶರ ಜಾಲಕ್ಕೆ ಬಿದ್ದರು. ಕೂಡಲೆ ರಾಜಪುತ್ರ ಸೈನಿಕರೆಲ್ಲರೂ ಎದ್ದು ಕೈಗೆ ಸಿಕ್ಕಿದ ಅಸ್ತ್ರ ಶಸ್ತ್ರಗಳನ್ನೆಳೆದುಕೊಂಡು ಮಾವಳಿಗಳನ್ನು ಮುತ್ತಲುದ್ಯುಕ್ತರಾದರು. ತತ್‌ಕ್ಷಣವೇ ತಾನಾಜಿ ಸೇನೆಯೊಡನೆ ಅವರ ಮೇಲೆ ಬಿದ್ದನು. ನಾಲ್ಕು ಕಡೆಯಲ್ಲೂ ಶತ್ರುಗಳಿಂದಾಕ್ರಾಂತರಾಗಿ ದುರ್ಗ ರಕ್ಷಕರು ಗುರಿಯಿಡುವುದಕ್ಕಾಗದೆ ಪಂಜುಗಳನ್ನು ಹೊತ್ತಿಸಿದರು. ತಮಗಾದ ಬೆಳಕು ಶತ್ರುಗಳಿಗೂ ಅನುಕೂಲವಾಯಿತು; ಹೊಯ್ಲು ಹೆಚ್ಚಿತು; ಅನೇಕ ರಾಜಪುತ್ರ ವೀರರು ಹತರಾದರು; ಉಳಿದವರು ಕತ್ತಿಯನ್ನು ಹಿರಿದು ಶತ್ರುಗಳ ಮೇಲೆ ಬಿದ್ದರು. ಕಾಲಾಂತಕನಾದ ತಾನಾಜಿಯು ಮುಂಬರಿದನು. ಮಾವಳಿಗಳ

ಸಂಖ್ಯೆ ಅಲ್ಪವಾದರೂ ಅವರು ಎಡೆಗೊಡದೆ ದುರ್ಗ ರಕ್ಷಕರನ್ನು ಅಡಿಗಡಿಗೂ ಹಿಮ್ಮೆಟ್ಟಿಸಿದರು. ದುರ್ಗದ ಮೇಲೆ ಆಗುತ್ತಿದ್ದ ಭೀಷಣ ಶಬ್ದವನ್ನು ಕೇಳಿ ಸೂರ್ಯಾಜಿ ಮುಳ್ಳಿನ ಮೇಲೆ ನಿಂತವನಂತಾಡುತ್ತಿದ್ದನು; ಅವನಿಗೆ ಒಂದು ನಿಮಿಷವು ಒಂದು ವರ್ಷವಾಯಿತು; ದುರ್ಗದ ಮೇಲೆ ಕಾಳಗವು ಹೇಗೆ ನಡೆಯುತ್ತಿದೆಯೊ ನೋಡಬೇಕೆಂಬ ಕುತೂಹಲದಿಂದ ಸೈನಿಕರನ್ನು ಬೇಗ ಬರುವಂತೆ ಹೇಳಿ ಒಡನೆಯೇ ದುರ್ಗವನ್ನು ಹತ್ತಿದನು. ಯುದ್ಧವು ಎಲ್ಲಿ ರೋಮಾಂಚನ ಜನಕವೊ, ಎಲ್ಲಿ ಕತ್ತಿಯ ಕಣಿ ಕಣಿ ಶಬ್ದವು ಕಿವಿಯನ್ನು ಮುಚ್ಚುತ್ತಿದ್ದಿತೊ, ಎಲ್ಲಿ ಹತರಾದ ವೀರರು ತಂಡ ತಂಡವಾಗಿ ಮಲಗಿದ್ದರೊ, ಎಲ್ಲಿ ರಕ್ತದ ಮಡುವು ಹರಿಯುತ್ತಿದ್ದಿತೊ, ಅಲ್ಲಿ ತಾನಾಜಿ ಎಲ್ಲರಿಗೂ ಮುಂದಾಗಿರುವನು; ಎಲ್ಲರ ಹೃದಯದಲ್ಲೂ ವೀರ ರಸವನ್ನು ತುಂಬುತ್ತಿರುವನು; ಕಾಳಗ ಮಾಡುತ್ತ ಮಾಡುತ್ತ ಅವನು ಉದಯಭಾನುವಿದ್ದೆಡೆಗೆ ಹೋದನು. ಇಬ್ಬರೂ ಮಿಡ್ಗಾಖಡ್ಗಿಯಲ್ಲಿ ತೊಡಗಿದರು. ಇಬ್ಬರೂ ರಣಧೀರರು. ಹೊಯ್ಲಿನಲ್ಲಿ ತಾನಾಜಿಯ ಗುರಾಣಿ ಮುರಿದು ಬಿದ್ದಿತು; ಏಟುಗಳನ್ನು ತಪ್ಪಿಸಿಕೊಳ್ಳಲು ಉಪಾಯವಿಲ್ಲದೆ ಹೋಯಿತು. ಆ ವೀರನು ತನ್ನ ವಜ್ರಹಸ್ತವನ್ನೇ ಏಟಿಗೆ ಒಡ್ಡಿದನು. ಭೀಮ ಪರಾಕ್ರಮದಿಂದ ಯುದ್ಧ ಮಾಡುತ್ತ ಆ ಉಭಯ ಸೇನಾಪತಿಗಳೂ ಒಬ್ಬರನ್ನೊಬ್ಬರು ಕೊಂದರು. ಮಾವಳಿಗಳು ಹಿಮ್ಮೆಟ್ಟುವ ಸೂಚನೆಯನ್ನು ತೋರಿಸಿದರು. ಅಷ್ಟರೊಳಗೆ ಸೂರ್ಯಾಜಿ, "ತಂದೆಯ ಸಮಾನನಾದ ಸೇನಾಪತಿಯ ದೇಹವನ್ನು ರಣ ರಂಗದಲ್ಲಿ ರಕ್ಷಕರಿಲ್ಲದ ಹಾಗೆ ಹೊಲೆಯರ ಪಾಲು ಮಾಡಿ ಬಿಟ್ಟು ಓಡುವುದು ಧರ್ಮವೆ? ಇಗೋ ನಾನು ಹಗ್ಗವನ್ನು ಕೊಯ್ದು, ಹೋಗುವ ದಾರಿಯನ್ನು ಕಟ್ಟುತ್ತೇನೆ, ನೋಡಿರಿ; ಓಡಿಹೋಗಲು ಇದೇ ಸಮಯವೆ? ಛಿ! ಛಿ! ಹೇಡಿಗಳಿರಾ! ನಿಮ್ಮ ಪೌರುಷವೆಲ್ಲಿ ಹೋಯಿತು? ರಣದಲ್ಲಿ ಶಿವಾಜಿಯ ಮಾವಳಿಗಳಿಗೆ ಇದಿರಿಲ್ಲವೆಂದು ಕೊಚ್ಚಿಕೊಳ್ಳುತ್ತಿದ್ದಿರಿ; ಈಗ ಆ ಹೆಮ್ಮೆ ಎಲ್ಲಿ ಹೋಯಿತು? ರಣ ರಂಗವನ್ನು ಬಿಟ್ಟು ಜೀವಗಳ್ಳರಂತೆ ಓಡಿಹೋಗಿ ನಂಟರಿಷ್ಟರಿಗೆ ಹೇಗೆ ತಾನೆ ಮೋರೆಯನ್ನು ತೋರಿಸುವಿರಿ? ಯುದ್ಧ ರಂಗ

ವನ್ನು ಬಿಟ್ಟು ಓಡಿದ ಮಾತ್ರದಿಂದಲೇ ಮೃತ್ಯುವಿನ ಬಾಯಿಂದ ತಪ್ಪಿಸಿ ಕೊಂಡಂತಾಯಿತೊ? ಕೀರ್ತಿಯನ್ನು ತೊರೆದು ಅಪಕೀರ್ತಿಗೆ ಗುರಿಯಾಗುವಿರೇನು? ಒಂದು ಕ್ಷಣ ಕಾಲದ ಕಾರ್ಯಕ್ಕೆ ನೀವು ಹಿಮ್ಮೆಟ್ಟಿದರೆ ನಿಮ್ಮ ಪುತ್ರ ಪೌತ್ರಾದಿಗಳು ಚಿರ ಕಾಲ ದುಃಖ ಸಾಗರದಲ್ಲಿ ಮಗ್ನರಾಗುವರೆಂಬುದು ನಿಮಗೆ ತಿಳಿಯದೊ? ಇನ್ನು ತಡಮಾಡಬೇಡಿರಿ, ವಿಳಂಬಕ್ಕೆ ಇದು ಸಮಯವಲ್ಲ'' ಎಂದನು.

ಈ ವೀರ ವಾಕ್ಯನ್ನು ಕೇಳುತ್ತಲೆ ಮಾವಳಿಗಳಿಗೆ ಹೋದ ಪ್ರಾಣವು ಬಂದಿತು; ಅವರ ಭಯ ಮೋಹಗಳು ತೊಲಗಿದುವು. ಕೂಡಲೆ ಅವರೆಲ್ಲರೂ ಒಂದೇ ಸ್ವರದಿಂದ, ''ಹರ ಹರ ಮಹಾದೇವ'' ಎಂದು ಘೋಷಿಸಿದರು. ಈ ಧ್ವನಿಯಿಂದ ಅರ್ಧ ರಾತ್ರಿಯಲ್ಲಿ ಪರ್ವತ ಪರ್ವತದಲ್ಲೂ ಪ್ರತಿ ಧ್ವನಿಯುಂಟಾಗಿ ಬಾರಿ ಬಾರಿಗೂ ಹರ ಹರ ಮಹಾದೇವ ಎಂಬ ಶಬ್ದವು ಹೊರಟಿತು. ಈ ಧ್ವನಿಯ ಅದ್ಭುತ ಶಕ್ತಿಯಿಂದ ಮಾವಳಿಗಳು ರಣ ರಂಗಕ್ಕೆ ತಿರುಗಿದರು. ರಾಜಪುತ್ರ ವೀರರು ಪ್ರಥಮದಲ್ಲಿ ಕಂಪಿತರಾದರು, ಅನಂತರ ವಿಶೃಂಖಲರಾದರು, ತದನಂತರ ಪಲಾಯನವಾದರು. ಒಂದು ಗಂಟೆಯೊಳಗೆ ಐನೂರು ಮಂದಿ ರಾಜಪುತ್ರ ವೀರರು ಕಾಳೆಗದ ಕಳದಲ್ಲಿ ಸತ್ತರು; ಹಲವರು ಓಡುವಾಗ ಬೆಟ್ಟದಿಂದ ಬಿದ್ದು ಮಡಿದರು; ಉಳಿದವರು ಸೆರೆಯಾದರು. ಈ ಪ್ರಸಿದ್ಧ ಯುದ್ಧದಲ್ಲಿ ತಾನಾಜಿಯೂ ಸೇರಿ ಐವತ್ತು ಅರುವತ್ತು ಮಂದಿ ಮಾವಳಿ ಭಟರು ಅತಿಮಾನುಷ ವೀರತ್ವವನ್ನು ತೋರಿ ಲೀಲಾ ಭೂಮಿಯಿಂದ ತೆರಳಿದರು. ಸೂರ್ಯಾಜಿಯು ವಿಜಯವನ್ನು ಹೊಂದಿ ದುರ್ಗದ ಮೇಲಿದ್ದ ಗುಡಿಸಿಲುಗಳಿಗೆ ಬೆಂಕಿಯಿಟ್ಟನು.

ಶಿವಾಜಿಯ ಚಿಂತೆ ಹರಿಯಿತು. ಅವನು ರಾಯಗಡದಿಂದ ಈ ಬೆಳಕನ್ನು ನೋಡಿ ತಾನಾಜಿ ಸಿಂಹಗಡವನ್ನು ಗೆದ್ದನೆಂದು ಆನಂದಿಸಿದನು. ಬೆಳಕು ಹರಿಯುತ್ತಲೆ ಚರರು ತಾನಾಜಿ ಮಡಿದ ವರ್ತಮಾನವನ್ನೂ ಸಿಂಹಗಡವು ಹಸ್ತಗತವಾದ ವರ್ತಮಾನವನ್ನೂ ಏಕ ಕಾಲದಲ್ಲಿ ತಂದರು. ಶಿವಾಜಿ ದುಃಖಪಡುತ್ತ, ''ಸಿಂಹದ ಗುಹೆ ಕೈಸೇರಿತು, ದಿಟ; ಆದರೆ ಸಿಂಹವು ಹೋಯಿತು'' ಎಂದನು. ಈ

ವರ್ತಮಾನವನ್ನು ಕೇಳಿ ಅವನು ಹನ್ನೆರಡು ದಿನ ತಲೆಗೆ ರುಮಾಲನ್ನಿಟ್ಟು ಕೊಳ್ಳಲಿಲ್ಲ. ಬಾಲ್ಯದಿಂದಲೂ ತಾನಾಜಿ ಸ್ವರಾಜ್ಯ ಸಂಸ್ಥಾಪನೆಯ ಕಾರ್ಯದಲ್ಲಿ ಶಿವಾಜಿಯ ಸಹಚರನಾಗಿದ್ದನು; ಸೇವ್ಯ ಸೇವಕ ಭಾವವೊಂದೇ ಅಲ್ಲ, ಇಬ್ಬರಿಗೂ ದೃಢ ಮಿತ್ರತೆಯೂ ಇದ್ದಿತು. ತಾನಾಜಿಯು ಕೊಂಡಸವೆಂಬ ಯಾವ ದುರ್ಗವನ್ನು ಜಯಿಸಿ ಯುದ್ಧ ನಿಪುಣತೆಯಿಂದ ಎಲ್ಲರನ್ನೂ ಬೆರಗು ಮಾಡಿದನೊ, ಅವನ ವೀರತ್ವಕ್ಕೆ ಗುರುತಾಗಿ ಯಾವ ದುರ್ಗಕ್ಕೆ ಸಿಂಹಗಡವೆಂದು ಹೆಸರಾಯಿತೊ, ಕೈತಪ್ಪಿ ಹೋಗಿದ್ದ ಆ ದುರ್ಗವನ್ನು ಹಿಡಿವ ಸಮಯದಲ್ಲೇ ಅವನು ಹತನಾದನು. ಅವನು ಪುಣೆಯ ಬಳಿ ಇರುವ ಉಮರಟ್ ಎಂಬ ಗ್ರಾಮದಲ್ಲಿ ಜನ್ಮವೆತ್ತಿ, ಯೌವನದಲ್ಲಿ ಶಿವಾಜಿಯ ಜೊತೆಯನ್ನು ಸೇರಿ, ಸ್ವಾಮಿ ಕಾರ್ಯವನ್ನೇ ವ್ರತವನ್ನಾಗಿ ಹಿಡಿದು, ಹಿಡಿದ ವ್ರತವನ್ನು ಬಿಡದೆ ಯಾವಜ್ಜೀವವೂ ಆಚರಿಸಿ, ೧೬೭೦ರಲ್ಲಿ ಉದ್ಯಾಪನೆ ಮಾಡಿ ವೀರ ಸ್ವರ್ಗವನ್ನೈದಿದನು.

ಶಿವಾಜಿಯು ಸಿಂಹಗಡಕ್ಕೆ ಸೂರ್ಯಾಜಿಯನ್ನು ಕಿಲ್ಲೇದಾರನನ್ನಾಗಿಟ್ಟು ಎಕ್ಕ ಸೈನಿಕರಿಗೆ ಯೋಗ್ಯತಾನುಸಾರವಾಗಿ ದ್ರವ್ಯವನ್ನೂ ಉನ್ನತ ಪದವಿಯನ್ನೂ ಕೊಟ್ಟು ಬಂದಿಗಳಾದ ರಾಜಪುತ್ರರಿಗೆ ಯಥೋಚಿತ ಬಹುಮಾನವನ್ನು ಮಾಡಿ ಅವರ ದೇಶಕ್ಕೆ ಕಳುಹಿಸಿದನು.

ಸಿಂಹಗಡವು ಸ್ವಾಧೀನವಾದ ಒಂದು ತಿಂಗಳ ಮೇಲೆ ಸೂರ್ಯಾಜಿಯ ಸಾಹಸದಿಂದ ಪುರಂದರವೂ ಕೈಸೇರಿತು. ತರುವಾಯ ಮೋರೋಪಂತ, ನೀಲೋಪಂತ, ಅಣ್ಣಾಜಿ ಪಂತ, ಪ್ರತಾಪರಾಯ ಮೊದಲಾದವರು ಶಿವಾಜಿಯ ರಾಷ್ಟ್ರದಲ್ಲಿ ಮೊಗಲರಿಗೆ ಗೋಷ್ಪಾದ ಭೂಮಿಯೂ ಇಲ್ಲದಂತೆ ಮಾಡಿದರು. ಕೊಂಕಣದಲ್ಲಿಯೂ ಕಲ್ಯಾಣ ಪ್ರಾಂತವೆಲ್ಲವೂ ಶಿವಾಜಿಯ ಕೈವಶವಾಯಿತು. ಅವನು ಜುನ್ನಾರೆಂಬ ಪಟ್ಟಣದ ಹತ್ತಿರ ತನ್ನ ಜನ್ಮಸ್ಥಾನವಾಗಿದ್ದ ಶಿವನೇರ್ ದುರ್ಗವನ್ನು ತೆಗೆದುಕೊಳ್ಳಲು ಮಾಡಿದ ಪ್ರಯತ್ನವು ನಡೆಯಲಿಲ್ಲ. ಆ ಬಳಿಕ ಅವನು ಜಂಜೀರವೆಂಬ ದುರ್ಗಕ್ಕೆ ದಂಡೆತ್ತಿ ಹೋದನು. ಆದರೆ ಸಿದ್ದಿಗಳ ಮೇಲೆ ಅವನ ಕೈ ನಡೆಯಲಿಲ್ಲ. ಅವರು ಬಿಜಾಪುರ ಸಂಸ್ಥಾನದ ಆಶ್ರಯವನ್ನು ಬಿಟ್ಟು ಮೊಗಲರ ಸಹಾಯವನ್ನು ಪಡೆದು ದುರ್ಗವನ್ನು ಅವರ

ವಶಮಾಡಿ ಅವರ ಆಶ್ರಯವನ್ನು ಸೇರಿದರು. ಹೀಗೆ ಮೊಗಲರು ಸೂರತ್ತಿನಿಂದ ಹಡಗುಗಳನ್ನು ಸಾಗಿಸಿಕೊಂಡು ಹೋಗಿ ತನಗೆ ವಿರೋಧವಾಗಿ ಸಿದ್ದಿಗಳಿಗೆ ಸಹಾಯ ಮಾಡಿದುದರಿಂದ ಶಿವಾಜಿಯು ಅದಕ್ಕೆ ಪ್ರತೀಕಾರವನ್ನು ಮಾಡಲೆಣಿಸಿದನು.

ಮಳೆಗಾಲವು ತೀರುತ್ತಲೆ ಶಿವಾಜಿಯು ಸೂರತ್ತಿಗೆ ದಂಡೆತ್ತಿ ಹೋದನು. ಒಡನೆಯೇ ಆ ನಗರ ವಾಸಿಗಳು ಹತ್ತಿರ ಇದ್ದ ಹಳ್ಳಿಗಳಿಗೆ ಓಡಿಹೋದರು. ರಾಣೆಯವರೆಲ್ಲರೂ ಕೋಟೆಯೊಳಗೆ ಹೋಗಿ ಸೇರಿಕೊಂಡರು. ಊರು ಕೊಳ್ಳೆಯಾಯಿತು. ಇಂಗ್ಲೀಷು, ಫ್ರೆಂಚು, ಡಚ್ಚು ವರ್ತಕರು ತಮ್ಮ ಮಳಿಗೆಗಳನ್ನು ಕಾಪಾಡಿಕೊಳ್ಳಲು ಸಿದ್ಧರಾದರು. ಇಂಗ್ಲೀಷರು ಮರಾಟಿಯವರನ್ನು ಎರಡು ಸಾರಿ ಪ್ರತಿಭಟಿಸಿ ಹಿಂದಕ್ಕೆ ಅಟ್ಟಿದರು; ಮೂರನೆಯ ಸಾರಿ ಸಾಮೋಪಾಯದಿಂದ ತಮ್ಮ ಮಳಿಗೆಗಳನ್ನು ಕಾಪಾಡಿಕೊಂಡರು. ಫ್ರೆಂಚಿನವರು, ಕಾಷ್ಗರ್ ಎಂಬ ಪಟ್ಟಣದಿಂದ ಪದಭ್ರಷ್ಟನಾಗಿ ಒಂದು ಸೂರತ್ತಿನಲ್ಲಿ ವಾಸವಾಗಿದ್ದ ಒಬ್ಬ ಟಾರ್ಟರ್ ಜಾತಿಯ ರಾಜಕುಮಾರನ ಮನೆಗೆ ಹೋಗುವುದಕ್ಕೆ ದಾರಿಯನ್ನು ಬಿಟ್ಟು, ಮರಾಟಿಯವರ ಬಾಧೆಯನ್ನು ತಪ್ಪಿಸಿಕೊಂಡರು. ಮರಾಟಿಯವರು ಆ ರಾಜಕುಮಾರನ ಆಸ್ತಿಯೆಲ್ಲವನ್ನು ಸೂರೆಗೊಂಡರು. ವರ್ಷಕ್ಕೆ ಹನ್ನೆರಡು ಲಕ್ಷ ರೂಪಾಯಿಯನ್ನು ಕೊಡಲೊಪ್ಪಿದರೆ ಸರಿ, ಇಲ್ಲವಾದರೆ ಪ್ರತಿ ವರ್ಷವೂ ಆ ನಗರವನ್ನು ಸುಲಿಗೆ ಮಾಡುವೆನೆಂದು ಶಿವಾಜಿಯು, ತಾನು ಹೊರಡುವ ಸಮಯದಲ್ಲಿ, ಆ ನಗರ ವಾಸಿಗಳಿಗೆ ರಾಯಸವನ್ನು ಬರೆದು ಕಳುಹಿಸಿ ರಾಯಗಡಕ್ಕೆ ಹೋದನು. ಅವನು ರಾಯಗಡಕ್ಕೆ ಹೋಗುತ್ತಿದ್ದ ವರ್ತಮಾನವನ್ನು ಕೇಳಿ ಮೊಗಲ್ ಸೇನಾಪತಿಗಳಾದ ದಾವೂದ್ ಖಾನನೂ ಇಖಲಾಸ ಖಾನನೂ ಅವನನ್ನು ಅಟ್ಟಿಕೊಂಡು ಬಂದರು. ಆಗ ಶಿವಾಜಿ ತನ್ನ ಸೇನೆಯನ್ನು ಮೂರು ನಾಲ್ಕು ದಳಗಳನ್ನಾಗಿ ವಿಂಗಡಿಸಿ ವಿಜಯ ಲಬ್ಧ ದ್ರವ್ಯಗಳನ್ನು ಸುರಕ್ಷಿತವಾಗಿ ಸಾಗಿಸಿಕೊಂಡು ಹೋಗುವುದಕ್ಕೆ ಒಂದು ದಳವನ್ನೂ ಶತ್ರುಗಳ ಸಂಗಡ ಕಾಳೆಗವನ್ನು ಮಾಡುವುದಕ್ಕೆ ಮಿಕ್ಕ ಮೂರು ದಳಗಳನ್ನೂ ನೇಮಿಸಿದನು.

ಕಾಂಚನಮಂಚನವೆಂಬ ಕಣಿವೆಯ ಸಮೀಪದಲ್ಲಿ ಮರಾಟಿಯವರಿಗೂ ಮೊಗಲರಿಗೂ ಕಾಳಗವಾಯಿತು. ಮೊಗಲರು ಸೋತು ಓಡಿದರು. ಈ ಸಂದರ್ಭದಲ್ಲಿ ಮಾಹೂರೆಂಬ ಊರಿನ ದೇಶಮುಖನ ವಿತಂತುವು ಮೊಗಲರ ಸಹಾಯಾರ್ಥವಾಗಿ ದಂಡನ್ನು ಕಟ್ಟಿಕೊಂಡು ಹೋಗಿ ಸೋತು ಕೈಸೆರೆಯಾದಳು. ಶಿವಾಜಿ ಆಕೆಯನ್ನು ಅತ್ಯಾದರದಿಂದ ಕಂಡು ಮರ್ಯಾದೆ ಮಾಡಿ ಊರಿಗೆ ಕಳುಹಿಸಿಕೊಟ್ಟನು.

ಶಿವಾಜಿಯು ರಾಯಗಡವನ್ನು ಸೇರಿ ಜಲ ಸ್ಥಲ ಮಾರ್ಗವಾಗಿ ದಿಕ್ಕು ದಿಕ್ಕಿಗೂ ಸೇನೆಗಳನ್ನು ಕಳುಹಿಸಲುದ್ಯುಕ್ತನಾದನು; ದುರ್ಗಗಳನ್ನು ಸಾಧಿಸುವುದಕ್ಕಾಗಿ ಮೋರೋಪಂತ ಪೇಶ್ವೆಗೆ ಇಪ್ಪತ್ತು ಸಾವಿರ ಕಾಲಾಳನ್ನೂ, ಬೇಕಾದಾಗ ಮೋರೋಪಂತನಿಗೆ ಸಹಾಯ ಮಾಡುವುದಕ್ಕೂ ನಗರಗಳ ಮೇಲೂ ಗ್ರಾಮಗಳ ಮೇಲೂ ಚೌತ್ಥಾಯಿಯನ್ನೂ ಸರ್ದೇಶಮುಖಿಯನ್ನೂ ಎತ್ತುವುದಕ್ಕೂ ಪ್ರತಾಪರಾಯನಿಗೆ ಹತ್ತು ಸಾವಿರ ಮಂದಿ ರಾವುತರನ್ನೂ ಕೊಟ್ಟನು. ಹಾಗೆಯೇ, ಸಮುದ್ರ ತೀರದಲ್ಲಿಯ ಬೊಂಬಾಯಿ, ಒಡೋಚು, ಸೂರತ್ತು—ಈ ನಗರಗಳನ್ನು ಆಕ್ರಮಿಸಬೇಕೆಂದು ಯುದ್ಧ ಸಾಮಗ್ರಿಗಳಿಂದ ಕೂಡಿದ ನೂರರುವತ್ತು ಹಡಗುಗಳನ್ನು ಕಳುಹಿಸಿ, ಶಿವಾಜಿಯು ಯಾವ ಕಾರಣದಿಂದಲೊ ಅವುಗಳನ್ನು ಹಿಂದಕ್ಕೆ ಕರೆಯಿಸಿಕೊಂಡನು. ಹಿಂದಿರುಗಿ ಹೋಗುವಾಗ ದಾರಿಯಲ್ಲಿ ಮರಾಟಿಯವರು ಪೋರ್ಚುಗೀಸರ ಒಂದು ಹಡಗನ್ನು ಹಿಡಿದು ರತ್ನಗಿರಿಯಲ್ಲಿರುವ ದಾಬೋಲಿ ಎಂಬ ಸ್ಥಳಕ್ಕೆ ಸಾಗಿಸಿಕೊಂಡು ಹೋದರು. ಅದಕ್ಕೆ ಮುಯ್ಯಾಗಿ ಪೋರ್ಚುಗೀಸರು ಮರಾಟಿಯವರ ಹನ್ನೆರಡು ಹಡಗುಗಳನ್ನು ಹಿಡಿದರು.

ಪ್ರತಾಪರಾಯನು ಖಾನ್ ದೇಶಕ್ಕೆ ದಂಡೆತ್ತಿ ಹೋಗಿ ಅನೇಕ ಪಟ್ಟಣಗಳ ಮೇಲೂ ಗ್ರಾಮಗಳ ಮೇಲೂ ಚೌತ್ಥಾಯಿಯನ್ನೂ ಸರ್ದೇಶಮುಖಿಯನ್ನೂ ಹಾಕಿ ಯಥೇಚ್ಛವಾಗಿ ದ್ರವ್ಯವನ್ನು ಆರ್ಜಿಸಿಕೊಂಡು ಬಂದು ಶಿವಾಜಿಗರ್ಪಿಸಿದನು. ದಿಳ್ಳಿಯ ಸಮ್ರಾಜನಿಗೆ ಅಧೀನವಾಗಿದ್ದ ಪ್ರದೇಶಗಳು ಚೌತ್ಥಾಯಿಯನ್ನೂ ಸರ್ದೇಶಮುಖಿ

ಯನ್ನೂ ಶಿವಾಜಿಗೆ ಸಲಿಸಿದುದಕ್ಕೆ ಇದೇ ಮೊದಲು. ಕ್ರಿ. ಶ. ೧೬೭೧ನೆಯ ಸಂವತ್ಸರದಲ್ಲಿ ಮೋರೋಪಂತ ಪೇಶ್ವೆಯು ಖಾನ್ ದೇಶದಲ್ಲಿರುವ ಸಾಲೇರಿ, ಔಂದ, ಪಟ್ಟ ಮೊದಲಾದ ದುರ್ಗಗಳನ್ನು ಜಯಿಸಿದನು.

ಶಿವಾಜಿಯು ಏಳಿಗೆಗೆ ಬಂದ ಹಾಗೆಲ್ಲ, ಅವರಂಗಜೇಬನ ಕೋಪವೂ ಸಂಶಯವೂ ತನ್ನ ಮಗನ ಮೇಲೂ ಯಶವಂತಸಿಂಹನ ಮೇಲೂ ಹೆಚ್ಚುತ್ತ ಹೋಯಿತು. ಯಶವಂತಸಿಂಹನೇನೂ ಶಿವಾಜಿಗೆ ವೈರಿಯಾಗಿರಲಿಲ್ಲ. ಮೊಗಲ್ ರಾಜ್ಯದಲ್ಲಿ ಶಿವಾಜಿಯು ಹಾವಳಿ ಮಾಡುತ್ತಿದ್ದರೂ ಪ್ರತಿಕ್ರಿಯೆಯನ್ನು ಮಾಡದೆ ತೆಪ್ಪಗಿರುವುದನ್ನು ತಿಳಿದು ತನ್ನ ಮಗನೂ ಶಿವಾಜಿಯೂ ಒಂದಾಗಿರುವರೆಂದು ಭಾವಿಸಿ ಅವರಂಗಜೇಬನು ಮಗನು ಕೇಳಿದಷ್ಟು ಸೇನೆಯನ್ನು ಕಳುಹಿಸಲು ಭಯಪಡುತ್ತಿದ್ದನು. ತಂದೆಗೆ ದ್ರೋಹ ಮಾಡಬೇಕೆಂಬ ಉದ್ದೇಶವು ಮುಅಜಮನಿಗೆ ಇಲ್ಲದಿದ್ದರೂ ಜನವನ್ನು ಕಟ್ಟಿ ತನ್ನ ಪಕ್ಷವನ್ನು ಬಲಪಡಿಸಿಕೊಳ್ಳುವ ಸಲುವಾಗಿ ತಟಸ್ಥನಾಗಿದ್ದಿರಬಹುದು. ಮೊಗಲ್ ಪಾದಷಾಹರ ಅವಸಾನ ಕಾಲದಲ್ಲಿ ಅವರ ಕುಮಾರರಿಗೆ, ಆದರೆ ಮಯೂರಾಸನ ಪ್ರಾಪ್ತಿ, ಆಗದೆ ಹೋದರೆ ಕಾರಾವಾಸ ಪ್ರಾಪ್ತಿ; ಗತ್ಯಂತರವಿರಲಿಲ್ಲ. ಅಂತಹ ಸಮಯಕ್ಕೆ ಶಿವಾಜಿಯಂತಹ ಪ್ರತಾಪಶಾಲಿಯು ತನ್ನ ಪರವಾಗಿರಲೆಂದೊ, ತಂದೆಯು ಇನ್ನಷ್ಟು ದಂಡನ್ನು ಕಳುಹಿಸಲೆಂದೊ, ಮುಅಜಿಮನು ಶಿವಾಜಿಯ ವಿರೋಧವನ್ನು ಕಟ್ಟಿಕೊಳ್ಳಲಿಲ್ಲ. ಅಂತೂ, ಅವರಂಗಜೇಬನು ಯಶವಂತಸಿಂಹನನ್ನು ಹಿಂದಕ್ಕೆ ಕರೆಯಿಸಿಕೊಂಡು ನಾಲ್ವತ್ತು ಸಾವಿರ ಮಂದಿ ಸೈನಿಕರನ್ನು ಕೊಟ್ಟು ಮೊಹಬತ್ ಖಾನನೆಂಬವನನ್ನು ಸೇನಾಪತಿಯನ್ನಾಗಿ ದಕ್ಷಿಣ ದೇಶಕ್ಕೆ ಕಳುಹಿಸಿದನು. ಖಾನನು ರಾಜಕುಮಾರನನ್ನು ಲಕ್ಷ್ಯಮಾಡದೆಯೇ ಸ್ವತಂತ್ರವಾಗಿ ಕಾರ್ಯಮಾಡಲು ಅಧಿಕಾರವನ್ನು ಪಡೆದು ಬಂದನು.

ಕ್ರಿ. ಶ. ೧೬೭೨ನೆಯ ಸಂವತ್ಸರದಲ್ಲಿ ಮೊಗಲರು ಸಾಲೇರಿ ದುರ್ಗವನ್ನು ಹಿಂದಕ್ಕೆ ತೆಗೆದುಕೊಳ್ಳಲು ಪ್ರಯತ್ನ ಮಾಡಿದರು. ಮೊಗಲ್ ಸೇನಾಪತಿಯಾದ ಇಖಲಾಸ್‌ಖಾನನಿಗೂ ಮಹಾರಾಷ್ಟ್ರ ಸೇನಾಪತಿಗಳಾದ ಮೋರೋಪಂತ ಪೇಶ್ವೆ, ಪ್ರತಾಪರಾಯ–ಇವರಿಗೂ

ಯುದ್ಧ ನಡೆಯಿತು. ಎರಡು ಕಡೆಯ ಸೈನಿಕರೂ ಪರಾಕ್ರಮದಿಂದ ಕಾದಿದರು. ಈ ಭೀಷಣ ಯುದ್ಧವು ಸೂರ್ಯೋದಯದಿಂದ ಸೂರ್ಯಾಸ್ತಮಯದ ವರೆಗೂ ನಡೆಯಿತು. ಶಿವಾಜಿಯ ಪಕ್ಷವು ಗೆದ್ದಿತು. ಮೊಗಲರ ಕಡೆಯ ಅನೇಕ ಜನ ಶೂರರು ಹತರಾದರು, ಅನೇಕರು ಬಂದಿಗಳಾದರು. ಈ ಘೋರ ಯುದ್ಧದಲ್ಲಿ ಶಿವಾಜಿಯ ಬಾಲ್ಯ ಸಹಚರನೂ, ಜಾವಲಿ, ರಾಯರಿ ಮೊದಲಾದ ದುರ್ಗಗಳ ವಿಜೇತನೂ, ವರ್ಣಾಶ್ರಮ ಧರ್ಮ ಸಂಸ್ಥಾಪನೆಯಲ್ಲಿ ಮುಖ್ಯಸಹಕಾರಿಯೂ ಆಗಿದ್ದ ಸೂರ್ಯರಾವ್ ಕಾಂಕಡೆಯೆಂಬವನು ಮೃತನಾದನು. ಶಿವಾಜಿಯು ಯುದ್ಧದಲ್ಲಿ ನೊಂದ ಶತ್ರುಗಳನ್ನು, ಗಾಯಗಳಾರಿದ ಬಳಿಕ, ಮಾನದಿಂದ ಕಳುಹಿಸಿಕೊಟ್ಟನು ; ಇಷ್ಟಪಟ್ಟವರಿಗೆ ತನ್ನ ಸಂಸ್ಥಾನದಲ್ಲಿ ಕೆಲಸಗಳನ್ನು ಕೊಟ್ಟನು. ಇನ್ನೂ ಅನೇಕರು ಮೊಗಲ್ ಸೇನೆಯನ್ನು ಬಿಟ್ಟು ಶಿವಾಜಿಯ ಬಳಿಯಲ್ಲಿ ಕೆಲಸಕ್ಕೆ ಸೇರಿದರು. ಖಾನ್ ದೇಶಕ್ಕೆ ಹೆಬ್ಬಾಗಿಲೆನಿಸಿದ ಸಾಲೇರಿ ದುರ್ಗವು ಮರಾಟೆಯವರ ವಶದಲ್ಲಿಯೇ ನಿಂತಿತು.

ಅವರಂಗಜೇಬನು ತನ್ನ ಸೇನೆಯೆಲ್ಲವೂ ನಾಶವಾಗುತ್ತಿರುವುದನ್ನೂ ರಣಕುಶಲರಾದ ಯಶವಂತಸಿಂಹ, ದಿಲೇರಖಾನ, ಮೊಹಬತಖಾನ ಮೊದಲಾದ ಸೇನಾಪತಿಗಳು ಪರಾಜಿತರಾದುದನ್ನೂ ಕೇಳಿ ಚಿಂತಾಕ್ರಾಂತನಾಗಿ ಗುಜರಾತಿನ ಸುಬೇದಾರನಾದ ಬಹದೂರ್ ಖಾನ(ಖಾನ್ ಜಹಾನ್ ಬಹದೂರ್)ನನ್ನು ದಕ್ಷಿಣ ದೇಶಕ್ಕೆ ಸುಬೇದಾರನನ್ನಾಗಿ ನೇಮಿಸಿ ಕಳುಹಿಸಿ ತನ್ನ ಮಗನನ್ನೂ ಮೊಹಬತಖಾನನನ್ನೂ ಹಿಂದಕ್ಕೆ ಕರೆಯಿಸಿಕೊಂಡನು. ದಿಲೇರಖಾನನು ಅಧಿಕಾರದಲ್ಲಿ ಖಾನ್ ಜಹಾನನಿಗೆ ಎರಡನೆಯವನಾಗಿದ್ದನು. ಈ ಹೊಸ ಸುಬೇದಾರನು, ತನ್ನ ಅಲ್ಪ ಸೇನೆಯೊಡನೆ ಮರಾಟೆಯವರ ಮೇಲೆ ಯುದ್ಧಕ್ಕೆ ಹೋಗುವುದು ಕ್ಷೇಮಕರವಲ್ಲವೆಂದೆಣಿಸಿ, ಖಾನ್‌ದೇಶಕ್ಕೆ ಮರಾಟೆಯವರು ಬಾರದಂತೆ ದಾರಿಯಲ್ಲಿ ಕಾವಲಿಟ್ಟು, ಆತ್ಮ ರಕ್ಷಣೆಗೆ ತಕ್ಕಷ್ಟು ಏರ್ಪಾಟು ಮಾಡಿದನು. ಮರಾಟೆಯವರು ಖಾನ್‌ದೇಶದ ಕಡೆಗೆ ಹೋಗುವ ಯೋಚನೆಯನ್ನು ಬಿಟ್ಟು ಅಹಮದ್‌ನಗರಕ್ಕೂ

ಅವರಂಗಾಬಾದಿಗೂ ಮಧ್ಯೆ ಇರುವ ಪ್ರದೇಶಕ್ಕೆ ಹೋಗಿ ಸುಬೇದಾರನನ್ನು ಲಕ್ಷ್ಯಮಾಡದೆ ಊರೂರುಗಳನ್ನು ಕೊಳ್ಳೆಹೊಡೆದರು. ಅಷ್ಟರೊಳಗೆ ಮಳೆಗಾಲವು ಪ್ರಾರಂಭವಾಗಲು, ಸುಬೇದಾರನು ಭೀಮಾನದಿಯು ತೀರದಲ್ಲಿದ್ದ ಒಂದೂರಿನಲ್ಲಿ ಪಾಳೆಯುಮಾಡಿ ಅನೇಕ ದುರ್ಗಗಳನ್ನು ಕಟ್ಟಿಸಿ ಒಂದಕ್ಕೆ ಬಹದೂರ್‌ಗಡವೆಂದು ಹೆಸರಿಟ್ಟು ಅದನ್ನು ಮೊಗಲ ಸೇನೆಗೆ ಅಧಿಷ್ಠಾನವನ್ನಾಗಿ ಮಾಡಿದನು.

ಇತ್ತ, ಶಿವಾಜಿಯು ಗೋಲ್ಕೊಂಡಕ್ಕೆ ದಂಡೆತ್ತಿ ಹೋಗಿ ಸುಲ್ತಾನನಿಂದ ಪುಷ್ಕಲ ಧನವನ್ನು ಕೈಗೆ ಹಾಕಿಸಿಕೊಂಡು ರಾಯುಗಡಕ್ಕೆ ತಿರುಗಿದನು.

ಶಿವಾಜಿಯು ಗೋಲ್ಕೊಂಡಕ್ಕ ಹೋದ ಸುದ್ದಿಯನ್ನು ಕೇಳಿ ಜಂಜೀರದ ಸಿದ್ದಿಯರೂ ಸೂರತ್ತಿನಲ್ಲಿದ್ದ ಮೊಗಲರೂ ಹಡಗುಗಳ ಮೇಲೆ ಹೋಗಿ ಕೊಂಕಣದಲ್ಲಿಯು ಅನೇಕ ರೇವು ಪಟ್ಟಣಗಳನ್ನು ಸೂರೆಗೊಂಡು ಹಾಳು ಮಾಡಿ ದಂಡರಾಜಪುರಿಗೆ ಮುತ್ತಿಗೆ ಹಾಕಿ ಶಿವಾಜಿಯ ನೌಬಲವೆಲ್ಲವನ್ನೂ ನಾಶ ಮಾಡಿದರು; ದುರ್ಗವಾಸಿಗಳನ್ನು ಕೊಂದರು; ಅನೇಕ ಮಂದಿ ಹುಡುಗರನ್ನೂ ಹುಡುಗಿಯರನ್ನೂ ಬಲಾತ್ಕಾರದಿಂದ ಮತ ಭ್ರಷ್ಟರನ್ನಾಗಿ ಮಾಡಿ ತಮ್ಮ ಮತಕ್ಕೆ ಸೆಳೆದುಕೊಂಡರು. ಈ ಯುದ್ಧದಲ್ಲಿ ದುರ್ಗಾಧ್ಯಕ್ಷನಾಗಿದ್ದ ರಘುನಾಥ ಬಲ್ಲಾಳ ಅತ್ರೆಯೆಂಬವನು ಹತನಾದನು.

ಕ್ರಿ. ಶ. ೧೬೭೨ನೆಯ ವರ್ಷದಲ್ಲಿ ಬಿಜಾಪುರ ಸಂಸ್ಥಾನದ ಸುಲ್ತಾನನಾದ ಆಲಿ ಆದಿಲ್‌ಷಾಹನೆಂಬವನು ಮೃತನಾದನು. ಅವನ ಆಳಿಕೆಯಲ್ಲಿ ಆ ಸಂಸ್ಥಾನವು ಬಹಳ ಕಿರಿದಾಯಿತು. ಭೀಮಾ ನದಿಯ ಉತ್ತರಕ್ಕಿರುವ ನಾಡೆಲ್ಲವೂ ಮೊಗಲರ ಪಾಲಾಯಿತು. ಶಿವಾಜಿಯು ದಕ್ಷಿಣಕ್ಕೆ ಫೊಂಡವೆಂಬ ದುರ್ಗದ ವರೆಗೂ ಕೊಂಕಣ ದೇಶವನ್ನೂ, ಸಹ್ಯಾದ್ರಿಗೆ ಪೂರ್ವಕ್ಕಿರುವ ಪಶ್ಚಿಮ ಪ್ರಸ್ಥಭೂಮಿಯನ್ನೂ ಜಯಿಸಿದನು. ಷಾಹನು ಸತ್ತಾಗ ಅವನ ಮಗನಾದ ಸಿಕಂದರನು ಐದು ವರ್ಷದ ಹುಡುಗನು. ಈ ಕಾರಣದಿಂದ ಆ ಸಂಸ್ಥಾನವು ಹಲವು ತಂಡವಾಯಿತು. ಸುಲ್ತಾನನ ಬಾಲ್ಯದಲ್ಲಿ ಅಬ್ದುಲ್ ಕರೀಮ್,

ಖವಾಸ್‌ಖಾನ್ ಎಂಬಿಬ್ಬರು ತಮ್ಮ ತಮ್ಮ ಪದೋನ್ನತಿಗಾಗಿ ಕಾದಾಡು ತ್ತಿದ್ದರು. ಹೀಗಿರುವಲ್ಲಿ, ಕ್ರಿ. ಶ. ೧೬೭೩ರಲ್ಲಿ ಶಿವಾಜಿಯು ವಿಶಾಲ ಗಡದಲ್ಲಿ ಒಂದು ದೊಡ್ಡ ದಂಡನ್ನು ಜೋಡಿಸಿಟ್ಟು ಬಿಜಾಪುರದವರ ಕೈ ಸೇರಿದ್ದ ಪನ್ಹಾಲ ದುರ್ಗವನ್ನು ಸ್ವಾಧೀನ ಮಾಡಿಕೊಂಡನು. ಆ ದಂಡಿನ ಒಂದು ದಳವನ್ನು ತೆಗೆದುಕೊಂಡು ಅಣ್ಣಾಜಿ ದತ್ತನೆಂಬವನು ಹುಬ್ಬಳ್ಳಿಗೆ ಹೋಗಿ ಅಲ್ಲಿ ಇಂಗ್ಲೀಷರೂ ಫ್ರೆಂಚರೂ ಡಚ್ಚರೂ ಇಟ್ಟಿದ್ದ ಮಳಿಗೆಗಳನ್ನು ಕೊಳ್ಳೆಹೊಡೆದು ಯಥೇಚ್ಛವಾಗಿ ದ್ರವ್ಯ ವನ್ನು ಸಾಗಿಸಿಕೊಂಡು ಹೋದನು.

ಶಿವಾಜಿಯು ಬಿಜಾಪುರ ಸಂಸ್ಥಾನಕ್ಕೆ ಸೇರಿದ್ದ ಪಶ್ಚಿಮ ರೇವೆಲ್ಲವನ್ನೂ ಸ್ವಾಧೀನಮಾಡಿಕೊಳ್ಳುವ ಸಲುವಾಗಿ ಕಾರವಾರಕ್ಕೆ ಯುದ್ಧದ ಹಡಗುಗಳನ್ನು ಕಳುಹಿಸಿದನು. ಮರಾಟಿಯವರು ಕಾರ ವಾರ, ಅಂಕೋಲ ಎಂಬ ಊರುಗಳನ್ನು ಸೂರೆಗೊಂಡು ಸತಾರಕ್ಕೂ ಫಲಟನಿಗೂ ನಡುವೆ ಬಿಜಾಪುರದವರ ವಶದಲ್ಲಿದ್ದ ದುರ್ಗಗಳನ್ನೆಲ್ಲ ವಶ ಮಾಡಿಕೊಂಡರು. ಬಿದನೂರು ಸಂಸ್ಥಾನದ ರಾಜನಾದ ಶಿವಪ್ಪನಾಯ ಕನು ಶಿವಾಜಿಗೆ ಕಪ್ಪವನ್ನು ಕೊಡಲೊಪ್ಪಿಕೊಂಡನು.

ಈ ರೀತಿಯಾಗಿ ಶಿವಾಜಿ ಒಂದೊಂದು ಗ್ರಾಮವನ್ನಾಗಿ, ಒಂದೊಂದು ದುರ್ಗವನ್ನಾಗಿ, ತೆಗೆದುಕೊಳ್ಳುತ್ತಿರುವುದನ್ನು ನೋಡಿ ಬಿಜಾಪುರ ಸಂಸ್ಥಾನದಿಂದ ಕರೀಮುಖಾನನು ಅವನ ಮೇಲೆ ದಂಡೆತ್ತಿ ಬಂದನು. ಶಿವಾಜಿ ಪ್ರತಾಪರಾಯನಿಗೆ ತಕ್ಕಷ್ಟು ಸೇನೆಯನ್ನು ಕೊಟ್ಟು ಕರೀಮುಖಾನನ ಮೇಲೆ ಕಳುಹಿಸಿದನು. ಕರೀಮುಖಾನನು ಸೋತು, ಶಿವಾಜಿಗೆ ವಿರುದ್ಧವಾಗಿ ಅಸ್ತ್ರಧಾರಣೆ ಮಾಡುವುದಿಲ್ಲವೆಂದು ಆಣೆಯಿಟ್ಟು ಕೊಂಡು, ಬಿಜಾಪುರಕ್ಕೆ ಹಿಂದಿರುಗಿದನು. ಪ್ರತಾಪರಾಯನು ಯುದ್ಧ ವನ್ನು ನಿಲ್ಲಿಸಿ ಕರೀಮುಖಾನನನ್ನು ಬಿಟ್ಟುದಕ್ಕೆ ಶಿವಾಜಿ ಒಪ್ಪಲಿಲ್ಲ. ಅವನೆಣಿಸಿದಂತೆಯೇ ಕರೀಮುಖಾನನು ೧೬೭೪ರಲ್ಲಿ ಮತ್ತೆ ದಂಡೆತ್ತಿ ಬಂದು ಪನ್ಹಾಲದ ಒತ್ತಿನಲ್ಲಿದ್ದ ಸ್ಥಳಗಳನ್ನು ಸೂರೆಗೊಂಡು ಹಾವಳಿ ಮಾಡಿದನು. ಪ್ರತಾಪರಾಯನಿಗೆ ದೂರದೃಷ್ಟಿಯಿಲ್ಲದೆ ಹೋದುದ ರಿಂದ ಬಿಜಾಪುರದ ಸೇನೆ ಮತ್ತೆ ಬರುವ ಹಾಗಾಯಿತೆಂದೂ, ಮೊದಲೇ

ಕರೀಮುಖಾನನಿಗೆ ತಕ್ಕ ಶಾಸ್ತಿಯನ್ನು ಮಾಡಿದ್ದರೆ ಈ ಅನರ್ಥಕ್ಕೆ ಆಸ್ಪದವಾಗುತ್ತಿರಲಿಲ್ಲವೆಂದೂ ಶಿವಾಜಿಯು ಪ್ರತಾಪರಾಯನನ್ನು ಆಕ್ಷೇಪಿಸಿ, ಈಗ ಖಾನನನ್ನು ಹೇಗಾದರೂ ಜಯಿಸಿದ ಹೊರತು ತಾನು ಪ್ರತಾಪರಾಯನ ಮುಖವನ್ನು ನೋಡೆನೆಂದು ಅವನಿಗೆ ಬರೆಯಿಸಿದನು. ರೋಷವೇರಿ ಪ್ರತಾಪರಾಯನು ಕರೀಮುಖಾನನ ಸೇನೆಯ ಮೇಲೆ ಯುದ್ಧಕ್ಕೆ ಹೊರಟನು. ಬಿಜಾಪುರಕ್ಕೂ ವಿರಾಜಿಗೂ ನಡುವೆ ಇದ್ದ ಉಂಬರಾಣಿಯೆಂಬ ಸ್ಥಳದಲ್ಲಿ ಎರಡು ಸೇನೆಗಳಿಗೂ ಕಾಳೆಗವಾಯಿತು. ರಾಯನು ರಣ ಮದೋನ್ಮತ್ತನಾಗಿ ಮೂಲ ಬಲವನ್ನು ಬಿಟ್ಟು ದೂರ ಹೋಗಿ ಶತ್ರುಸೇನೆಯ ನಡುವೆ ನುಗ್ಗಿ ಅನೇಕರನ್ನು ಕೊಂದನು ; ಅವನ ಸಂಗಡವಿದ್ದವರೆಲ್ಲರೂ ಹತವಾಗುತ್ತ ಬಂದರು ; ಆದರೂ ಧೃತಿ ಗೆಡದೆ ಕಡೆಯ ವರೆಗೂ ಯುದ್ಧಮಾಡಿ ಶತ್ರುಗಳ ಕೈಯಿಂದ ಹತ ನಾದನು. ಪ್ರತಾಪರಾಯನ ಮರಣವು ಮಾವಳಿಗಳಿಗೆ ಉತ್ಪಾತ ಶತ ವಾಯಿತು. ಆದರೆ ಅಷ್ಟರೊಳಗೆ ಹಂಸಾಜಿ ಮೋಹಿತೆಯೆಂಬವನು ಐದು ಸಾವಿರ ಮಂದಿ ಸೈನಿಕರೊಡನೆ ಹೋಗಿ ವೈರಿಗಳನ್ನು ಮುತ್ತಿ ದನು. ಅರಿ ಬಲವು ನುಚ್ಚು ನುರಿಯಾಯಿತು. ಕರೀಮುಖಾನನು ಗತ್ಯಂ ತರವನ್ನು ಕಾಣದೆ ಸತ್ತುಳಿದ ಸೈನಿಕರೊಡನೆ ಬಿಜಾಪುರಕ್ಕೆ ಓಡಿ ಹೋದನು. ಮಹಾರಾಷ್ಟ್ರರಿಗೆ ದಿಗ್ವಿಜಯವಾಯಿತು. ಆದರೆ ಆ ದಿಗ್ವಿಜಯಕ್ಕಾಗಿ ಪ್ರತಾಪರಾಯನು ತನ್ನ ತಲೆಯನ್ನು ತೆತ್ತನು. ಶಿವಾಜಿ ಆ ವೀರನ ಮರಣ ವೃತ್ತಾಂತವನ್ನು ಕೇಳಿ, "ಈ ಹೊತ್ತು ನನ್ನ ಭುಜವೇ ಬಿದ್ದುಹೋಯಿತು" ಎಂದನು. ಪ್ರತಾಪರಾಯನ ಮರಣದಿಂದ ವಾಸ್ತವವಾಗಿ ಶಿವಾಜಿಗೆ ಒಂದು ಭುಜವು ಹೋಯಿತು. ಪ್ರತಾಪನು ಸಕಲ ಕಾರ್ಯಗಳಲ್ಲೂ ಮುಂದಾಳಾಗಿದ್ದನು. ಅವ ನಂತಹ ಸುದಕ್ಷ ಸೇನಾಪತಿಗಳು ಶಿವಾಜಿಯ ಸೈನ್ಯದಲ್ಲಿ ಅತಿ ವಿರಳ ರಾಗಿದ್ದರು. ಅಪಜಯದಲ್ಲೂ ಅವನ ಮುಖವು ಬಾಡುತ್ತಿರಲಿಲ್ಲ; ಅವನು ನೈರಾಶ್ಯವನ್ನೂ ಭೀತಿಯನ್ನೂ ಕಂಡವನಲ್ಲ. ಅಂತಹ ಧೀರನು ಮಡಿದುದನ್ನು ಕೇಳಿ, "ನನ್ನ ಒಂದು ಭುಜವು ಬಿದ್ದುಹೋಯಿತು" ಎಂದು ಶಿವಾಜಿ ಹೇಳಿದುದು ಏನೂ ಆಶ್ಚರ್ಯವಲ್ಲ. ಪ್ರತಾಪರಾಯನ

ಮೇಲಣ ಪ್ರೀತಿ ವಿಶ್ವಾಸದಿಂದ ಶಿವಾಜಿ ಅವನ ಮಗಳನ್ನು ತನ್ನ ಚಿಕ್ಕ ಮಗನಾದ ರಾಜಾರಾಮನಿಗೆ ತಂದುಕೊಂಡು ಅವನ ಕುಟುಂಬ ಭರಣಕ್ಕೆ ಬೇಕಾದ ಉಪಪತ್ತಿಯನ್ನು ಕಲ್ಪಿಸಿದನು; ಹಂಸಾಜಿ ಮೋಹಿತೆಯ ಶೌರ್ಯಕ್ಕೆ ಮೆಚ್ಚಿ ಅವನಿಗೆ ಹಂಬೀರರಾಯನೆಂದು ಹೆಸರನ್ನು ಕೊಟ್ಟು ಪ್ರತಾಪರಾಯನ ಸ್ಥಾನದಲ್ಲಿ ಅವನನ್ನು ಮುಖ್ಯ ಸೇನಾಪತಿಯನ್ನಾಗಿಟ್ಟನು. ಈ ಕಾಳಗದಲ್ಲಿ ಶಿವಾಜಿಯು ಸಂತಾಜಿ ಘೋರ್ಪಡೆ, ಧನಾಜಿ ಜಾದವರೆಂಬ ಬೇರೆ ರಣಧೀರರಿಬ್ಬರ ಸಾಹಸವನ್ನು ಮೆಚ್ಚಿ ಉನ್ನತ ಪದವಿಯನ್ನು ಕೊಟ್ಟು ಅವರನ್ನು ಆದರಿಸಿದನು.

ಅವರಂಗಜೇಬನು ಹಿಂದೆ ಮಾಡಿದ ಅಪಮಾನದಿಂದ, ಶಿವಾಜಿಯು ಮನನೊಂದು ಈ ತೆರನಾಗಿ ರೋಷಾವೇಶವನ್ನು ತಾಳಿ—

ರಾಯತನದಲಿ ಬೆರೆತು ರಾಜ್ಯ!
ಶ್ರೀಯು ನೆರೆ ಹೋಗಾಡಿ ಪರರಿಗ ।
ಜೀಯ ಬೆಸಸುವುದೆಂದು ಜೀವಿಸುವವರು ನಾವಲ ॥

ಎಂಬಂತೆ ಪಂತವನ್ನು ಕಟ್ಟಿ, ಕೈಬಿಟ್ಟುಹೋಗಿದ್ದ ನಾಡುಗಳನ್ನೆಲ್ಲ ಮತ್ತೆ ಸ್ವಾಧೀನಕ್ಕೆ ತಂದುಕೊಂಡು ನಾಲ್ಕು ಕಡೆಯಲ್ಲೂ ರಾಜ್ಯವನ್ನು ವಿಸ್ತರಿಸಿದನು. ಅವನ ರಾಜ್ಯವು ಉತ್ತರದಲ್ಲಿ ಸೂರತ್ತಿನ ವರೆಗೂ ದಕ್ಷಿಣದಲ್ಲಿ ಹುಬ್ಬಳ್ಳಿ ಮತ್ತು ಬಿದನೂರಿನ ವರೆಗೂ ಪೂರ್ವದಲ್ಲಿ ಬಿರಾರು, ಬಿಜಾಪುರ, ಗೋಲ್ಕೊಂಡ ಸಂಸ್ಥಾನಗಳ ವರೆಗೂ ಹಬ್ಬಿತು. ತಪತೀ ನದಿಯ ದಕ್ಷಿಣದಲ್ಲಿದ್ದ ಮೊಗಲ ರಾಷ್ಟ್ರಗಳು ಚೌತಾಯಿ ಸರ್ದೇಶಮುಖಿಗಳನ್ನು ತೆರಲೊಪ್ಪಿದುವು. ಗೋಲ್ಕೊಂಡ, ಬಿಜಾಪುರ, ಬಿದನೂರು ಸಂಸ್ಥಾನಗಳು ಕಪ್ಪವನ್ನು ಕಟ್ಟಲೊಡಂಬಟ್ಟುವು. ಇನ್ನು, ಶಿವಾಜಿಗೆ ಶಾಸ್ತ್ರೋಕ್ತವಾಗಿ ಪಟ್ಟಾಭಿಷೇಕ ಮಹೋತ್ಸವವು ನಡೆಯುವುದಕ್ಕೆ ತಕ್ಕ ಪ್ರಯತ್ನಗಳು ಆರಂಭವಾದುವು.

---

## ಹದಿನಾಲ್ಕನೆಯ ಪ್ರಕರಣ

---

### ಶಿವಾಜಿಯ ಪಟ್ಟಾಭಿಷೇಕ ಮಹೋತ್ಸವ.

ಲೌಕಿಕ ಜ್ಞಾನ ವಿಚಕ್ಷಣನೂ ಕರ್ತವ್ಯ ಪರಾಯಣನೂ ಶೂರನೂ ಆದ ಶಿವಾಜಿಯು ಈಶ್ವರಾನುಗ್ರಹದಿಂದ ವಿಶಾಲ ರಾಜ್ಯವನ್ನು ಸಂಸ್ಥಾಪನೆ ಮಾಡಿದನು. ಈಗ ಅವನು ಶಾಸ್ತ್ರೋಕ್ತವಾಗಿ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡು ಕ್ರಮವಾದ ರಾಜ್ಯಾಧಿಕಾರಿಯಾಗ ಬೇಕೆಂದು ಅಭಿಲಾಷೆಪಟ್ಟನು. ಈ ವಿಷಯವಾಗಿ ತಾಯಿಯನ್ನೂ ರಾಮದಾಸ ಸ್ವಾಮಿಯನ್ನೂ ಆಲೋಚನೆ ಕೇಳಿದನು. ಅವರು ಅದಕ್ಕೆ ಅಭಿಮತರಾದರು; ಕುಲದೇವತೆ ಭವಾನಿಯೂ ಅಭಿಮುಖಳಾಗಿದ್ದಳು. ರಾಜ್ಯಾಭಿಷೇಕ ವಿಷಯವಾಗಿ ಆಲೋಚನೆ ನಡೆಯುತ್ತಿರುವ ಸಮಯದಲ್ಲಿ, ದಕ್ಷಿಣ ದೇಶಕ್ಕೆ ಯಾತ್ರಾರ್ಥಿಯಾಗಿ ಬರುತ್ತಿದ್ದ ಕಾಶಿಯ ನಿವಾಸಿಯಾದ ಗಾಗಾಭಟ್ಟನೆಂಬ ಒಬ್ಬ ದೊಡ್ಡ ವಿದ್ವಾಂಸನು ಗೋದಾವರೀ ತೀರದಲ್ಲಿರುವ ಪೈಠನ್ ಎಂಬ ಪಟ್ಟಣದಲ್ಲಿ ಬಂದಿಳಿದನು. ಆ ಬ್ರಾಹ್ಮಣನನ್ನು ರಾಯಗಡಕ್ಕೆ ಬರಮಾಡಿ ಆತನನ್ನು ಮುಂದಿಟ್ಟು ಕೊಂಡು ಸಕಲ ಕಾರ್ಯಗಳನ್ನೂ ನಡೆಯಿಸುವಂತೆ ಶಿವಾಜಿ ಮಂತ್ರಿಗಳಿಗೆ ಆಜ್ಞಾಪಿಸಿದನು.

ಶಿವಾಜಿಗೆ ಆಗ ನಾಲ್ವತ್ತೇಳು ವರ್ಷ ವಯಸ್ಸಾಗಿದ್ದಿತು; ಮೂವರು ಹೆಂಡಿರನ್ನು ಮದುವೆಯಾಗಿದ್ದನು; ಮಕ್ಕಳೂ ಆಗಿದ್ದರು; ಆದರೆ ಅವನಿಗೆ ಉಪನಯನ ಮಾತ್ರ ಆಗಿರಲಿಲ್ಲ. ಅವನು ಉದಯಪುರ ಮಹಾರಾಣರ ವಂಶ ಪರಂಪರೆಯಲ್ಲಿ * ಹುಟ್ಟಿದವನಾದರೂ ಅವನ ಪೂರ್ವಿಕರು ರಾಜಸ್ಥಾನವನ್ನು ಬಿಟ್ಟು ದಕ್ಷಿಣ ದೇಶಕ್ಕೆ ಬಂದ ತರುವಾಯ, ನಾನಾ ಪ್ರಕಾರವಾದ ಅನಿವಾರ್ಯಗಳಿಂದ, ಅವರಿಗೆ ಉಪನಯನ ಸಂಸ್ಕಾರವು ತಪ್ಪಿಹೋಗಿದ್ದಿತು. ಅವನ ತಾತ ಮುತ್ತಾ

---

*** ಶಿವಾಜಿಯು ಉದಯಪುರ ಮಹಾರಾಣರ ವಂಶಾವಳಿಗೆ ಸಂಬಂಧಿಸಿದವನಲ್ಲವೆಂದು ಕೆಲವರು ಪಂಡಿತರು ಹೇಳುವರು.**

ತಂದಿರಿಗೆ ಈ ಕರ್ಮವು ನಡೆಯದೆ ಹೋದ ಕಾರಣದಿಂದ ಗಾಗಾಭಟ್ಟನು ಶಿವಾಜಿಗೆ ಮೊದಲು ವ್ರಾತ್ಯಸ್ತೋಮ ಪ್ರಾಯಶ್ಚಿತ್ತವೂ ಆ ಬಳಿಕ ಯಜ್ಞೋಪವೀತ ಧಾರಣವೂ ತರುವಾಯ ಪಟ್ಟಾಭಿಷೇಕವೂ ನಡೆಯುವ ಹಾಗೆ ವಿಧಾಯಕ ಮಾಡಿದನು. ಅನೇಕ ಸಂಸ್ಥಾನಾಧಿಪತಿಗಳಿಗೂ ಬ್ರಾಹ್ಮಣರಿಗೂ ಲಗ್ನಪತ್ರಿಕೆಗಳನ್ನು ಕಳುಹಿಸಿದರು. ರಾಯಗಡದಲ್ಲಿ ರಾಜ್ಯಾಭಿಷೇಕದ ಸವರಣೆಗಳು ನಡೆಯಲಾರಂಭವಾದುವು.

ರಾಯಗಡವು ಮೊದಲೇ ದುರ್ಗಮವಾದುದು; ಅದರ ಮೇಲೆ ಸೋನದೇವನೆಂಬವನು ಕಟ್ಟಿಸಿದ ಅಲಂಘ್ಯವಾದ ಪ್ರಾಕಾರಗಳಿಂದ ಇನ್ನಷ್ಟು ದುರ್ಗಮವಾಯಿತು. ಆ ದುರ್ಗಕ್ಕೆ ದಾರಿಯೊಂದು, ಬಾಗಿಲುಗಳು ಮೂರು. ಹೊರಗಿನ ಬಾಗಿಲು ಬೆಟ್ಟದ ತುದಿಯಿಂದ ನಾನೂರು ಅಡಿಗಳ ಕೆಳಗಿರುವುದು. ಈ ಬಾಗಿಲಿನಿಂದ ಸ್ವಲ್ಪ ದೂರದಲ್ಲಿ ಇನ್ನೊಂದು ಬಾಗಿಲಿರುವುದು. ಅದರ ಸಮೀಪದಲ್ಲಿ ಬಹು ಕೋಣೆಯುಕ್ತವಾಗಿಯೂ ವಿಚಿತ್ರ ಶಿಲ್ಪ ಕಾರ್ಯದಿಂದಲಂಕೃತವಾಗಿಯೂ ಇರುವ ಎರಡಂತಸ್ತಿನ ಅಟ್ಟಳಿಗಳು ಎರಡಿರುವುವು. ಇಲ್ಲಿಯ ಸಾನು ಭೂಮಿಯಲ್ಲಿ ಒಂದು ಸುಂದರವಾದ ಸರೋವರವಿರುವುದು. ಇನ್ನು ಸ್ವಲ್ಪ ಮುಂದೆ ಹೋದರೆ 'ಬಾಲಾಖಿಲ್ಲ'ವೆಂಬ ಮೇಲಣ ಕೋಟೆ ಕಾಣುವುದು. ಅದಕ್ಕೆ ಹತ್ತಲು ಪ್ರಶಸ್ತವಾಗಿಯೂ ಸುಂದರವಾಗಿಯೂ ಇರುವ ಸೋಪಾನಗಳಿರುವುವು. ದಾರಿಯ ಇಕ್ಕೆಲದಲ್ಲಿಯೂ ಅಲ್ಲಲ್ಲಿ ಧಾನ್ಯಗಳನ್ನು ತುಂಬುವುದಕ್ಕೆ ಕಣಜಗಳನ್ನು ಮಾಡಿರುವರು. ಬಾಲಾಖಿಲ್ಲೆಯೊಳಗೆ ಶಿವಾಜಿಯ ಅರಮನೆ, ಓಲಗದ ಮನೆ, ಅಧಿಕಾರಿಗಳ ಕಾರ್ಯಾಲಯಗಳು ಮೊದಲಾಗಿ ಕುಶಲ ಶಿಲ್ಪಿಗಳು ಕಟ್ಟಿದ ಮುನ್ನೂರು ರಾಜ ಸೌಧಗಳಿರುವುವು. ಅದೂ ಅಲ್ಲದೆ, ಆ ದುರ್ಗದೊಳಗೆ ಎರಡು ಸಾವಿರ ಮಂದಿ ಸೈನಿಕರು ಪಾಳೆಯ ಮಾಡುವುದಕ್ಕೆ ತಕ್ಕ ಸೌಕರ್ಯವೂ ಇರುವುದು. ಪ್ರಧಾನಾಧಿಕಾರಿಗಳು ಉಪ್ಪರಿಗೆಗಳನ್ನು ಕಟ್ಟಿಸಿ ಆ ದುರ್ಗದ ಅಂದವನ್ನು ಹೆಚ್ಚಿಸಿರುವರು. ವಾಪೀ ಕೂಪ ತಟಾಕಗಳಿಂದ ಆ ದುರ್ಗವು ಜಲ ಸಮೃದ್ಧಿಯನ್ನು ಪಡೆದಿರುವುದು. ಶಿವಾಜಿಯ ದುರ್ಗಗಳೊಳಗೆ ಇದು ಸರ್ವೋತ್ತಮವಾದುದು.

ಬೊಂಬಾಯಿ, ಪುಣೆ, ಸತಾರ—ಈ ಪಟ್ಟಣಗಳು ಆ ದುರ್ಗದಿಂದ ಸಮ ದೂರದಲ್ಲಿರುವುವು. ಮೇಲೆ ನಿಂತು ನೋಡಿದರೆ ಒಂದು ಕಡೆ ಸಿಂಹ ಗಡವೂ ಮತ್ತೊಂದು ಕಡೆ ಮಹಾಬಲೇಶ್ವರವೂ ಕಾಣುವುದು. ಸ್ವಭಾವ ಸುರಕ್ಷಿತವಾದ ಆ ದುರ್ಗವು ಶಿವಾಜಿಯ ರಾಜಧಾನಿ ಯಾಯಿತು. ಆ ದುರ್ಗದಲ್ಲೇ ಅವನು ಕ್ರಿ. ಶ. ೧೬೬೪ನೆಯ ವರ್ಷದಲ್ಲಿ ರಾಜನೆಂಬ ಬಿರುದನ್ನು ತಾಳಿ ಟಂಕಸಾಲೆಯನ್ನಿಟ್ಟು ತನ್ನ ಹೆಸರಿಂದ ನಾಣ್ಯಗಳನ್ನು ಹೊಡೆಯಿಸಿದನು; ದೇಶ ದೇಶಾಂತರಕ್ಕೆ ಹೋಗಿ ತಂದ ವಿಜಯ ಲಬ್ಧ ವಸ್ತುಗಳನ್ನೆಲ್ಲ ತಂದು ಅಲ್ಲಿ ರಾಶಿ ಹಾಕಿದನು; ಬಂದ ವಿಪತ್ತುಗಳಲ್ಲೆಲ್ಲ ಅದರ ಆಶ್ರಯವನ್ನು ಹೊಕ್ಕು ರಕ್ಷಿತನಾದನು. ಆ ದುರ್ಗದ ಖ್ಯಾತಿಯು ಸರ್ವಾಂಗ ಸಂಪೂರ್ಣವಾಗುವಂತೆ ಈಗ ಶಿವಾಜಿಯ ಪಟ್ಟಾಭಿಷೇಕ ಮಹೋತ್ಸವವೂ ಅಲ್ಲೇ ಸಂಭ್ರಮದಿಂದ ನಡೆಯಿತು.

ಅಭಿಷೇಕೋತ್ಸವಕ್ಕಾಗಿ ವಿಚಿತ್ರ ಸ್ತಂಭ ರಾಜಿಗಳಿಂದಲೂ ವಿಧ ವಿಧ ಶಿಲ್ಪ ಕಾರ್ಯದಿಂದಲೂ ಅಲಂಕೃತವಾದ ವಿಶಾಲ ಮಂಟಪವೊಂದು ನಿರ್ಮಿತವಾಯಿತು. ಬಂದ ರಾಜರೂ ದೊಡ್ಡ ಮನುಷ್ಯರೂ ಇಳಿವು ದಕ್ಕೆ ಸರ್ವೋಪಕರಣ ಯುಕ್ತವಾದ ಗೃಹಗಳು ಸಿದ್ಧವಾದುವು; ಯಜ್ಞ ಶಾಲೆಗಳೂ ಪಾಕಶಾಲೆಗಳೂ ಏರ್ಪಟ್ಟುವು. ಏಕ ಕಾಲದಲ್ಲಿ ಐವತ್ತು ಸಾವಿರ ಮಂದಿ ಬ್ರಾಹ್ಮಣರ ಸಂತರ್ಪಣೆಗೆ ಸಾಕಾಗುವಂತೆ ಹನ್ನೆರಡು ವಿಶಾಲ ಭೋಜನ ಶಾಲೆಗಳು ಅಣಿಯಾದುವು. ಬೇಕಾದ ಪದಾರ್ಥ ಗಳೆಲ್ಲವೂ ರಾಶಿ ರಾಶಿಯಾಗಿ ಬಂದು ಬಿದ್ದುವು. ಮಹೋತ್ಸವಕ್ಕೆ ಸಂಬಂಧಪಟ್ಟ ಕಾರ್ಯಗಳನ್ನು ವಿಭಾಗಿಸಿ ಒಂದೊಂದು ಕಾರ್ಯಕ್ಕೆ ಒಬ್ಬೊಬ್ಬ ಅಧಿಕಾರಿಯನ್ನೂ ಅವನ ಕೈಯ ಕೆಳಗೆ ಅನೇಕ ಮಂದಿ ಸೇವಕರನ್ನೂ ನೇಮಿಸಿದರು. ಆನಂದ ನಾಮ ಸಂವತ್ಸರದ ಜ್ಯೇಷ್ಠ ಶುದ್ಧ ಚೌತಿಗೆ ಪೂರ್ವವೇ ರಾಯಗಡವು ಜನಮಯವಾಯಿತು.

ಚೌತಿಯ ದಿವಸ ಶಿವಾಜಿಗೆ ಯಜ್ಞೋಪವೀತ ಧಾರಣೆ ಯಾಯಿತು. ಅಂದಿನಿಂದ ಅಭಿಷೇಕೋತ್ಸವವು ಪ್ರಾರಂಭವಾಗಿ ರಾಯ

ಗಡವು ಆನಂದಕ್ಕೆ ಕೇಂದ್ರಸ್ಥಾನವಾಯಿತು. ಅದು ಮೊದಲು ಹಿಂದೂ ಗಳ ದೇವಾಲಯಗಳಲ್ಲೂ ಮುಸಲ್ಮಾನರ ಪ್ರಾರ್ಥನಾ ಮಂದಿರಗಳಲ್ಲೂ ಪಾರ್ಸೀಕರ ಉಪಾಸನಾ ಗೃಹಗಳಲ್ಲೂ ಶಿವಾಜಿಗೆ ಸ್ವಸ್ತಿ ವಾಚನ ವಾಗಲಾರಂಭವಾಯಿತು. ಪಟ್ಟಬಂಧ ಮಹೋತ್ಸವವು ತೀರುವ ವರೆಗೂ ಬ್ರಾಹ್ಮಣರು ಒಂದು ಕಡೆ ಯಜ್ಞಶಾಲೆಯಲ್ಲಿ ಹವ್ಯವಾಹನ ನಿಗೆ ಆಹುತಿಯನ್ನು ಕೊಡುತ್ತಿರುವರು, ಒಂದು ಕಡೆ ಏಕಾಗ್ರ ಚಿತ್ತ ರಾಗಿ ಜಪವನ್ನು ಮಾಡುತ್ತಿರುವರು, ಒಂದೆಡೆಯಲ್ಲಿ ಪತ್ರ ಪುಷ್ಪ ಫಲಾದಿಗಳಿಂದ ದೇವತಾ ಪೂಜೆಯನ್ನು ಮಾಡುತ್ತಿರುವರು, ಒಂದೆಡೆ ಯಲ್ಲಿ ಸಮ ಸ್ವರದಿಂದ ಸುಮಧುರ ಸಾಮಗಾನವನ್ನು ಮಾಡು ತ್ತಿರುವರು, ಇನ್ನೊಂದೆಡೆಯಲ್ಲಿ ಜಿಗೀಷು ಪಂಡಿತರು ನ್ಯಾಯ ವೇದಾಂತ ಮೀಮಾಂಸಾದಿ ದರ್ಶನಗಳ ವಾಕ್ಯಾರ್ಥಮಾಡುತ್ತಿರುವರು, ಬೇರೊಂದು ಕಡೆಯಲ್ಲಿ ನಾಟ್ಯವೂ ಇಂದ್ರಜಾಲವೂ ಜಟ್ಟಿಗಳ ಕಾಳೆಗವೂ ಮೃಗಗಳ ಕಾಳೆಗವೂ ಪರ್ಯಾಯ ಕ್ರಮವಾಗಿ ಅನುದಿನವೂ ನಡೆಯು ತ್ತಿರುವುದು. ಪ್ರತಿ ದಿವಸವೂ ಐವತ್ತು ಸಾವಿರ ಮಂದಿ ಬ್ರಾಹ್ಮಣರಿಗೆ ಭೂರಿ ಭೋಜನಗಳಾಗುತ್ತಿದ್ದುವು. ಆ ಮಹೋತ್ಸವವನ್ನು ನೋಡ ಬೇಕೆಂಬ ತವಕದಿಂದ ಬಂದಿದ್ದ ನಾನಾ ಜಾತಿಯ ಬಡಬಗ್ಗರಿಗೂ ಪುಷ್ಕಳ ಭೋಜನವಾಗುತ್ತಿದ್ದಿತು. ಷಷ್ಠಿಯಿಂದ ಶಿವಾಜಿ ಋತ್ವಿಜ ರೊಡಗೂಡಿ ಅಭಿಷೇಕಕ್ಕೆ ಪೂರ್ವವರ್ತಿ ಕಾರ್ಯಗಳನ್ನು ಮಾಡತೊಡಗಿ ದನು. ಅಭಿಷೇಕೋತ್ಸವದ ಅಂಗಗಳಾದ ಶಾಂತಿಗಳೆಲ್ಲವೂ ಯಥಾ ಕ್ರಮವಾಗಿ ಸಮಾಪ್ತವಾದುವು. ಎಲ್ಲರೂ ಔತ್ಸುಕ್ಯದಿಂದ ಎದುರು ನೋಡುತ್ತಿದ್ದ ತ್ರಯೋದಶಿ ಮೆಲ್ಲ ಮೆಲ್ಲಗೆ ಬಂದೊದಗಿತು. ಪಟ್ಟಾಭಿ ಷೇಕ ಮಹೋತ್ಸವಕ್ಕೆ ಗೊತ್ತಾಗಿದ್ದ ಶುಭ ದಿವಸವು ಅದೇ. ಆ ಶುಭ ದಿವಸದಲ್ಲಿ ರಾಯಗಡವು ಸೊಗಸೇರಿತು, ಸಿಂಹಾಸನ ಮಂಟಪವು ಮಹಾಜನರಿಂದ ನಿಬಿಡೀಕೃತವಾಯಿತು; ದಿಙ್ಮಂಡಲವು ಮಂಗಳ ಧ್ವನಿಯಿಂದ ಪರಿಪೂರಿತವಾಯಿತು; ಶಿವಾಜಿಯು ರಾಮದಾಸ ಸ್ವಾಮಿ ಯನ್ನೂ ತಾಯಿಯನ್ನೂ ಅಭಿವಂದಿಸಿ ಅವರ ಆಶೀರ್ವಾದವನ್ನು ಕೈಕೊಂಡು ಗಂಗಾದಿ ಪುಣ್ಯ ತೀರ್ಥೋದಕಗಳಿಂದ ಅಭಿಷಿಕ್ತನಾದನು.

ಅನಂತರ, ಶ್ವೇತ ವಸ್ತ್ರ ಭೂಷಣಗಳಿಂದಲಂಕೃತನಾಗಿ ಪುಷ್ಪ ಮಾಲೆಯನ್ನು ಧರಿಸಿ ಸ್ವರ್ಣ ಪೀಠದಲ್ಲಿ ಬಂದು ಕುಳಿತನು. ರಾಜ ಮಹಿಷಿಯಾದ ಸಯಿಬಾಯಿಯೂ ಯುವರಾಜನಾದ ಸಾಂಬಾಜಿಯೂ ವಸ್ತ್ರಾಭರಣ ಭೂಷಿತರಾಗಿ ಪಾರ್ಶ್ವದಲ್ಲಿ ಬಂದು ಕುಳಿತರು. ಋತ್ವಿಜರು, ಅಷ್ಟ ಪ್ರಧಾನಿಗಳು, ಆಸ್ಥಾನದ ಅಧಿಕಾರಿಗಳು, ದೇಶಾಧಿಕಾರಿಗಳು, ನಗರಾಧಿಕಾರಿಗಳು, ಗ್ರಾಮಾಧಿಕಾರಿಗಳು ಮೊದಲಾದವರು ಸಮಯೋಚಿತ ವಸ್ತ್ರ ಭೂಷಣಗಳನ್ನು ಧರಿಸಿ ತಮ್ಮ ತಮ್ಮ ಸ್ಥಾನದಲ್ಲಿ ಕುಳಿತರು. ಕೂಡಲೆ ಅಭಿಷೇಕ ಮಾಡುವುದಕ್ಕೆ, ಮುಖ್ಯ ಪ್ರಧಾನನಾದ ಮೋರೋಪಂತ, ಸೇನಾಪತಿಯಾದ ಹಂಬೀರರಾಯ, ಪಂತ್ ಅಮಾತ್ಯನಾದ ರಾಮಚಂದ್ರ ಪಂತ, ಪಂತ್ ಸಚಿವನಾದ ಅಣ್ಣಾಜಿ ದತ್ತ, ಮಂತ್ರಿಯಾದ ದತ್ತಾಜಿ ಪಂತ, ಸುಮಂತನಾದ ಜನಾರ್ದನ ಪಂತ, ನ್ಯಾಯಶಾಸ್ತ್ರಿಯಾದ ರಘುನಾಥ ಪಂತ, ನ್ಯಾಯಾಧೀಶನಾದ ಬಾಳಾಜಿ ಪಂತ-- ಈ ಅಷ್ಟ ಪ್ರಧಾನರು ಪೂರ್ಣ ಕಲಶಗಳನ್ನೂ ಛತ್ರ ಚಾಮರ ವ್ಯಜನಗಳನ್ನೂ ಹಿಡಿದು ನಿಂತರು. ಸಮ್ಮುಖದಲ್ಲಿ ಪತ್ರ ಲೇಖಕರೂ ಗಣಕರೂ ನಿಂತರು. ಶುಭ ಲಗ್ನದಲ್ಲಿ ಅಭಿಷೇಕವು ಪ್ರಾರಂಭವಾಯಿತು. ಪೂರ್ವ ಸೂಚಿತ ಪ್ರಮುಖರು ವೇದ ಘೋಷ ಪುರಸ್ಸರವಾಗಿ ಅಭಿಷೇಕ ಮಾಡ ತೊಡಗಿದರು. ಭೇರ್ಯಾದಿ ಶುಭ ವಾದ್ಯಗಳು ಮೊಳಗಿದುವು. ಚಿತ್ರ ವಿಚಿತ್ರವಾದ ಪತಾಕಾದಿ ರಾಜ ಚಿಹ್ನೆಗಳು ಮುಗಿಲ ಮುಟ್ಟಿದುವು. ಅಭಿಷೇಕವಾಗುತ್ತಲೆ ಸುಮಂಗಲಿಯರು ರಾಜನಿಗೆ ಆರತಿಯೆತ್ತಿದರು. ಆ ಬಳಿಕ ಶಿವಾಜಿ ಶುಭ್ರ ವಸ್ತ್ರ ಭೂಷಣಗಳನ್ನುಟ್ಟು ತೊಟ್ಟು ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಸುವರ್ಣಮಯ ವಿಷ್ಣುಮೂರ್ತಿಯನ್ನು ಪೂಜಿಸಿ ಮಣಿ ಖಚಿತ ಸಿಂಹಾಸನವನ್ನೇರಿದನು. ದುರ್ಗ ಪ್ರಾಕಾರದಿಂದ ಮೇಲೆ ಮೇಲೆ ಫಿರಂಗಿಯ ಶಬ್ದವಾಯಿತು. ಆ ಶಬ್ದವನ್ನು ಕೇಳುತ್ತಲೆ ರಾಜ್ಯದಲ್ಲಿಯ ದುರ್ಗಗಳಲ್ಲೆಲ್ಲ ಮೇಲೆ ಮೇಲೆ ಗುಂಡನ್ನು ಹಾರಿಸಿದರು. ಈ ರೀತಿಯಾಗಿ ಶಿವಾಜಿಯ ಸಿಂಹಾಸನಾರೋಹಣ ವೃತ್ತಾಂತವು ನಾಡಿನಿಂದ ನಾಡಿಗೆ, ನಗರದಿಂದ ನಗರಕ್ಕೆ, ಗ್ರಾಮದಿಂದ ಗ್ರಾಮಕ್ಕೆ ವಿದ್ಯುದ್ವೇಗದಿಂದ ಹರಡಿತು. ಸಿಂಹಾಸನವನ್ನು ಹತ್ತಿ

ಶಿವಾಜಿಯು ಭವಾನಿ, ತುಳಜಾ ಮೊದಲಾದ ಆಯುಧಗಳನ್ನು ಪೂಜಿಸಿದನು. ಪ್ರಮುಖರಾದವರೆಲ್ಲರೂ ಆ ಸಮಯದಲ್ಲಿ ಶಿವಾಜಿಯ ಮಸ್ತಕದ ಮೇಲೆ ಮುತ್ತು, ರತ್ನ, ಸುವರ್ಣಪುಷ್ಪ ಇತ್ಯಾದಿಗಳನ್ನು ಮಳೆಗರೆದರು; ಹದಿನಾರು ಮಂದಿ ಸುಮಂಗಲಿಯರೂ ಕನ್ಯಕೆಯರೂ ಇನ್ನೊಂದು ಸಾರಿ ಆರತಿಯೆತ್ತಿದರು; ಬ್ರಾಹ್ಮಣರು ವೇದ ಮಂತ್ರೋಚ್ಚಾರಣ ಪೂರ್ವಕವಾಗಿ ಆಶೀರ್ವಾದವನ್ನು ಮಾಡಿದರು. ಆ ಶುಭ ಮುಹೂರ್ತದಲ್ಲಿಯೇ ಶಿವರಾಯನು 'ಕ್ಷತ್ರಿಯ ಕುಲಾವತಂಸ ಶ್ರೀರಾಜ ಶಿವ ಛತ್ರಪತಿ' ಎಂಬ ಬಿರುದಾಂಕಿತನಾದನು. ಬಳಿಕ ದಕ್ಷಿಣೆ ತಾಂಬೂಲಗಳಿಂದ ಪಟ್ಟಾಭಿಷೇಕ ಮಹೋತ್ಸವವು ಪರಿಸಮಾಪ್ತವಾಯಿತು. ತರುವಾಯ, ಶಿವಾಜಿಯು ಈ ಮಹೋತ್ಸವಕ್ಕೆ ಬಂದಿದ್ದ ರಾಜರು, ಮಂಡಲಿಕರು, ಪಂಡಿತರು ಮೊದಲಾದ ಮಾನ್ಯರಿಗೆಲ್ಲ ಯಥೋಚಿತ ಮಾನ ಮರ್ಯಾದೆಗಳನ್ನು ಮಾಡಿ ಕಳುಹಿಸಿಕೊಟ್ಟನು. ಶಿವಾಜಿಯ ಪಟ್ಟಾಭಿಷೇಕೋತ್ಸವವು ಹಿಂದೆ ನಳ ನಹುಷ ಮಾಂಧಾತ ಮೊದಲಾದವರ ಪಟ್ಟಾಭಿಷೇಕವು ಎಷ್ಟು ಸಂಭ್ರಮದಿಂದ ನಡೆಯಿತೊ ಅಷ್ಟು ಸಂಭ್ರಮದಿಂದ ನಡೆಯಿತೆಂದೂ, ಅದಕ್ಕೆ ಒಂದು ಕೋಟಿ ಎಂಬತ್ತು ಲಕ್ಷ ರೂಪಾಯಿ ವೆಚ್ಚವಾಯಿತೆಂದೂ ಮಹಾರಾಷ್ಟ್ರದ ಇತಿಹಾಸ ಲೇಖಕರು ಹೇಳುವರು. ಶಿವಾಜಿಗೆ ಪಟ್ಟವಾದಂದಿನಿಂದ ಶಿವ ಶಕವೆಂಬ ನೂತನ ಶಕವೊಂದು ಸ್ಥಾಪಿತವಾಯಿತು. ಈಗ ಈ ಶಕವು ಶಿವಾಜಿಯ ವಂಶಸ್ಥರಾದ ಕೊಲ್ಹಾಪುರದ ರಾಜ ಕುಟುಂಬದವರಲ್ಲಿ ಸಲ್ಲುತ್ತಿರುವುದು.

ಈ ಸಮಯದಲ್ಲಿ ಬೊಂಬಾಯಿಯಲ್ಲಿದ್ದ ಆಂಗ್ಲೇಯ ವರ್ತಕರು ವಾಣಿಜ್ಯ ವಿಷಯಕವಾದ ಕೆಲವು ಸೌಕರ್ಯಗಳಿಗಾಗಿ ಶಿವಾಜಿಯ ಬಳಿಗೆ ಒಬ್ಬ ದೂತನನ್ನು ಕಳುಹಿಸಿದರು. ಆ ದೂತನ ಹೆಸರು ಸರ್ ಹೆನ್ರಿ ಆಕ್ಸೆಂಡನ್. ಆಗ ಶಿವಾಜಿಗೂ ಇಂಗ್ಲೀಷರಿಗೂ ಇಪ್ಪತ್ತೆನಾಲ್ಕು ಷರತ್ತುಗಳುಳ್ಳ ಒಂದು ಸಂಧಿಪತ್ರವು ಹುಟ್ಟಿತು. ಮರಾಟಿಯವರು ರಾಜಾಪುರವನ್ನು ಹಾಳುಮಾಡಿದುದಕ್ಕಾಗಿ ಶಿವಾಜಿ ಇಂಗ್ಲೀಷರಿಗೆ ನಷ್ಟವನ್ನು ಕಟ್ಟಿಕೊಡಬೇಕು; ರಾಜಾಪುರ, ದಾವೋಲು,

ಚವುಲ, ಕಲ್ಯಾಣ ಎಂಬ ನಗರಗಳಲ್ಲಿ ಅವರು ವ್ಯಾಪಾರದ ಮಳಿಗೆಗಳನ್ನು ಇಟ್ಟುಕೊಳ್ಳಬಹುದು ; ಶಿವಾಜಿಯ ರಾಜ್ಯದಲ್ಲಿ ವ್ಯಾಪಾರವನ್ನು ಮಾಡಬಹುದು ; ಪಣ್ಯ ದ್ರವ್ಯಗಳ ಮೇಲೆ ಅವರು ನೂರಕ್ಕೆ ಎರಡೂವರೆಯಂತೆ ಸುಂಕವನ್ನು ಕೊಡಬೇಕು ; ಸಮುದ್ರದಲ್ಲಿ ಮುರಿದು ಬಂದ ಹಡಗುಗಳು ಆ ರಾಷ್ಟ್ರಾಧಿಪತಿಗೆ ಸೇರಬೇಕು— ಎಂಬೀ ಷರತ್ತುಗಳೇ ಮುಖ್ಯವಾದುವು.

ಪಟ್ಟಾಭಿಷೇಕವು ಸಾಂಗೋಪಾಂಗವಾಗಿ ನಡೆದ ತರುವಾಯ ತುಲಾಭಾರ ಮಹೋತ್ಸವವು ನಡೆಯಿತು. ಶಿವಾಜಿಯು ಸಮ ತೂಕದ ಬಹು ಮೂಲ್ಯ ಸುವರ್ಣವನ್ನೂ ರತ್ನಾದಿಗಳನ್ನೂ ಬ್ರಾಹ್ಮಣರಿಗೂ ಬಡವರಿಗೂ ಹಂಚಿದರು. ಆ ಸಮಯದಲ್ಲೇ ಶಿವಾಜಿ ರಾಯಗಡದಲ್ಲಿ ವಿಖ್ಯಾತವಾದ ಒಂದು ಶಿವಾಲಯವನ್ನು ಕಟ್ಟಿಸಿದನು.

ಅನಂತರ, ಶಿವಾಜಿಯು ಮಹಾರಾಷ್ಟ್ರ ಭಾಷೆಯಲ್ಲಿ ಬೆರೆತಿದ್ದ ಅನ್ಯದೇಶ ಶಬ್ದಗಳನ್ನು ತೆಗೆದುಹಾಕುವ ಉದ್ದೇಶದಿಂದ ರಾಜ ವ್ಯವಹಾರ ಕೋಶವೆಂಬ ನಿಘಂಟನ್ನು ಮಾಡಿಸಿದನು. ಆಗಲೇ ತನ್ನ ಅಷ್ಟ ಪ್ರಧಾನರಿಗೆ ನೂತನ ಸಂಸ್ಕೃತ ನಾಮಗಳನ್ನು ಕೊಟ್ಟನು. ಅದು ಹೇಗೆಂದರೆ :—

| ಅಧಿಕಾರಿಗಳ ಹೆಸರು | ಅಧಿಕಾರದ ಪೂರ್ವದ ಹೆಸರು | ಅಧಿಕಾರದ ಹೊಸ ಹೆಸರು |
|---|---|---|
| ಮೋರೋಪಂತ ಪಿಂಗಳೆ | ಪೇಶ್ವೆ | ಮುಖ್ಯ ಪ್ರಧಾನ |
| ರಾಮಚಂದ್ರ ನೀಲಕಂಠ | ಮೊಜುಮ್‌ದಾರ್ | ಪಂತ್ ಅಮಾತ್ಯ |
| ಅಣ್ಣಾಜಿ ದತ್ತ | ಸುರ್‌ನೀಸ್ | ಪಂತ್ ಸಚಿವ |
| ಹಂಬೀರರಾಯ | ಸುರ್‌ನೌಬತ್ | ಸೇನಾಪತಿ |
| ಜನಾರ್ದನ ಪಂತ ಹನುಮಂತ | ದಬೀರ್ | ಸುಮಂತ |
| ಬಾಲಾಜಿ ಪಂತ | ಅದಾಲತ್ | ನ್ಯಾಯಾಧೀಶ |
| ರಘುನಾಥ ಪಂತ | ನ್ಯಾಯ ಶಾಸ್ತ್ರಿ | ಪಂಡಿತರಾಯ |
| ದತ್ತಾಜಿ ಪಂತ | ವಾಕ್‌ನೀಸ್ | ಮಂತ್ರಿ |

## ಹದಿನೈದನೆಯ ಪ್ರಕರಣ

---

# ಮಾತೃ ವಿಯೋಗ, ಪತ್ನೀ ವಿಯೋಗ; ಕರ್ಣಾಟಕ ದಿಗ್ವಿಜಯ.

ಪಟ್ಟಾಭಿಷೇಕವಾದ ಕೆಲವು ದಿವಸಗಳಲ್ಲಿ ಶಿವಾಜಿಯ ತಾಯಿ ಜೀಜಾಬಾಯಿ ಜ್ವರದಿಂದ ಮಲಗಿದಳು; ತಾನು ಬದುಕುವ ಹಾಗೆ ಇಲ್ಲವೆಂದು ತೋರುತ್ತಲೆ, ಬಹು ಧನವನ್ನು ವೆಚ್ಚಮಾಡಿ ಬ್ರಾಹ್ಮಣರಿಗೆ ದಾನ ಧರ್ಮಗಳನ್ನು ಮಾಡಿದಳು. ಅನಂತರ, ಆ ವೀರ ಮಾತೆಯು ಪುತ್ರ ಪೌತ್ರಾದಿಗಳಿಂದ ಪರಿವೇಷ್ಟಿತಳಾಗಿ ಕಳೇಬರವನ್ನು ತ್ಯಜಿಸಿದಳು. ಶಿವಾಜಿಯು ಯಥೇಚ್ಛವಾಗಿ ದ್ರವ್ಯವನ್ನು ವೆಚ್ಚಮಾಡಿ ತಾಯಿಯ ಉತ್ತರ ಕ್ರಿಯೆಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿ, ಆಕೆಯ ಅಸ್ಥಿಗಳನ್ನು ಪ್ರಯಾಗಕ್ಕೆ ಕಳುಹಿಸಿ ಗಂಗಾ ಯಮುನಾ ಸಂಗಮದಲ್ಲಿ ಬಿಡಿಸಿದನು.

ಶಿವಾಜಿಯು ತಂದೆಯ ಬಳಿಯಲ್ಲಿ ವಿಶೇಷವಾಗಿದ್ದವನಲ್ಲ; ಚಿಕ್ಕಂದಿನಿಂದ ತಾಯಿಯ ಬಳಿಯಲ್ಲೇ ಇದ್ದು ಬೆಳೆದವನು. ಜೀಜಾಬಾಯಿಯು ಧರ್ಮ ಪರಾಯಣೆ, ಬುದ್ಧಿವಂತೆ; ಅವಳು ಮಗನನ್ನು ಶೈಶವದಿಂದ ಶಿಕ್ಷಿಸಿ ಅವನ ಹೃದಯದಲ್ಲಿ ಸದ್ಗುಣ ಬೀಜವನ್ನು ಬಿತ್ತದಿದ್ದರೆ ಅವನು ಅಂತಹ ಶೂರನೂ ಸ್ವದೇಶಾಭಿಮಾನಿಯೂ ಯಶೋವಂತನೂ ಆಗುತ್ತಿದ್ದನೊ ಇಲ್ಲವೊ ಸಂದೇಹ. ಬಾಲ್ಯದಿಂದಲೂ ಅವನು ಪುರಾಣಾದಿ ಸತ್ಕಥನಗಳನ್ನೂ ಪೂರ್ವ ಪುರುಷರು ಸ್ವದೇಶ ರಕ್ಷಣೆಯಲ್ಲಿ ತೋರಿದ ಸ್ವಾರ್ಥ ತ್ಯಾಗಾದಿ ಸದ್ಗುಣಗಳನ್ನೂ ರಣರಂಗದ ಭೀಷಣತೆಯನ್ನೂ ತಾಯಿಯಿಂದ ಅನವರತ ಕೇಳುತ್ತಿದ್ದನು. ಅವನ ಸಾಹಸವೂ ಸ್ವಧರ್ಮ ಪ್ರೇಮವೂ ತಾಯಿ ಮಾಡಿದ ಉಪದೇಶದ ಫಲವೆಂದರೆ ಅತ್ಯುಕ್ತಿಯಲ್ಲ. ಸಕಲ ಕಾರ್ಯಗಳಲ್ಲೂ ಅವನಿಗೆ ಅವಳು ಮಾರ್ಗದರ್ಶಿನಿಯಾಗಿದ್ದಳು. ಶಿವಾಜಿಯು ಮಾತೃ

ಭಕ್ತಿ ಅಪಾರವಾದುದು. ಅವನು ತಾಯಿಯನ್ನು ಕುಲದೇವತೆಯೆಂದು ಶ್ರದ್ಧಾ ಭಕ್ತಿಯಿಂದ ಪೂಜಿಸುತ್ತಿದ್ದನು; ಸಕಲ ರಾಜಕಾರ್ಯಗಳಲ್ಲೂ ತಾಯಿಯ ಆಲೋಚನೆಯನ್ನು ಕೇಳುತ್ತಿದ್ದನು; ಅವನೆಂದಿಗೂ ಜನನಿಯ ಆಜ್ಞೆಯನ್ನು ಮೀರಿ ನಡೆದವನಲ್ಲ. ಹೆತ್ತ ತಾಯಿಯ ಉಪದೇಶ ಬಲದಿಂದ ಮಹಾ ಪುರುಷರಾದವರೊಳಗೆ ಶಿವಾಜಿ ಅಗ್ರಗಣ್ಯನೆಂಬುದರಲ್ಲಿ ಸಂದೇಹವಿಲ್ಲ. ಜೀಜಾಬಾಯಿ ರಾಜಕಾರ್ಯಗಳಲ್ಲಿ ಚತುರೆ; ಶಿವಾಜಿ ದಿಲ್ಲಿಗೆ ಹೋಗಿದ್ದ ಕಾಲದಲ್ಲಿ ವಿವೇಕದಿಂದ ರಾಜಕಾರ್ಯಗಳನ್ನು ನಿರ್ವಹಿಸುತ್ತ, ಉಳಿದ ಹೊತ್ತಿನಲ್ಲಿ ಈಶ್ವರೋಪಾಸನೆಯಲ್ಲಿ ನಿರತಳಾಗಿರುತ್ತಿದ್ದಳು. ಇಂತಹ ಸಕಲ ಗುಣ ಸಂಪನ್ನೆಯಾದ ತಾಯಿಯು ತನ್ನ ಕಾರ್ಯವನ್ನು ಮೆಚ್ಚಿದರೆ, ತಾನು ಧನ್ಯನೆಂದು ಶಿವಾಜಿ ಎಣಿಸುತ್ತಿದ್ದನು.

ವಿಪತ್ತುಗಳು ಒಂಟಿಯಾಗಿ ಬರುವುದು ಅಪೂರ್ವ; ಮಾತೃ ವಿಯೋಗವಾದ ಕೆಲವು ದಿವಸಗಳಿಗೆ ಹೃದಯ ತೋಷಿಣಿಯೂ ಸದುಪದೇಶ ದಾಯಿನಿಯೂ ಸುಖ ದುಃಖಗಳಲ್ಲಿ ಸಮಭಾಗಿನಿಯೂ ಆಗಿ, ಸಂಕಟ ಕಾಲದಲ್ಲಿ ಉತ್ಸಾಹ ಗರ್ಭಿತವಾದ ಮಾತಿನಿಂದ ಪ್ರೋತ್ಸಾಹಗೊಳಿಸುತ್ತ ಸ್ವಾರ್ಥವನ್ನು ಬಿಟ್ಟು ದೇಶ ಹಿತವನ್ನು ಸಾಧಿಸುವ ಹಾಗೆ ಉಪದೇಶಮಾಡುತ್ತ ಇದ್ದ ಶಿವಾಜಿಯ ಸಹಧರ್ಮಿಣಿಯಾದ ಸಯಿಬಾಯಿ ಪರಲೋಕ ಯಾತ್ರೆಯನ್ನು ಮಾಡಿದಳು.

೧೬೭೪ರಲ್ಲಿ ಬಸಯಿ(Bassein)ಯಲ್ಲಿದ್ದ ಪೋರ್ಚುಗೀಸರು ಸುಮ್ಮನಿರದೆ ಕೆಲವು ಹಿಂದೂ ಕುಟುಂಬಗಳನ್ನು ಬಲಾತ್ಕಾರದಿಂದ ಕ್ರೈಸ್ತ ಮತಕ್ಕೆ ಸೇರಿಸಿಕೊಂಡರು. ಅದಕ್ಕೆ ಪ್ರತೀಕಾರವಾಗಿ, ಶಿವಾಜಿಯ ಆಜ್ಞೆಯಂತೆ, ಮೋರೋಪಂತ ಪಿಂಗಳೆ ಅವರ ಮೇಲೆ ಚೌತಾಯಿಯನ್ನು ಹಾಕಿದನು. ಪೋರ್ಚುಗೀಸರು ದಂಡವನ್ನೇನೊ ತೆತ್ತರು; ಆದರೆ ಅವರು ಕೊಟ್ಟ ಹಣಕ್ಕೆ ಚೌತಾಯಿ ಎಂದು ಹೆಸರಿಡಲಿಲ್ಲ.

೧೬೭೫ರಲ್ಲಿ ಶಿವಾಜಿಗೂ ಮೊಗಲರಿಗೂ ಮತ್ತೆ ಕಲಹವಾರಂಭವಾಯಿತು. ಮೊಗಲರು ಹಿಂದೆ ನಡೆದ ಸಂಧಿಗೆ ವಿರೋಧವಾಗಿ ನಡೆದುದರಿಂದ ಮೋರೋಪಂತನು ಖಾನ್‌ದೇಶಕ್ಕೆ ದಂಡೆತ್ತಿ ಹೋಗಿ

ಅಲ್ಲಿಯವರಿಂದ ಔಂಡ, ಪಟ್ಟ ಎಂಬೆರಡು ದುರ್ಗಗಳನ್ನು ಕಿತ್ತು ಕೊಂಡನು. ಶಿವಾಜಿ ತನ್ನ ಜನ್ಮಸ್ಥಾನವಾದ ಶಿವನೇರು ದುರ್ಗವನ್ನು ತೆಗೆದುಕೊಳ್ಳಲು ಇನ್ನೊಂದು ಸಾರಿ ಪ್ರಯತ್ನಮಾಡಿದನು; ಆದರೆ ಅವನ ಪ್ರಯತ್ನವು ನೆರವೇರಲಿಲ್ಲ. ಅವನ ಸೇನಾಪತಿ ಹಂಬೀರ ರಾಯನು ಗುಜರಾತಿಗೆ ದಂಡೆತ್ತಿ ಹೋಗಿ ಮೊಗಲರ ರಾಷ್ಟ್ರವನ್ನು ಕೊಳ್ಳೆಹೊಡೆದು, ಅವನನ್ನು ಬೆನ್ನಹತ್ತಿ ಬಂದ ದಿಲೇರಿಖಾನನ ಸಂಗಡ ಹೆಣಗಾಡಿ, ಯಥೇಚ್ಛವಾಗಿ ಹಣವನ್ನು ಸಾಗಿಸಿಕೊಂಡು ರಾಯ ಗಡಕ್ಕೆ ಹಿಂದಿರುಗಿದನು.

ಶಿವಾಜಿ ಪನ್ಹಾಲ, ತಾತೋರ ಎಂಬ ದುರ್ಗಗಳ ನಡುವೆ ಇದ್ದ ದುರ್ಗಗಳನ್ನು ಪುನಃ ಗೆದ್ದು ಗೋವೆಗೆ ಆಗ್ನೇಯಕ್ಕಿರುವ ಫೊಂಡೆ ಎಂಬ ದುರ್ಗವನ್ನು ಜಯಿಸುವ ಸಲುವಾಗಿ ಕೊಂಕಣಕ್ಕೆ ಹೋದನು. ಒಡನೆಯೇ ಬಿಜಾಪುರ ಸುಲ್ತಾನರ ಆಶ್ರಿತರಾಗಿದ್ದ ಫಲಟನದ ದೇಶ ಮುಖನಾದ ನಿಂಬಾಲಕರನೂ ಮಲವಡಿಯ ದೇಶಮುಖನಾದ ಘಾಟಗೆಯೂ ಪನ್ಹಾಲ, ತಾತೋರ ದುರ್ಗಗಳ ನಡುವೆ ಇದ್ದ ದುರ್ಗ ಗಳನ್ನು ತೆಗೆದುಕೊಂಡು ಬಿಜಾಪುರದ ಸುಲ್ತಾನನ ಕೈಸೇರಿಸಿದರು. ಶಿವಾಜಿ ೧೬೭೬ರಲ್ಲಿ ಮರಳಿ ಆ ದುರ್ಗಗಳನ್ನು ತೆಗೆದುಕೊಂಡು ಇನ್ನು ನಾಲ್ಕು ದುರ್ಗಗಳನ್ನು ಕಟ್ಟಿಸಿ ಬಿಜಾಪುರದ ಸುಲ್ತಾನನ ಆಶ್ರಿತರಾದ ಜಹಗೀರದಾರರು ತನ್ನ ರಾಜ್ಯಕ್ಕೆ ಬಾರದಂತೆ ಕಟ್ಟುಪಾಡು ಮಾಡಿ ದನು. ಈ ರೀತಿಯಾಗಿ ಅವನು ಕೊಂಕಣದಲ್ಲಿ ತೆರಪಿಲ್ಲದವನಾಗಿ ಕಾರ್ಯಮಾಡುತ್ತಿರುವಾಗ ರೋಗ ಪೀಡಿತನಾಗಲು ಸತಾರಕ್ಕೆ ಹೋಗಿ ಒಂದೆರಡು ತಿಂಗಳು ವಿಶ್ರಮಿಸಿಕೊಂಡಿದ್ದು ಗುಣವಾಗುತ್ತಲೆ ಕರ್ಣಾಟಕಕ್ಕೆ ವಿಜಯಾರ್ಥವಾಗಿ ಹೊರಡುವ ಯೋಚನೆ ಮಾಡಿದನು.

ಅವರಂಗಜೇಬನಿಗೆ ದಕ್ಷಿಣದ ಮೇಲೆ ಕಣ್ಣಿದ್ದಿತೆಂಬುದನ್ನು ಶಿವಾಜಿ ಚೆನ್ನಾಗಿ ಬಲ್ಲನು. ಸಮಯ ಸಿಕ್ಕುತ್ತಲೆ ಅವನು ಪ್ರಚಂಡ ಸೇನೆ ಯೊಡನೆ ದಕ್ಷಿಣಕ್ಕೆ ಬಂದಿಳಿಯುವನೆಂದು ಯೋಚಿಸಿ ಶಿವಾಜಿ ಆ ಗಂಡ ವನ್ನು ತೊಲಗಿಸಿಕೊಳ್ಳುವ ಉಪಾಯವನ್ನು ಕುರಿತು ಸರ್ವದಾ ಚಿಂತಿಸುತ್ತಿದ್ದನು. ಅಂತಹ ಕಾಲಕ್ಕೆ ಕರ್ಣಾಟಕ ದ್ರಾವಿಡ ದೇಶ

ಗಳೆರಡನ್ನೂ ಒಂದು ರಾಜ್ಯವನ್ನಾಗಿ ಮಾಡಿ ತನ್ನ ವಶದಲ್ಲಿಟ್ಟುಕೊಂಡಿದ್ದು ಪಕ್ಷದಲ್ಲಿ ಅದರ ಆಶ್ರಯ ಬಲದಿಂದ ಮೊಗಲರನ್ನು ಪ್ರತಿಭಟಿಸಬಹುದೆಂದು ಕರ್ಣಾಟಕ ದಂಡಯಾತ್ರೆ ಹೊರಡಲುದ್ಯುಕ್ತನಾದನು; ತನ್ನ ಇಷ್ಟಾರ್ಥ ಸಿದ್ಧಿಗಾಗಿ ಆ ಕಾಲದ ರಾಜಪುರುಷರ ಶೀಲ ಸ್ವಭಾವಗಳನ್ನರಿತು ಸಮಯೋಚಿತವಾಗಿ ಸಾಮಾದ್ಯುಪಾಯ ಚತುಷ್ಟಯವನ್ನೂ ಪ್ರಯೋಗ ಮಾಡಿದನು.

ಈ ಸಮಯದಲ್ಲಿ ಶಿವಾಜಿಯ ಬಲತಾಯಿಯ ಮಗನಾದ ವೆಂಕೋಜಿಯು ಕರ್ಣಾಟಕದಲ್ಲಿ ಷಾಹಜಿಗಿದ್ದ ಬೆಂಗಳೂರು ಮೊದಲಾದ ಜಹಗೀರುಗಳಿಗೆ ಯಜಮಾನನಾಗಿದ್ದನು. ಷಾಹಜಿ ಬದುಕಿದ್ದ ಕಾಲದಲ್ಲಿಯೇ ತಂಜಾವೂರು ಮಧುರೆಗಳ ರಾಜರು ಷಾಹಜಿಯ ಮೂಲಕ ಬಿಜಾಪುರ ಸಂಸ್ಥಾನಕ್ಕೆ ಅಧೀನರಾಗಿ ಕಪ್ಪವನ್ನು ಕಟ್ಟುತ್ತಿದ್ದರು. ೧೬೬೪ರಲ್ಲಿ ಷಾಹಜಿಯು ತೀರಿಹೋಗುತ್ತಲೆ ವೆಂಕೋಜಿಯು ಯಾಜಮಾನ್ಯವನ್ನು ವಹಿಸಿ, ೧೬೭೪ರಲ್ಲಿ ತಂಜಾವೂರಿನಲ್ಲಿ ಅಂತಃಕಲಹಗಳು ಹುಟ್ಟಲು, ಅಲ್ಲಿಯ ಪ್ರಮುಖರು ಅಪೇಕ್ಷಿಸಿದ ಮೇರೆಗೆ, ತಂಜಾವೂರಿಗೆ ತಾನೇ ಅರಸನಾಗಿ ೧೬೭೫ರಲ್ಲಿ ಬೆಂಗಳೂರನ್ನು ಬಿಟ್ಟು ತಂಜಾವೂರನ್ನು ಅಧಿಷ್ಠಾನವನ್ನಾಗಿ ಮಾಡಿಕೊಂಡು ಅಲ್ಲಿಯೇ ನಿಂತನು. ಅವನ ತಂದೆಯ ಆಪ್ತ ಮಂತ್ರಿಯಾಗಿದ್ದ ನಾರೊ ತಿರುಮಲ ಹನುಮಂತರಾಯನ ಮಗನಾದ ರಘುನಾಥ ನಾರಾಯಣ ಹನುಮಂತನು ಅವನಿಗೆ ಮಂತ್ರಿಯಾಗಿದ್ದನು. ರಘುನಾಥ ನಾರಾಯಣನು ಕಾರ್ಯದಕ್ಷನು, ಯಥಾರ್ಥವಾದಿ. ಅವನು ವೆಂಕೋಜಿಯೊಡನೆ ಸಲುಗೆಯಾಗಿರುತ್ತ ಅವನಲ್ಲಿ ತಪ್ಪುಗಳನ್ನು ಕಂಡಾಗಲೆಲ್ಲ ಬಿಡದೆ ಎತ್ತಿಹಾಕಿ ಮಾತನಾಡುತ್ತಿದ್ದನು. ಅದರಿಂದ ಮಂತ್ರಿಯ ಮೇಲೆ ವೆಂಕೋಜಿಗೆ ಕೋಪವುಂಟಾಯಿತು. ಕಡೆಗೆ ರಘುನಾಥ ನಾರಾಯಣನು ಬೇಸರಗೊಂಡು ತನ್ನ ಮಂತ್ರಿತ್ವವನ್ನು ತ್ಯಜಿಸಿ, ಗೋಲ್ಕೊಂಡಕ್ಕೆ ಹೋಗಿ ಅಲ್ಲಿ ಕೆಲವು ದಿನಗಳಿದ್ದು ಮಂತ್ರಿ ಮಾದನ್ನಪಂತನ ಸ್ನೇಹವನ್ನು ಸಂಪಾದಿಸಿ, ಅಲ್ಲಿಂದ ಸತಾರಕ್ಕೆ ಹೋಗಿ ಕರ್ಣಾಟಕದ ಕಾರ್ಯಸ್ಥಿತಿಯನ್ನು ಶಿವಾಜಿಗೆ ಬಿನ್ನಯಿಸಿ, ಅದನ್ನು ಜಯಿಸುವುದಕ್ಕೆ ಅದು ಸಮಯವೆಂದು ಸೂಚಿಸಿದನು.

ಮೊಗಲರು ತನಗೆ ವಿರೋಧಿಗಳಾಗಿರುವಲ್ಲಿ ತನ್ನ ರಾಜ್ಯವನ್ನು ಬಿಟ್ಟು ದೂರ ದೇಶಕ್ಕೆ ಪ್ರಯಾಣಮಾಡುವುದು ಅಪಾಯಕರವೆಂದೆಣಿಸಿ ಶಿವಾಜಿಯು ಮೊಗಲ ರಾಜ ಪ್ರತಿನಿಧಿಯಾದ ಬಹದೂರ್‌ಖಾನನಿಗೆ, ಕರೆವ ಹಸುವಿಗೆ ಹಿಂಡಿಯನ್ನು ಕೊಟ್ಟಹಾಗೆಂದು ಮನಸ್ಸಿನಲ್ಲಿ ಭಾವಿಸಿ ಕೊಂಡು, ಅಂತರಂಗವಾಗಿ ಲಂಚವನ್ನೂ, ಬಹಿರಂಗವಾಗಿ ಕಪ್ಪವನ್ನೂ ಕೊಟ್ಟು ಅವನನ್ನು ವಶಮಾಡಿಕೊಂಡನು. ಶಿವಾಜಿಯು ಪನ್ಹಾಲ ಮತ್ತು ತಾತೋರ ದುರ್ಗಗಳ ನಡುವೆ ಕಟ್ಟಿಸಿದ ದುರ್ಗಗಳ ದೆಸೆಯಿಂದ ಘಾಟಗೆಯೂ ನಿಂಬಾಲಕರನೂ ಅವನ ರಾಜ್ಯಕ್ಕೆ ಪ್ರವೇಶಮಾಡದಂತೆ ಆಯಿತು. ಸಮುದ್ರ ತೀರದ ಪ್ರಾಂತಕ್ಕೆ ಹಬ್ಸಿಗಳ ಕಾಟವಿಲ್ಲದಿರುವಂತೆ ಸೇನೆಯೊಡನೆ ಅಣ್ಣಾಜಿ ದತ್ತನನ್ನು ನೇಮಿಸಿ, ತಾನಿಲ್ಲದ ವೇಳೆಯಲ್ಲಿ ಮೋರೋಪಂತ ಪಿಂಗಳೆಯನ್ನು ಸರ್ವಾಧಿಕಾರಿಯಾಗಿರತಕ್ಕದೆಂದು ವಿಧಾಯಕ ಮಾಡಿದನು.

ಸ್ವರಾಜ್ಯ ರಕ್ಷಣೆಗಾಗಿ ಬೇಕಾದ ಏರ್ಪಾಡುಗಳೆಲ್ಲವನ್ನೂ ಪೂರಯಿಸಿಕೊಂಡು ಶಿವಾಜಿ ಮಹಾರಾಜನು ೧೬೭೬ನೆಯ ವರ್ಷದ ಅಂತ್ಯದಲ್ಲಿ ಮೂವತ್ತು ಸಾವಿರ ಅಶ್ವಸೇನೆ, ನಾಲ್ವತ್ತು ಸಾವಿರ ಪದಾತಿ—ಇವುಗಳೊಡನೆ ಬಿಜಾಪುರ ಸಂಸ್ಥಾನದ ಮಾರ್ಗವಾಗಿಯೇ ಗೋಲ್ಕೊಂಡ ಸಂಸ್ಥಾನದ ಕಡೆಗೆ ಹೊರಟನು. ಹೊರಡುವುದಕ್ಕೆ ಮುಂಚೆ ಆ ಸಂಸ್ಥಾನದ ಪ್ರಜೆಗಳನ್ನು ಯಾವ ಬಗೆಯಲ್ಲೂ ಕೋಟಲೆ ಗೊಳಿಸಕೂಡದೆಂದೂ, ಬೆಲೆಯನ್ನು ಕೊಡದೆ ತೃಣವನ್ನೂ ತೆಗೆದುಕೊಳ್ಳ ಕೂಡದೆಂದೂ, ಸೈನಿಕರಿಗೆ ಆಜ್ಞೆಮಾಡಿ ಆಜ್ಞೆಯನ್ನುಲ್ಲಂಘಿಸಿದವರು ಕಠಿನ ದಂಡನೆಗೆ ಗುರಿಯಾಗುವರೆಂದು ಪ್ರಕಟನೆ ಮಾಡಿದನು. ಸಸೈನ್ಯ ನಾಗಿ ಶಿವಾಜಿ ಹೈದರಾಬಾದಿನ ಸಮೀಪಕ್ಕೆ ಬರುವ ವೇಳೆಗೆ ಮಾದನ್ನ ಪಂತನೂ ಇತರ ದೊಡ್ಡ ಮನುಷ್ಯರೂ ಮಹಾರಾಜನ ಆಗಮನವನ್ನು ನಿರೀಕ್ಷಿಸುತ್ತಿದ್ದು ಅವನನ್ನು ನಗರಕ್ಕೆ ಕರೆದುಕೊಂಡು ಹೋದರು. ನಗರವು ತೋರಣಾದಿಗಳಿಂದಲಂಕೃತವಾಗಿದ್ದಿತು.

ಶಿವಾಜಿ ಊರೊಳಗೆ ಹೋಗುತ್ತಿರುವ ಸಮಯದಲ್ಲಿ ನಾಲ್ಕು ಕಡೆಯಿಂದಲೂ ಪುಷ್ಪವೃಷ್ಟಿಯಾಯಿತು ; ಪುರಸ್ತ್ರೀಯರು ಆರತಿಯೆತ್ತಿ

ದರು; ವಿಜಯ ವಾದ್ಯದಿಂದ ದಿಙ್ಮಂಡಲವು ಪರಿಪೂರಿತವಾಯಿತು. ಆಬಾಲ ವೃದ್ಧರೂ ಶಿವಾಜಿಯ ದರ್ಶನಾರ್ಥವಾಗಿ ದಾರಿ ದಾರಿಯಲ್ಲೂ, ಗೃಹ ದ್ವಾರಗಳಲ್ಲೂ, ಗವಾಕ್ಷಗಳ ಬಳಿಯಲ್ಲೂ ನೆರದರು. ಶಿವಾಜಿ ದಾರಿಯಲ್ಲಿ ಅರ್ಥ ದಾನವನ್ನೂ ವಸ್ತ್ರ ದಾನವನ್ನೂ ಮಾಡಿ ಬಡವರನ್ನು ತುಷ್ಟಿಗೊಳಿಸಿದನು. ಭಾಗಾನಗರದಲ್ಲಿ(ಹೈದರಾಬಾದಿನಲ್ಲಿ) ಹಾಗೂ ಹೀಗೂ ಒಂದು ತಿಂಗಳಿದ್ದನು. ಆಗ ರಘುನಾಥ ನಾರಾಯಣ ಹನುಮಂತನೂ ಮಾದಣ್ಣಪಂತನೂ ಸೇರಿ ಸುಲ್ತಾನನಿಗೂ ಶಿವಾಜಿಗೂ ಸಖ್ಯವು ದೃಢವಾಗಿ ನಿಲ್ಲುವಂತೆ ಸಂಧಿಯನ್ನು ಮಾಡಿಸಿದರು. ಅದರಿಂದ ಶಿವಾಜಿಯು ಬಿಜಾಪುರ ಸಂಸ್ಥಾನದವರಾಗಲಿ ಮೊಗಲರಾಗಲಿ ಗೋಲ್ಕೊಂಡ ಸಂಸ್ಥಾನದ ಮೇಲೆ ದಂಡೆತ್ತಿ ಬಂದಲ್ಲಿ ಸುಲ್ತಾನನಿಗೆ ಸಹಾಯಮಾಡಲೊಡಂಬಟ್ಟನು; ಸುಲ್ತಾನನು ಹಣವನ್ನೂ ಮದ್ದುಗುಂಡುಗಳನ್ನೂ ಕೊಡಲೊಪ್ಪಿಕೊಂಡನು; ಅಲ್ಲದೆ, ಶಿವಾಜಿಯು ಬಿಜಾಪುರದ ಸುಲ್ತಾನರ ಮೇಲೆಯಾಗಲಿ ದಕ್ಷಿಣದಲ್ಲಿದ್ದ ನಾಯಕರ ಮೇಲೆಯಾಗಲಿ ದಂಡೆತ್ತಿ ಹೋಗುವ ವಿಷಯದಲ್ಲಿ ತನ್ನ ಅಡ್ಡಿಯಿಲ್ಲವೆಂದೂ ಸುಲ್ತಾನನು ಒಪ್ಪಿಕೊಂಡನು.

ಸುಲ್ತಾನನು ಶಿವಾಜಿಯನ್ನೂ ಅವನ ಕಡೆಯ ಅಧಿಕಾರಿಗಳನ್ನೂ ಅವರಿರುವ ವರೆಗೂ ಆದರದಿಂದ ಸತ್ಕರಿಸಿದನು. ಮಾದಣ್ಣಪಂತನು ಶಿವಾಜಿಗೆ ಔತಣವನ್ನು ಮಾಡಲುದ್ದೇಶಿಸಿ, "ತಾವು ಅಸಾಧಾರಣ ಪರಾಕ್ರಮಶಾಲಿಗಳು, ವಿಶಾಲ ರಾಜ್ಯಕ್ಕೊಡೆಯರು; ತಾವು ಬಡವನ ಮನೆಗೊಂದು ಹೊತ್ತು ದಯಮಾಡಿ ಗಂಗೋದಕವನ್ನು ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು. ಶಿವಾಜಿ ಮಂದಸ್ಮಿತನಾಗಿ, "ನೀವು ಬ್ರಾಹ್ಮಣರು, ವರ್ಣ ಶ್ರೇಷ್ಠರು, ನಿಮ್ಮ ಸೇವೆಯೇ ನನ್ನುದ್ದೇಶವು, ನಿಮ್ಮ ಪವಿತ್ರ ಗೃಹದಲ್ಲಿ ಭೋಜನಮಾಡುವುದಕ್ಕಿಂತ ಅತಿಶಯವಾದ ಭಾಗ್ಯವೇನಿದೆ? ನಿಮಗೇಕೆ ಇಷ್ಟು ಸಂಕೋಚ" ಎಂದು ಮಾದಣ್ಣಪಂತನ ಮನೆಗೆ ಊಟಕ್ಕೆ ಹೋದನು. ಹೊರಡುವಾಗ ಮನೆಯವರೆಲ್ಲರನ್ನೂ ಮಾತಾಡಿಸಿ ಎಲ್ಲರಿಗೂ ಉಡುಗೊರೆಗಳನ್ನು ಕೊಟ್ಟನು.

ಅವನು ಭಾಗಾನಗರಕ್ಕೆ ಹೋಗಿದ್ದಾಗ ಕೇಶವಸ್ವಾಮಿ ಯೆಂಬೊಬ್ಬ ಮಹಾತ್ಮನು ಅಲ್ಲಿದ್ದನು. ಶಿವಾಜಿ ಆ ಸಾಧುವಿನ ಬಳಿಗೆ ಹೋಗಿ ಭಗವನ್ನಾಮ ಸಂಕೀರ್ತನಾದಿಗಳನ್ನು ಶ್ರವಣಮಾಡಿ, ಧರ್ಮ ಪ್ರಚಾರ ಕಾರ್ಯವನ್ನು ಪ್ರೋತ್ಸಾಹಗೊಳಿಸುವ ನಿಮಿತ್ತವಾಗಿ ಅವನಿಗೆ ಯಥೇಚ್ಛವಾಗಿ ದ್ರವ್ಯ ಸಹಾಯ ಮಾಡಿದನು.

ಶಿವಾಜಿ ಭಾಗಾನಗರದಲ್ಲಿ ಒಂದು ತಿಂಗಳಿದ್ದು ಪ್ರಹ್ಲಾದ ಪಂತ ನನ್ನು ದೂತನನ್ನಾಗಿ ಅಲ್ಲಿಟ್ಟು ಸೇನಾ ಸಮೇತನಾಗಿ ದಕ್ಷಿಣದ ಕಡೆಗೆ ಹೊರಟನು; ಹೋಗುತ್ತ, ತುಂಗಭದ್ರಾ ತೀರದಲ್ಲಿರುವ ಕರ್ನೂಲು, ಕಡಪೆ ಮೊದಲಾದ ಪ್ರದೇಶಗಳಲ್ಲಿ ಚೌತಾಯಿಯನ್ನೆತ್ತಿ, ನಿವೃತ್ತಿ ಸಂಗಮದಲ್ಲಿ ಸ್ನಾನಮಾಡಿಕೊಂಡು, ಅಲ್ಲಲ್ಲಿ ತಂಗಿ ಬರುವ ಹಾಗೆ ಹೇಳಿ ಅನಂತಪುರದಲ್ಲಿ ಸೇನೆಯನ್ನು ಬಿಟ್ಟು, ಕೆಲವು ಮಂದಿ ಅಧಿಕಾರಿಗಳನ್ನು ಕರೆದುಕೊಂಡು ಶ್ರೀಶೈಲ ಮಲ್ಲಿಕಾರ್ಜುನಕ್ಕೆ ಹೋದನು. ಆ ಕ್ಷೇತ್ರದ ರಮಣೀಯತೆಯನ್ನೂ ಪವಿತ್ರತೆಯನ್ನೂ ನಿರ್ಜನತೆಯನ್ನೂ ನೋಡು ತ್ತಲೆ ಅವನಿಗೆ ರಾಜಕಾರ್ಯಗಳಲ್ಲಿ ವಿರಕ್ತಿ ಹುಟ್ಟಿತು. ಒಡನೆಯೇ ಅವನು ತನ್ನ ಮುಖ್ಯಾಧಿಕಾರಿಗಳನ್ನು ಕರೆದು, "ನಾನು ಕಾರ್ಯ ಕ್ಷೇತ್ರವನ್ನು ಪ್ರವೇಶಮಾಡಿದಂದಿನಿಂದ ನಿಮ್ಮೆಲ್ಲರ ಅಧ್ಯವಸಾಯ, ಕಷ್ಟ ಸಹಿಷ್ಣುತೆ, ಕಾರ್ಯ ತತ್ಪರತೆ, ಸ್ವಾಮಿಭಕ್ತಿ, ಇತ್ಯಾದಿ ಗುಣಗಳ ಪ್ರಭಾವದಿಂದ ಈ ವಿಶಾಲ ರಾಜ್ಯವನ್ನು ಸ್ಥಾಪಿಸಿದೆನು; ಸಾಧ್ಯವಾದ ಮಟ್ಟಿಗೂ ಕರ್ತವ್ಯ ಕರ್ಮಗಳನ್ನು ಮಾಡಲು ಯತ್ನಿಸಿದೆನು. ಈಗ ನೀವೆಲ್ಲರೂ ನನಗೆ ಕಾರ್ಯಕ್ಷೇತ್ರದಿಂದ ನರಿಯಲು ಅಪ್ಪಣೆ ಕೊಡಿರಿ. ಮುಂದೆ ನನ್ನ ಆಯುಸ್ಸನ್ನು ದೇವರ ಸೇವೆಗೆ ಅರ್ಪಿಸು ವೆನು. ಸಾಂಬಾಜಿ ರಾಜಾರಾಮರಿಬ್ಬರೂ ನಿಮ್ಮ ಅವಧಾನದಲ್ಲಿರಲಿ. ಇವರನ್ನಿಟ್ಟುಕೊಂಡು ನೀವು ರಾಜ್ಯ ಪರಿಪಾಲನೆ, ಗೋ ಬ್ರಾಹ್ಮಣ ರಕ್ಷಣೆ, ವರ್ಣಾಶ್ರಮ ಧರ್ಮ ರಕ್ಷಣೆ, ಪ್ರಾಣಕ್ಕಿಂತ ಪ್ರಿಯವಾದ ಜನ್ಮಭೂಮಿ ರಕ್ಷಣೆ, ಎಂಬೀ ಕಾರ್ಯಗಳನ್ನು ಮಾಡಿರಿ" ಎಂದು ಬುದ್ಧಿ ವಾದವನ್ನು ಹೇಳಿದನು. ರಘುನಾಥ ನಾರಾಯಣರಾಯ ಮೊದಲಾದ ಅಧಿಕಾರಿಗಳು ದುಃಖಿತರಾಗಿ ಈ ಭಾವವನ್ನು ಬಿಡಬೇಕೆಂದು ಅವನನ್ನು

ವಿನಯದಿಂದ ಬೇಡಿಕೊಂಡರು. ಆದರೆ ಶಿವಾಜಿ ದೃಢ ಹೃದಯನು, ಮಾಡಿದ ಸಂಕಲ್ಪವನ್ನು ಸುಲಭವಾಗಿ ಬಿಡುವನಲ್ಲ; ಭಕ್ತಿ ರಸಾಧಿಕ್ಯ ದಿಂದ ಕಡೆಗೆ ತನ್ನ ತಲೆಯನ್ನು ಕಳಚಿ ಕಾಳಿಗೆ ಅರ್ಪಿಸಲು ಮನಸ್ಸು ಮಾಡಿದನು. ಆ ಸಂಕಟ ಕಾಲದಲ್ಲಿ, ''ಮೋಕ್ಷ ಸಾಧನೆಗಿದು ಸಮಯವಲ್ಲ; ನಿನ್ನಿಂದಾಗತಕ್ಕ ಕಾರ್ಯಗಳು ಇನ್ನೂ ಅನೇಕವಾಗಿವೆ; ದೇಶ ಹಿತ ಸಾಧನೆಯೇ ಪ್ರಧಾನ ಧರ್ಮವು. ಯಾವ ಮಹಾ ಪುರುಷನು ಈ ಧರ್ಮವನ್ನು ಪರಿಪಾಲಿಸುವನೋ ಅವನೇ ಧಾರ್ಮಿಕನು'' ಎಂದು ಭವಾನಿ ಹೇಳಿದ ಮೇಲೆ ತನ್ನ ಪೂರ್ವ ಸಂಕಲ್ಪವನ್ನು ಬಿಟ್ಟು ಮತ್ತೆ ರಾಜಕಾರ್ಯ ತತ್ಪರನಾದನೆಂದು ಬಖರ್‌ಗಳಲ್ಲಿ ಹೇಳಿರುವುದು. ಶಿವಾಜಿ ಶ್ರೀಶೈಲದಲ್ಲಿ ಹನ್ನೆರಡು ದಿವಸಗಳಿದ್ದು, ಲಕ್ಷ ಬ್ರಾಹ್ಮಣ ಸಂತರ್ಪಣೆ ಯನ್ನು ಮಾಡಿಸಿ, ಸಾಧು ಸಂನ್ಯಾಸಿಗಳಿಗೂ ಇತರ ಅಭ್ಯಾಗತರಿಗೂ ಉಪಯೋಗವಾಗುವಂತೆ ಕೃಷ್ಣಾ ತೀರದಲ್ಲಿ ಸ್ನಾನಘಟ್ಟಗಳನ್ನೂ ಧರ್ಮ ಶಾಲೆಗಳನ್ನೂ ಕಟ್ಟಿಸುವ ಸಲುವಾಗಿ ಹಣವನ್ನು ಕೊಟ್ಟನು.

ಅಲ್ಲಿಂದ ಮುಂದಕ್ಕೆ ಚೆನ್ನಪಟ್ಟಣದ (ಮದರಾಸಿನ) ಮಾರ್ಗವಾಗಿ ಹೊರಟು ೧೬೭೭ನೆಯ ಮೇ ತಿಂಗಳಲ್ಲಿ ಚಂಗಿ(Ginjee)ದುರ್ಗದ ಬಳಿಗೆ ಬಂದು ದುರ್ಗಾಧಿಕಾರಿಗಳಾದ ರೂಪಖಾನನ್ನೂ ನಾಜಿರ್ ಮಹಮ್ಮದನನ್ನೂ ಜಯಿಸಿ, ಆ ದುರ್ಗಕ್ಕೂ ಅದರೊತ್ತಿನ ನಾಡಿಗೂ ತನ್ನ ಕಡೆಯ ಅಧಿಕಾರಿಗಳನ್ನು ನೇಮಿಸಿ ಆ ಪ್ರಾಂತದಲ್ಲಿ ಮಹಾ ರಾಷ್ಟ್ರ ದೇಶದ ರಾಜ್ಯಭಾರ ಕ್ರಮವನ್ನೇ ಇಟ್ಟು ಮುಂದಕ್ಕೆ ಹೊರಟನು. ತಿರುವಣ್ಣಾಮಲೆಯ ದಾರಿಯಲ್ಲಿ ಬಿಜಾಪುರ ಸಂಸ್ಥಾನದ ಕಡೆಯ ಅಧಿಕಾರಿಯಾದ ಷೇರ್‌ಖಾನನೆಂಬವನು ದಂಡಿನೊಡನೆ ಬಂದು ಶಿವಾಜಿಯನ್ನು ಅಡ್ಡಗಟ್ಟಿದನು. ಶಿವಾಜಿ ಷೇರ್‌ಖಾನನನ್ನು ತಿರುವಡಿ ಮಹಲೆಂಬ ಸ್ಥಳದಲ್ಲಿ ಸೋಲಿಸಿ ಕಳುಹಿಸಿದನು. ಹಿಂದಿರುಗಿ ಹೋಗುವ ಕಾಲದಲ್ಲಿ ಶಿವಾಜಿ ಹತ್ತು ಸಾವಿರ ಮಂದಿ ಸೈನಿಕ ರನ್ನು ಕೊಟ್ಟು ವೇಲೂರನ್ನು ಹಿಡಿವುದಕ್ಕೆ ನರಹರಿ ಬಲ್ಲಾಳನೆಂಬ ಬ್ರಾಹ್ಮಣ ವೀರನನ್ನು ಕಳುಹಿಸಿದನು. ಆ ವೀರನು ವೇಲೂರನ್ನು ಸಾಧಿಸಿದನು.

ವೇಲೂರೊಳಗೆ ಯುದ್ಧ ನಡೆಯುತ್ತಿರಲು, ತಂಜಾವೂರಿನಿಂದ ವೆಂಕೋಜಿಯು ಶಿವಾಜಿಯನ್ನು ನೋಡುವುದಕ್ಕೆ ತಿರುವಡಿಗೆ ಬಂದನು. ಒಂದು ದಿನ ಶಿವಾಜಿ ವೆಂಕೋಜಿಯನ್ನು ಕುರಿತು, "ಮಹಾರಾಜರು ಕಾಲಗತಿಯನ್ನು ಹೊಂದಿ ಸುಮಾರು ಹದಿಮೂರು ವರ್ಷಗಳಾದುವು. ಈ ದೀರ್ಘ ಕಾಲದಲ್ಲೆಲ್ಲ ಅವರು ಸಂಪಾದಿಸಿದ ಆಸ್ತಿಯನ್ನೆಲ್ಲವನ್ನೂ ನೀವೊಬ್ಬರೇ ಅನುಭವಿಸುತ್ತಿದ್ದೀರಿ. ನಾನು ದೂರ ದೇಶದಲ್ಲಿದ್ದುದರಿಂದಲೂ, ನೀವು ಅಚ್ಚುಕಟ್ಟಾಗಿ ರಾಜ್ಯಕಾರ್ಯಗಳನ್ನು ಮಾಡುತ್ತಿದ್ದುದರಿಂದಲೂ, ನಾನು ಪಿತ್ರಾರ್ಜಿತವಾದ ಸೊತ್ತನ್ನು ಕುರಿತು ಯೋಚಿಸುವುದಕ್ಕೆ ಕಾರಣವಿರಲಿಲ್ಲ. ಪಿತ್ರಾರ್ಜಿತವನ್ನು ವೃದ್ಧಿಗೊಳಿಸುವುದು ಮಕ್ಕಳ ಕರ್ತವ್ಯವು. ತಂದೆಯ ಸಂಪಾದನೆ ಎಷ್ಟೇ ಸಾಮಾನ್ಯವಾದರೂ ಮಕ್ಕಳು ಅದನ್ನು ಗೌರವಿಸಬೇಕು; ನನ್ನ ಪಾಲನ್ನು ನನಗೆ ಕೊಡುವುದು ನ್ಯಾಯವಲ್ಲವೆ!" ಎಂದನು. ಅದಕ್ಕೆ ವೆಂಕೋಜಿ ಯಾವ ಮಾತನ್ನೂ ಆಡದೆ ಸುಮ್ಮನಿದ್ದು ಆ ದಿನದ ರಾತ್ರಿ ಹೇಳದೆ ಕೇಳದೆ ತಂಜಾವೂರಿಗೆ ಓಡಿಹೋದನು. ಮಾರನೆಯ ದಿವಸ ಶಿವಾಜಿ ಅವನನ್ನು ಹುಡುಕುವುದಕ್ಕೆ ರಾವುತರನ್ನು ಕಳುಹಿಸಿದನು; ಅವನು ಸಿಕ್ಕಲಿಲ್ಲ. ರಾವುತರು ವೆಂಕೋಜಿಯ ಕಡೆಯ ಕೆಲವು ಮಂದಿ ಅಧಿಕಾರಿಗಳನ್ನು ಕರೆತಂದರು. ಶಿವಾಜಿ ಅವರನ್ನು ಕುರಿತು, "ಶ್ರೀಮಂತನು ವಯಸ್ಸಿನಲ್ಲಿ ಮಾತ್ರವೇ ಅಲ್ಲ, ಬುದ್ಧಿಯಲ್ಲೂ ಕನಿಷ್ಠನು. ನಾನು ಧನ ಲೋಭದಿಂದ ನಮ್ಮ ಹಿರಿಯರ ಆಸ್ತಿಯಲ್ಲಿ ಪಾಲನ್ನು ಕೇಳುವನಲ್ಲ. ಪೈತೃಕ ಸಂಪತ್ತಿಯಿಲ್ಲದ ಸಸಾಗರ ಮೇದಿನಿಯ ಆಧಿಪತ್ಯವೂ ಭಾಗ್ಯವೆನ್ನಲಾರೆನು. ಪಿತ್ರಾರ್ಜಿತವನ್ನು ಅಪೇಕ್ಷಿಸದ ನಿರ್ಭಾಗ್ಯನು ಯಾವನು? ಹಾಗೆಂದು ನಾನು ಕ್ರೋಧದಿಂದ ತಮ್ಮನ ಮೇಲೆ ಕತ್ತಿಯನ್ನು ಪ್ರಯೋಗಿಸಿ ನನ್ನ ಪಾಲನ್ನು ಸಾಧಿಸುವನಲ್ಲ. ನಾನು ಕನಸಿನಲ್ಲೂ ಹಾಗೆಣಿಸೆನು. ನನ್ನ ಖಡ್ಗವು ಗೋ ಬ್ರಾಹ್ಮಣ ರಕ್ಷಣೆ, ವರ್ಣಾಶ್ರಮ ಧರ್ಮ ಪಾಲನೆಗಳಿಗೆ ಹೊರತು ಬೇರೆ ಯಾವುದಕ್ಕೂ ಅಲ್ಲ. ಪಿತ್ರಾರ್ಜಿತವು ಪಾವನವಾದುದೆಂದೆಣಿಸಿ ನನ್ನ ಭಾಗವನ್ನು ಕೇಳುತ್ತೇನೆ. ಈ ಸಂಗತಿಯನ್ನು

ನನ್ನ ತಮ್ಮಂದಿರಿಗೆ ತಿಳಿಸಿರಿ'' ಎಂದು ಹೇಳಿ ಅವರಿಗೆ ವಸ್ತ್ರಾದಿಗಳನ್ನು ಕೊಟ್ಟು ಮರ್ಯಾದೆ ಮಾಡಿ ಕಳುಹಿಸಿದನು. ಆದರೆ ವೆಂಕೋಜಿಯು ಶಿವಾಜಿಗೆ ಪಾಲನ್ನು ಕೊಡಲು ಇಷ್ಟಪಡದೆ ಬಿಜಾಪುರ ಸಂಸ್ಥಾನದವರ ಸಹಾಯವನ್ನು ಕೋರಿದನು. ಅವರು ಶಿವಾಜಿಯ ಸಂಗಡ ವಿರೋಧವನ್ನು ಕಟ್ಟಿಕೊಳ್ಳಲಂಜಿ, ಅವನು ಕೇಳಿದುದೆಲ್ಲವನ್ನೂ ಸದ್ದು ಮಾಡದೆ ಕೊಟ್ಟುಬಿಡುವಂತೆ ವೆಂಕೋಜಿಗೆ ಬರೆದು ಕಳುಹಿಸಿದರು. ಆ ಉತ್ತರವು ಅವನಿಗೆ ರುಚಿಸಲಿಲ್ಲ. ದಂಡೋಪಾಯದಿಂದ ಪಿತ್ರಾರ್ಜಿತವೆಲ್ಲವನ್ನೂ ದಕ್ಕಿಸಿಕೊಳ್ಳುವ ಯೋಚನೆ ಮಾಡಿ, ತಂಜಾವೂರ ಬಳಿ ಸೇನಾ ಸಮೇತನಾಗಿ ಪಾಳೆಯ ಮಾಡಿದ್ದ ಹಂಬೀರರಾಯನ ಮೇಲೆ ಯುದ್ಧಮಾಡಿ ಸೋತನು. ಅವನ ಭಟರನೇಕರು ಮಡಿದರು, ಉಳಿದವರು ಊರಿಗೋಡಿದರು.

ಶಿವಾಜಿ ತಿರುವಡಿಯಿಂದ ವೇಲೂರಿಗೆ ಹೋದನು. ಆ ವೇಳೆಗೆ ವೇಲೂರು ನರಪತಿ ಬಲ್ಲಾಳನ ವಶವಾಗಿದ್ದಿತು. ಅನಂತರ ಕರ್ಣಾಟಕಗಡ, ಮಹಾರಾಜಗಡ ಎಂಬ ದುರ್ಗಗಳೂ ಮಹಾರಾಷ್ಟ್ರರ ಕೈಗೆ ಬಂದುವು. ವೇದೋಭಾಸ್ಕರನೆಂಬ ಬ್ರಾಹ್ಮಣನು ತನ್ನ ವಶದಲ್ಲಿದ್ದ ಆರಣಿ ಕೋಟೆಯ ಬೀಗದ ಕೈಗಳನ್ನು ಶಿವಾಜಿಗೆ ತಂದೊಪ್ಪಿಸಿದನು. ಮಹಾರಾಜನು ಅವನನ್ನು ಆರಣಿಗೆ ಅಧಿಕಾರಿಯನ್ನಾಗಿ ನಿಲ್ಲಿಸಿ ಅವನ ಮಕ್ಕಳಿಗೆ ತಕ್ಕ ಉದ್ಯೋಗಗಳನ್ನು ಕೊಟ್ಟನು. ಬೆಂಗಳೂರು, ಕೋಲಾರ, ಬಳ್ಳಾಪುರ, ಹೊಸಕೋಟೆ, ಸೀರ್ಕ—ಈ ಜಹಗೀರುಗಳೂ ಶಿವಾಜಿಯ ಹಸ್ತಗತವಾದುವು.

ಈ ನಡುವೆ ಷಾಹಜಿಯ ಉಪಪತ್ನಿಯ ಮಗನಾದ ಸಂತೋಜಿಯು ಶಿವಾಜಿಯನ್ನು ನೋಡುವುದಕ್ಕೆ ಹೋಗಲು, ಶಿವಾಜಿ ಅವನನ್ನು ಆದರದಿಂದ ಕಂಡು ಒಂದು ಸಾವಿರ ಕುದುರೆಗೆ ನಾಯಕನನ್ನಾಗಿಟ್ಟು ವೇಲೂರು ದುರ್ಗಕ್ಕೂ ಅದಕ್ಕೆ ಸೇರಿದ ನಾಡಿಗೂ ಅಧಿಕಾರಿಯನ್ನಾಗಿ ನೇಮಿಸಿದನು. ಆ ಬಳಿಕ ಕರ್ಣಾಟಕದಲ್ಲಿ ಗೆದ್ದ ಪ್ರದೇಶಗಳ ಕಾರ್ಯನಿರ್ವಾಹಕ್ಕೆ ರಘುನಾಥ ನಾರಾಯಣರಾಯನನ್ನು

ನೇಮಿಸಿ ಅವುಗಳ ರಕ್ಷಣಾರ್ಥವಾಗಿ ದುರ್ಗಗಳನ್ನು ಕಟ್ಟಿಸಿ ಹಂಬೀರ ರಾಯನನ್ನು ಸೇನಾಪತಿಯನ್ನಾಗಿಟ್ಟನು.

ಶಿವಾಜಿಯು ಸೀರ್ಸದ ಮೇಲೆ ಹೊರಟು ವೇಲಾವತೀ ನದೀ ತೀರದ ಮಾರ್ಗವಾಗಿ ಬಳ್ಳಾರಿಯನ್ನು ಸೇರಿದನು. ಬಳ್ಳಾರಿಯ ದೇಶಾಯಿಯು ಶಿವಾಜಿಯ ಬಂಡಿಗಳನ್ನೂ ಕುದುರೆಗಳನ್ನೂ ಹಿಡಿದು ಕೊಂಡು ಹೋದನೆಂಬ ಸುದ್ದಿಯನ್ನು ಕೇಳಿ ಶಿವಾಜಿಯು ಕೋಟೆಯ ಬಳಿಯ ಕೆಲವು ಮನೆಗಳಿಗೆ ಬೆಂಕಿಯಿಡಿಸಿದನು. ಕೋಟೆಯ ಕಾವಲು ಗಾರರು ಗಾಬರಿಬಿದ್ದು ಚೆದರಿಹೋದರು. ದೇಶಾಯಿಯು ಯುದ್ಧ ದಲ್ಲಿ ಸತ್ತನು. ಒಡನೆಯೇ ದೇಶಾಯಿಯ ಹೆಂಡಿತಿಯಾದ ಸಾವಿತ್ರಿ ಬಾಯಿಯು ಗಂಡನ ಕುದುರೆಯನ್ನು ಹತ್ತಿ, ಚೆದರಿ ಹೋಗಿದ್ದ ಸೈನಿ ಕರನ್ನು ಕಲೆಯಹಾಕಿ ದುರ್ಗ ರಕ್ಷಣೆಗಾಗಿ ಪ್ರಯಾಸಪಟ್ಟಳು; ಅವಳು ಇಪ್ಪತ್ತಾರು ದಿವಸಗಳು ಶತ್ರುಗಳ ಸಂಗಡ ಪರಾಕ್ರಮದಿಂದ ಹೊಡೆ ದಾಡಿ ಇಪ್ಪತ್ತೇಳನೆಯ ದಿವಸ ತನ್ನ ಪ್ರಯತ್ನಗಳೆಲ್ಲವೂ ವಿಫಲವಾಗಲು, ಶಿವಾಜಿಗೆ ಶರಣಾಗತಳಾದಳು. ಶಿವಾಜಿಯು ಆ ವೀರಾಂಗನೆಯ ಪ್ರತಾಪಕ್ಕೆ ಮೆಚ್ಚಿ ಆ ಪ್ರದೇಶಕ್ಕೆ ಅವಳನ್ನೇ ಯಜಮಾನಿಯನ್ನಾ ಗಿಟ್ಟು ಗುಣಗ್ರಾಹಿಯೆನಿಸಿಕೊಂಡನು. ಅಲ್ಲಿಗೆ ತುಂಗಭದ್ರಾ ನದಿಯ ದಕ್ಷಿಣಕ್ಕಿರುವ ನಾಡೆಲ್ಲವೂ ಶಿವಾಜಿಯ ಅಧೀನವಾಯಿತು. ಅವನ ಅಶ್ವಸೈನಿಕರು ಬಿಜಾಪುರ ಸಂಸ್ಥಾನಕ್ಕೊಳಪಟ್ಟ ಪ್ರದೇಶಗಳ ಮೇಲೆ ಚೌತ್ಥಾಯಿಯನ್ನೂ ಸರ್‌ದೇಶಮುಖಿಯನ್ನೂ ಹಾಕಿದರು; ಅವು ಗಳನ್ನು ಕೊಡದ ಪಕ್ಷದಲ್ಲಿ ಊರುಗಳನ್ನು ಕೊಳ್ಳೆ ಹೊಡೆದುಕೊಂಡು ಹೋದರು.

ತರುವಾಯ ಶಿವಾಜಿಯು ತನಗೂ ತನ್ನ ತಮ್ಮ ವೆಂಕೋಜಿಗೂ ಇದ್ದ ದಾಯ ಭಾಗದ ವಿವಾದವನ್ನು ಬಗೆಹರಿಸಿಕೊಳ್ಳುವ ಯೋಚನೆ ಮಾಡಿದನು. ಹಂಬೀರರಾಯನಿಂದ ಪರಾಭವವನ್ನು ಹೊಂದಿದಂದಿ ನಿಂದ ವೆಂಕೋಜಿಯು ಮುಂದೇನು ಮಾಡಬೇಕೊ ಕಾಣದೆ ತೊಳಲು ತ್ತಿದ್ದನು. ಅವನ ಕೈಯ ಕೆಳಗಿನ ಹಿಂದೂ ಉದ್ಯೋಗಸ್ಥರೆಲ್ಲರೂ ಅಸಂತುಷ್ಟರಾಗಿ ಶಿವಾಜಿಯ ಕಡೆಗೆ ಹೋಗುವ ಜಾಡೆಯನ್ನು ತೋರಿ

ಸಿದರು. ಶಿವಾಜಿಯು ತೊರೇಗಲ್ಲಿಗೆ ಹೋಗಿ ಸೇರುತ್ತಲೆ, ವೆಂಕೋಜಿಯು ತಂಜೋರರಾಯನ ಮೇಲೆ ಯುದ್ಧಕ್ಕೆ ಹೋಗಿ ಸೋತ ವರ್ತಮಾನವನ್ನು ಕೇಳಿ, ವೆಂಕೋಜಿಯು ತನ್ನ ಕೈಯ ಕೆಳಗಿದ್ದ ಮುಸಲ್ಮಾನ್ ಉದ್ಯೋಗಸ್ಥರ ಮಾತಿಗೆ ಕಿವಿಗೊಟ್ಟು ಅವಿವೇಕಿಯಾಗಿ ನಡೆದ ನಡತೆಯನ್ನು ಆಕ್ಷೇಪಿಸಿ, ಒಳ್ಳೆಯ ಮಾತಿನಲ್ಲಿ ತನ್ನ ತಂದೆಯ ಸೊತ್ತಿನಲ್ಲಿ ಅರ್ಧ ಭಾಗವನ್ನು ಕೊಟ್ಟರೆ ಸರಿ, ಇಲ್ಲವಾದರೆ ತಕ್ಕ ಶಾಸ್ತಿ ಮಾಡುವೆನೆಂದು ಅವನಿಗೆ ಕಾಗದವನ್ನು ಬರೆಯಿಸಿದನು. ಆಗ ಯೋಜನೆ ಹರಿಯದೆ ವೆಂಕೋಜಿಯು ತನ್ನ ಹೆಂಡತಿಯನ್ನು ಕೇಳಿದನು. ದೀಪಾಬಾಯಿಯು ಬುದ್ಧಿವಂತೆ; "ಗೌರವಕ್ಕೆ ಹಾನಿಯಾದರೂ ಚಿಂತೆಯಿಲ್ಲ, ಕೋಪಿಸಿಕೊಂಡು ಹೊರಟುಹೋದ ರಘುನಾಥ ನಾರಾಯಣರಾಯರನ್ನು ಕರೆಯಿಸಿ ಅವರ ಮೂಲಕವಾಗಿ ಮಹಾರಾಜರ ಅನುಗ್ರಹವನ್ನು ಸಂಪಾದಿಸುವುದು ಆವಶ್ಯಕ" ಎಂದು ಬುದ್ಧಿವಾದವನ್ನು ಹೇಳಿದಳು. ವೆಂಕೋಜಿಯು ಗತ್ಯಂತರವನ್ನು ಕಾಣದೆ ಬಿಂಕವನ್ನು ಬಿಟ್ಟು ತನ್ನ ಪೂರ್ವ ಮಂತ್ರಿಯನ್ನು ಕರೆಯಿಸಿ ಸಿಂಹಾಸನದ ಮೇಲೆ ಅರ್ಧಾಸನವನ್ನು ಕೊಟ್ಟು ಕುಳ್ಳಿರಿಸಿ, ತನ್ನ ಸಂಕಟವನ್ನು ಹೇಳಿಕೊಂಡನು. ರಾಯನು ಕನಿಕರದಿಂದ "ವೆಂಕೋಜಿಯು ವಿನೀತನಾಗಿ ತಮ್ಮ ಆಜ್ಞೆಯ ಮೇರೆಗೆ ನಡೆವುದಕ್ಕೆ ಸಿದ್ಧನಾಗಿರುವನು" ಎಂದು ಹೇಳಿ, ಅವನನ್ನು ಕ್ಷಮಿಸುವಂತೆ ಬೇಡಿ, ಶಿವಾಜಿಗೆ ಕಾಗದವನ್ನು ಬರೆದನು. ಶಿವಾಜಿಯು ಜ್ಯೇಷ್ಠನ ಗೌರವಕ್ಕನುರೂಪವಾದ ಉದಾರ ಭಾವದಿಂದ ತಮ್ಮನ ಅಪರಾಧವನ್ನು ಮನ್ನಿಸಿ ತಂಜಾವೂರನ್ನೂ ಅದರ ಸುತ್ತಣ ನಾಡನ್ನೂ ಅವನಿಗೆ ಕೊಟ್ಟು ಅವನು ತನಗೆ ಆಪ್ತನಾಗಿರುವ ವರೆಗೂ ಆ ಪ್ರದೇಶಕ್ಕೆ ಅವನು ಅಧಿಕಾರಿಯಾಗಿರಬಹುದೆಂದೊಪ್ಪಿ ಉತ್ತರವನ್ನು ಕೊಟ್ಟನು. ಅದಕ್ಕೆ ವೆಂಕೋಜಿಯು ಸಮ್ಮತಿಸಿದನು. ದೀಪಾಬಾಯಿಯ ಬುದ್ಧಿ ಕುಶಲತೆಗೆ ಮೆಚ್ಚಿ ಶಿವಾಜಿ ಬೆಂಗಳೂರು ಮೊದಲಾದ ಜಹಗೀರುಗಳನ್ನು ಆಕೆಗೆ ಕೊಡಲಿಚ್ಛಿಸಿದನು; ಅಲ್ಲದೆ, ವೆಂಕೋಜಿಯು ರಘುನಾಥ ಪಂತನನ್ನೇ ಮಂತ್ರಿಯನ್ನಾಗಿಟ್ಟುಕೊಂಡು ಕಾರ್ಯಗಳನ್ನು ಮಾಡತಕ್ಕುದೆಂದು ಕಟ್ಟುಮಾಡಿದನು.

ಹೀಗೆ ತನಗೂ ತನ್ನ ತಮ್ಮನಿಗೂ ಇದ್ದ ದಾಯ ಭಾಗದ ವಿವಾದವನ್ನು ಬಗೆಹರಿಸಿ ತುಂಗಭದ್ರಾ ಕೃಷ್ಣಾ ನದಿಗಳ ಮಧ್ಯ ಪ್ರದೇಶವನ್ನು ಜಯಿಸುವ ಯೋಜನೆ ಮಾಡಿದನು. ಬಿಜಾಪುರ ಸಂಸ್ಥಾನದವರು ಆ ಪ್ರಾಂತಾಧಿಕಾರಿಯಾದ ಯೂಸಫ್ ಖಾನ್ ಮಾಯನ ಎಂಬವನಿಗೆ ಹೇರಳವಾಗಿ ದಂಡನ್ನು ಕೊಟ್ಟು, ಏನೇ ಆಗಲಿ ಆ ಪ್ರದೇಶವನ್ನು ಶಿವಾಜಿಗೆ ಬಿಡಕೂಡದೆಂದು ಆಜ್ಞೆಮಾಡಿದರು. ಯೂಸಫ್ ಖಾನನು ತೋರಗಲ್ಲಿನ ಹತ್ತಿರ ಶಿವಾಜಿಯ ದಂಡಿನ ಮೇಲೆ ಯುದ್ಧಕ್ಕೆ ಹೋದನು. ಫಲಟನದ ನಾಯಕನಾದ ನಿಂಬಾಲಕರನು ಪನ್ಹಾಳದ ಸುತ್ತುಮುತ್ತಲಿದ್ದ ನಾಡಿಗೆ ದಂಡೆತ್ತಿ ಹೋದನು. ಅಶ್ವಸೇನಾ ನಾಯಕನಾದ ಸೀಲೋಜಿ ಕಾಟ್ಕರನು ನಿಂಬಾಲಕರನನ್ನು ಹೊಡೆದು ಹಿಂದಕ್ಕಟ್ಟಿದನು. ತಂಜಾವೂರಿನಲ್ಲಿದ್ದ ಹಂಬೀರರಾಯನು ಸೇನಾಸಮೇತನಾಗಿ ಬಂದು ಶಿವಾಜಿಯನ್ನು ಸೇರಿದನು. ಇಬ್ಬರೂ ಕಲೆತು ಯೂಸಫ್ ಖಾನನನ್ನು ಸೋಲಿಸಿ ಅವನ ಸೇನೆಯಲ್ಲಿ ಅನೇಕರನ್ನು ಕೊಂದರು. ಯೂಸಫ್ ಖಾನನು ಹತಶೇಷರನ್ನು ಕಟ್ಟಿಕೊಂಡು ಪಲಾಯನ ಮಾಡಿದನು. ಇಂತು, ಹದಿನೆಂಟು ತಿಂಗಳೊಳಗೆ ಶಿವಾಜಿಯು ತನ್ನ ರಾಜ್ಯಕ್ಕೆ ಸರಿತೂಗುವಷ್ಟು ರಾಷ್ಟ್ರವನ್ನು ಕರ್ನಾಟಕದಲ್ಲಿ ಸಂಪಾದಿಸಿ ಅದರ ರಕ್ಷಣಾರ್ಥವಾಗಿ ಕೋಟೆಗಳನ್ನು ಕಟ್ಟಿಸಿ—

**ಅಡಿಯ ಮುಂದಿಡೆ ಸ್ವರ್ಗ।**
**ಅಡಿಯ ಹಿಂದಿಡೆ ನರಕ॥**
**ಅಡಿಗಶ್ವಮೇಧ ಫಲ ಸ್ವಾಮಿಕಾರ್ಯಕ್ಕೆ।**
**ಮಡಿಯಲೇ ಬೇಕು ಸರ್ವಜ್ಞ॥**

ಎಂಬಂತೆ ಸ್ವಾಮಿಕಾರ್ಯಾರ್ಪಿತ ಪ್ರಾಣರಾದ ಪ್ರಚಂಡ ಮಲ್ಲರನ್ನು ಠಾಣೆಗಳಿಗೆ ನೇಮಿಸಿದನು.

---

## ಹದಿನಾರನೆಯ ಪ್ರಕರಣ

# ಬಿಜಾಪುರದ ಪಕ್ಷವಾಗಿ ಮೊಗಲರೊಡನೆ ಯುದ್ಧ; ಶಿವಾಜಿಯ ಹಿತೋಪದೇಶಗಳು, ಮರಣ.

ಶಿವಾಜಿ ಕರ್ಣಾಟಕ ದಿಗ್ವಿಜಯ ತತ್ಪರನಾಗಿದ್ದ ಹದಿನೆಂಟು ತಿಂಗಳ ಕಾಲ ಪೇಶ್ವೆ ಮೋರೋಪಂತನು ದಕ್ಷಿಣದಲ್ಲಿ ಶಿವಾಜಿಯ ಸ್ವರಾಜ್ಯದ ಕಾರ್ಯಗಳನ್ನು ಮಾಡುತ್ತಿರಲು, ಸೂರತ್ತಿನಿಂದ ಮೊಗಲರ ನೌಬಲದ ಸಹಾಯವನ್ನು ಪಡೆದು ಸಿದ್ದಿಗಳು ಹಾವಳಿಯನ್ನು ಮಾಡುತ್ತಿದ್ದರು; ಮರಾಟಿಯವರು ಅದಕ್ಕೆ ಪ್ರತಿಯಾಗಿ ಸಿದ್ದಿಗಳ ಹಡಗುಗಳನ್ನು ಸುಡುತ್ತಲೂ ಜಿಂಜೀರದ ಮೇಲೆ ನಿರಂತರವಾಗಿ ಗುಂಡುಗಳನ್ನು ಪ್ರಯೋಗಮಾಡುತ್ತಲೂ ಇದ್ದರು. ಇತ್ತ, ಬಿಜಾಪುರ ಸಂಸ್ಥಾನದಲ್ಲಿ ದಕ್ಷಿಣ ಮುಸಲ್ಮಾನರೂ ಅವರ ಸಂಗಡ ಸೇರಿದ್ದ ಹಬ್ಶಿ(ಸಿದ್ದಿ)ಗಳೂ ಉತ್ತರ ದೇಶದಿಂದ ಬಂದ ಆಫ್ಗನರೂ, ಸಿಕಂದರನ ಬಾಲ್ಯದಶೆಯಲ್ಲಿ ರಾಜ್ಯಾಧಿಕಾರವನ್ನು ಆಕ್ರಮಿಸುವ ಸಲುವಾಗಿ ಕಾದಾಡುತ್ತಿದ್ದರು. ಕಡೆಗೆ ಆಫ್ಗನನಾದ ಅಬ್ದುಲ್ ಕರೀಮ ಖಾನನು ಸಿದ್ದಿ ಮಸೂದಖಾನನನ್ನು ಕೊಂದು ಸರ್ವಾಧಿಕಾರಿಯಾದನು. ದಕ್ಷಿಣದಲ್ಲಿ, ಮೊಗಲ ಚಕ್ರೇಶ್ವರನ ಪ್ರತಿನಿಧಿಯಾದ ಬಹದೂರ್ ಖಾನನು ಶಿವಾಜಿಗೆ ಅನುಕೂಲನಾಗಿದ್ದನು. ಅವನನ್ನು ಅಯೋಗ್ಯನೆಂದು ಔರಂಗಜೀಬನು ದಿಲ್ಲಿಗೆ ಕರೆಯಿಸಿಕೊಂಡು ಅವನ ಕೈಯ ಕೆಳಗೆ ಸೇನಾಪತಿಯಾಗಿದ್ದ ದಿಲೇರಖಾನನ್ನೇ ರಾಜಪ್ರತಿನಿಧಿಯನ್ನಾಗಿ ನೇಮಿಸಿದನು.

ಶಿವಾಜಿಯೂ ಗೋಲ್ಕೊಂಡ ಸುಲ್ತಾನನಾದ ಅಬು ಹುಸೇನನೂ ಸಂಧಿ ಮಾಡಿಕೊಂಡು ಒಂದಾದರೆಂಬ ಹೊಟ್ಟೆಯುರಿಯಿಂದ ದಿಲೇರಖಾನನೂ ಅಬ್ದುಲ್ ಕರೀಮ ಖಾನನೂ ಕಲೆತು ಗೋಲ್ಕೊಂಡದ ಮೇಲೆ ದಂಡೆತ್ತಿಹೋಗಿ ಗಡಿಯ ದುರ್ಗವಾದ ಮಲಖೇಡಕ್ಕೆ ಮುತ್ತಿಗೆ ಹಾಕಿದರು. ಅನೇಕ ದಿನಗಳು ಸಂಬಳವಿಲ್ಲದೆ ಹೆಣಗಾಡುತ್ತಿದ್ದ ಬಿಜಾಪುರದ ಸೈನಿಕರು ಧೈರ್ಯಗೆಟ್ಟು ಹೊರಟುಹೋದರು. ವೈರಿಗಳ ಮೇಲೆ

ಕೈಮಾಡಲು ಸಾಧನ ಹೀನನೂ ವ್ಯಾಧಿಗ್ರಸ್ಥನೂ ಆಗಿದ್ದ ಅಬ್ದುಲ್ಲಾ ಕರೀಮನು ೧೬೭೭ರಲ್ಲಿ ಮೃತನಾದನು. ಅವನ ಸ್ಥಾನಕ್ಕೆ ಸಿದ್ದಿ ಮಸೂದಖಾನನು ಬಂದು ರಾಜ್ಯಭಾರವನ್ನು ವಹಿಸಿದನು. ಸೈನಿಕರಿಗೆ ಸಂಬಳವು ದೊರೆಯದೆ ಹೋಗಲು, ಹೊಟ್ಟೆಗಿಲ್ಲದಿದ್ದುದರಿಂದ ಅವರು ಕರೀಮಖಾನನ ಮನೆಗೆ ಸುಗ್ಗಿ ಲೂಟಿಮಾಡಿ ದಿಲೇರಿಖಾನನ ಸೇನೆಯನ್ನೂ ಪೇಶ್ವೆ ಮೋರೋಪಂತನ ಸೇನೆಯನ್ನೂ ಸೇರಿಕೊಂಡರು.

ಈ ಅನರ್ಥಗಳೆಲ್ಲವನ್ನೂ ಕೇಳಿ ಅವರಂಗಜೇಬನು ಸಿಟ್ಟುಗೊಂಡು ತನ್ನ ಮಗನಾದ ಮುಅಜಿಮನನ್ನು ಮರಳಿ ತನಗೆ ಪ್ರತಿನಿಧಿಯನ್ನಾಗಿ ದಕ್ಷಿಣಕ್ಕೆ ಕಳುಹಿಸಿ ದಿಲೇರಿಖಾನನ್ನು ಅವನ ಕೈಯ ಕೆಳಗೆ ಸೇನಾಪತಿಯನ್ನಾಗಿ ಹಾಕಿ ಗೋಲ್ಕೊಂಡದಲ್ಲಿ ತನಗಾದ ನಷ್ಟಕ್ಕೆ ಪರಿಹಾರವಾಗಿ ಬಂದಷ್ಟು ಬರಲೆಂಬಾಸೆಯಿಂದ ಬಿಜಾಪುರ ಸಂಸ್ಥಾನದ ಮೇಲೆ ಯುದ್ಧಕ್ಕೆ ಹೋಗುವಂತೆ ಆಜ್ಞೆಮಾಡಿದನು.

ದಿಲೇರಿಖಾನನು ಬಿಜಾಪುರಕ್ಕೆ ದಂಡೆತ್ತಿ ಹೋಗಿ, ಹಿಂದೆ ಅಧಿಕಾರದಲ್ಲಿದ್ದ ಖವಾಸಖಾನನು ಒಪ್ಪಿಕೊಂಡಿದ್ದಂತೆ, ಸಿಕಂದರನ ಅಕ್ಕನಾದ ಪಾದುಷಾ ಬೀಬಿಯನ್ನು ಅವರಂಗಜೇಬನ ಮಗನಿಗೆ ಕೊಟ್ಟು ಮದುವೆಮಾಡಲು ಕಳುಹಿಸಿಕೊಡಿರೆಂದು ಅಲ್ಲಿಯ ಅಧಿಕಾರಿಗಳನ್ನು ಕೇಳಿದನು. ಮಸೂದಖಾನನೂ ಪುರಜನರೂ ಅದಕ್ಕೊಪ್ಪಲಿಲ್ಲ; ಇಬ್ಬರಿಗೂ ಯುದ್ಧವು ಒದಗುವಂತಾಯಿತು. ಆಗ ಪಿತೃರಾಜ್ಯಹಿತೈಷಿಣಿಯಾದ ಪಾದುಷಾ ಬೀಬಿಯು ತಂದೆಯ ರಾಜ್ಯವನ್ನೂ ತಮ್ಮನನ್ನೂ ಉಳಿಸುವ ಸಲುವಾಗಿ ತಾನಾಗಿ ದಿಲೇರಿಖಾನನ ಬಿಡಾರಕ್ಕೆ ಹೋದಳು. ಖಾನನು ಕಾವಲಿಟ್ಟು ಆಕೆಯನ್ನು ದಿಳ್ಳಿಗೆ ಕಳುಹಿಸಿದನು; ಮಾತಿಗೆ ತಪ್ಪಿ ಕಾಳೆಗಕ್ಕೂ ನಿಂತನು. ಊರವರೆಲ್ಲರೂ ರೇಗಿ ರೋಷಾವೇಶದಿಂದ ಅವನ ದಂಡನ್ನು ಒಕ್ಕಲಿಕ್ಕಿ ದಾಟಿಸಿದರು. ಆ ವೇಳೆಗೆ ದಿಳ್ಳಿಯಿಂದ ದಿಲೇರಿಖಾನನ ಸಹಾಯಕ್ಕೆ ದೊಡ್ಡ ದಂಡು ಬಂದಿಳಿಯಿತು. ಈ ಸ್ಥಿತಿಯಲ್ಲಿ ಮಸೂದಖಾನನು ರಾಜ್ಯಕ್ಕೆ ಬಂದ ವಿಪತ್ತನ್ನು ತೊಲಗಿಸಲು ಉಪಾಯಾಂತರವನ್ನು ಕಾಣದೆ, ಶಿವಾಜಿಯ ಸಹಾಯವನ್ನು ಬೇಡಲು ನಿಶ್ಚಯಿಸಿ, ಶಿವಾಜಿಯ ತಂದೆ ಆ ಸಂಸ್ಥಾನಕ್ಕೆ

ಮಾಡಿದ ಉಪಕಾರಗಳೆಲ್ಲವನ್ನೂ ಹೇಳಿ, ಈಚೆಯ ವೈರವನ್ನು ಮರೆತು ಪೂರ್ವ ಸ್ನೇಹದ ಮೇಲೆ ದೃಷ್ಟಿಯಿಟ್ಟು ಜಾಗ್ರತೆಯಾಗಿ ದಂಡಿನೊಡನೆ ಬಂದರೆ ಸಂಸ್ಥಾನವು ಉಳಿಯುವುದೆಂದೂ, ಬಾರದೆ ಹೋದರೆ ಮುಳುಗಿ ಹೋಗುವುದೆಂದೂ ಕಾಗದವನ್ನು ಬರೆದನು.

ಒಡನೆಯೇ ಪನ್ಹಾಳದ ಸಮೀಪದಲ್ಲಿದ್ದ ಶಿವಾಜಿ ಬಿಜಾಪುರದ ಕಡೆಗೆ ಹೊರಟನು. ಅಲ್ಲಿ ಮೊಗಲರ ಸೇನೆ ಅಪರಿಮಿತವಾಗಿದ್ದುದನ್ನು ಕಂಡು, ಅದರೊಡನೆ ಯುದ್ಧಕ್ಕೆ ಹೋಗಲಿಲ್ಲ. ಮೊಗಲ ರಾಷ್ಟ್ರಕ್ಕೆ ದಂಡೆತ್ತಿ ಹೋದರೆ ಮೊಗಲರು ತಮ್ಮ ರಾಷ್ಟ್ರವನ್ನು ರಕ್ಷಿಸಿಕೊಳ್ಳುವ ಸಲುವಾಗಿ ತಾವಾಗಿ ಬಿಜಾಪುರವನ್ನು ಬಿಟ್ಟು ಹೋಗುವರೆಂದು ಯೋಚಿಸಿ ಶಿವಾಜಿಯು ಮೊಗಲರು ಹೋಗಿ ಬರುವ ದಾರಿಯನ್ನು ಕಟ್ಟುವುದಕ್ಕೆ ಬಿಜಾಪುರದ ಹತ್ತಿರ ತಕ್ಕಷ್ಟು ಅಶ್ವಸೇನೆಯನ್ನಿಟ್ಟು, ಉಳಿದ ದಂಡನ್ನು ತೆಗೆದುಕೊಂಡು ಭೀಮಾ ನದಿಯನ್ನು ದಾಟಿ ಖಾನ್‌ದೇಶದ ಕಡೆಗೆ ತಿರುಗಿದನು; ಆ ನದಿಯಿಂದ ಗೋದಾವರಿಯ ವರೆಗೂ ಊರುಗಳನ್ನು ಕೊಳ್ಳೆ ಹೊಡೆಯುತ್ತ ಹೋಗಿ ಜಾಲ್ನ ಎಂಬ ಪಟ್ಟಣವನ್ನು ಸೇರಿ ಯಥಾ ಸಾವಕಾಶವಾಗಿ ಮೂರು ದಿನಗಳು ಆ ಪಟ್ಟಣವನ್ನು ಸೂರೆಗೊಂಡು ಹಿಂದಿರುಗಿದನು. ಅವರಂಗಾಬಾದಿಗೆ ಸಮೀಪದಲ್ಲಿಯೇ ಶಿವಾಜಿಯು ಇಷ್ಟು ಹಾವಳಿ ಮಾಡುತ್ತಿದ್ದರೂ ಮುಅಜಿಮನು ಪರಾಕಾಗಿದ್ದು, ತರುವಾಯ ಶಿವಾಜಿಯನ್ನು ನಿಗ್ರಹಿಸುವುದಕ್ಕೆ ಹತ್ತು ಸಾವಿರ ಸೈನಿಕರನ್ನು ಕೊಟ್ಟು ರಣಮಸ್ತಖಾನನನ್ನು ಕಳುಹಿಸಿದನು. ಸಂಗಮನೇರ್ ಎಂಬ ಊರಿನ ಹತ್ತಿರ ಯುದ್ಧವಾಯಿತು. ಹಂಬೀರರಾಯನು ಗಾಯಪಟ್ಟು ಬಿದ್ದನು. ರಣಮಸ್ತಖಾನನು ಕುದುರೆಯಿಂದ ಬಿದ್ದು ಕೈಸೆರೆಯಾದನು. ಶಿವಾಜಿಯು ಮೊಗಲರ ಇನ್ನೊಂದು ದಂಡು ಬರುವ ಸಮಾಚಾರವನ್ನು ಕೇಳಿ ಸೇನಾ ಸಮೇತನಾಗಿ ಬೆಟ್ಟಗುಟ್ಟಗಳ ಮಾರ್ಗವನ್ನು ಹಿಡಿದು ಸುರಕ್ಷಿತವಾಗಿ ಖಾನ್‌ದೇಶದಲ್ಲಿರುವ ಪಟ್ಟ ಎಂಬ ದುರ್ಗವನ್ನು ಸೇರಿ ಅದರ ಸುತ್ತಲೂ ಬಹದೂರ್‌ಖಾನನು ಕಟ್ಟಿಸಿದ್ದ ಕೋಟೆಗಳನ್ನು ವಶಮಾಡಿಕೊಂಡನು. ಇಷ್ಟಾದರೂ ದಿಲೇರಿಖಾನನು ಮುತ್ತಿಗೆಯನ್ನು

ತೆಗೆಯಲಿಲ್ಲ. ಮುಸೂದಖಾನನಿಂದ ಆ ಸುದ್ದಿಯು ಬರುತ್ತಲೆ ಮೋರೋ ಪಂತನನ್ನು ಪದಾತಿಗೂ ಹಂಬೀರರಾಯನನ್ನು ಅಶ್ವಸೇನೆಗೂ ಅಧಿಪತಿಗಳನ್ನಾಗಿ ನೇಮಿಸಿ ಅವರನ್ನು ಬಿಜಾಪುರದ ಕಡೆಗೆ ಕಳುಹಿಸಿ ತಾನು ಪನ್ಹಾಲಕ್ಕೆ ಹಿಂದಿರುಗಿದನು.

ಅಷ್ಟರೊಳಗೆ ತನ್ನ ಮಗನಾದ ಸಾಂಬಾಜಿಯು ದಿಲೇರಖಾನನ ಸಂಗಡ ಸೇರಿಕೊಂಡನೆಂಬ ವರ್ತಮಾನವನ್ನು ಶಿವಾಜಿ ಕೇಳಿದನು. ಸಾಂಬಾಜಿಯು ಧೈರ್ಯದಲ್ಲಿಯೂ ಸಾಮರ್ಥ್ಯದಲ್ಲಿಯೂ ತಂದೆಯನ್ನು ಹೋಲಿದ್ದರೂ ಅವನ ಶೀಲವು ಚೆನ್ನಾಗಿರಲಿಲ್ಲ. ಅವನು ಒಬ್ಬ ಬ್ರಾಹ್ಮಣ ಸ್ತ್ರೀ ವಿಷಯದಲ್ಲಿ ದುರಾಲೋಚನೆ ಮಾಡುತ್ತಿದ್ದನೆಂದು ಕೇಳಿ ಶಿವಾಜಿ ಅವನನ್ನು ಪನ್ಹಾಲ ದುರ್ಗದಲ್ಲಿಟ್ಟು ಅವನ ಮೇಲೆ ಜನಾರ್ದನ ಪಂತನನ್ನು ಕಾವಲಿಟ್ಟನು. ಸಾಂಬಾಜಿ ಪನ್ಹಾಲ ದುರ್ಗದಿಂದ ತಪ್ಪಿಸಿಕೊಂಡು ದಿಲೇರಖಾನನ ಶಿಬಿರಕ್ಕೆ ಹೋಗುತ್ತಲೆ, ಅವನು ಸಾಂಬಾಜಿಯನ್ನು ಮರ್ಯಾದೆಯಿಂದ ಬರಮಾಡಿಕೊಂಡು ನಾನಾ ಪ್ರಕಾರವಾದ ಪ್ರಲೋಭನ ವಾಕ್ಯದಿಂದ ಮರುಳುಮಾಡಿ ಅವನ ತಂದೆಯು ಬಿಜಾಪುರದವರಿಂದ ತೆಗೆದುಕೊಂಡಿದ್ದ ಭೂಪಾಲಗಡಕ್ಕೆ ದಂಡೆತ್ತಿ ಹೋಗಿ ಮುತ್ತಿಗೆ ಹಾಕಲು ಕಳುಹಿಸಿಕೊಟ್ಟನು. ಚಾಕಣ ದುರ್ಗವು ಶಿವಾಜಿಯ ಕೈಸೇರಿದಂದಿನಿಂದ ಫಿರಂಗಜಿ ನರಸಾಲನು ಭೂಪಾಲಗಡಕ್ಕೆ ರಕ್ಷಕನಾಗಿದ್ದನು. ಈ ಸಮಯದಲ್ಲಿ ಅವನು ತನ್ನೊಡೆಯನ ಮಗನನ್ನು ಕೊಲ್ಲುವುದಕ್ಕಿಂತ ತಾನೇ ಸೋಲುವುದು ಮೇಲೆಂದು ಭೂಪಾಲಗಡವನ್ನು ಬಿಟ್ಟುಕೊಟ್ಟು ಶಿವಾಜಿಯ ಬಳಿಗೆ ಹೋದನು. ಶಿವಾಜಿ ಕೂಡಲೆ, ''ನಮ್ಮನ್ನು ಬಿಟ್ಟು ಸಾಂಬಾಜಿಯು ಶತ್ರುಪಕ್ಷಕ್ಕೆ ಎಂದು ಹೋದನೋ ಅಂದೇ ಅವನು ನಮ್ಮ ಪ್ರೀತಿಗೆ ಪಾತ್ರನಲ್ಲದೆ ಹೋದನು. ಅವನೂ ಯವನರ ಹಾಗೆ ನಮ್ಮ ಶತ್ರುವು. ಯಾರು ಅವನನ್ನು ಹೊಡೆವುದಕ್ಕಾಗಲಿ ಸೆರೆ ಹಿಡಿವುದಕ್ಕಾಗಲಿ ಕಡೆಗೆ ಕೊಲ್ಲುವುದಕ್ಕಾಗಲಿ ಸಂಕೋಚಪಡುವರೊ ಅವರು ಕರ್ತವ್ಯವನ್ನು ಬಿಟ್ಟು ನಮ್ಮಾಜ್ಞೆಯನ್ನುಲ್ಲಂಘಿಸಿದವರಾಗಿ ದಂಡನೆಗೆ ಗುರಿಯಾಗುವರು'' ಎಂದು ಸೈನಿಕರಿಗೆ ಆಜ್ಞೆಮಾಡಿದನು.

ಸಾಂಬಾಜಿ ದಿಲೇರಿಖಾನನ ಹಸ್ತಗತನಾಗಿರುವನೆಂದು ಕೇಳು ತ್ತಲೆ ಅವರಂಗಜೇಬನು ಅವನನ್ನು ದಿಳ್ಳಿಗೆ ಕಳುಹಿಸುವಂತೆ ರಾಯಸ ವನ್ನು ಬರೆಯಿಸಿದನು. ದಿಲೇರಿಖಾನನು ಅವರಂಗಜೇಬನ ಇಂಗಿತ ವನ್ನರಿತು ಸಾಂಬಾಜಿಯನ್ನು ಬಿಟ್ಟುಕೊಡಲಿಷ್ಟಪಡದೆ ತಂದೆಯ ಬಳಿಗೆ ಹೋಗಿ ಸೇರಿಕೊಳ್ಳುವಂತೆ ಹೇಳಿ ಅವನನ್ನು ಕಳುಹಿಸಿಬಿಟ್ಟನು. ಅವನು ಪನ್ಹಾಲಕ್ಕೆ ಹೋಗಿ ತಂದೆಯ ಕಾಲಿಗೆ ಬೀಳಲು, ಶಿವಾಜಿ ಇಂತೆಂದು ಬುದ್ಧಿ ಹೇಳಿದನು :—

"ನೀವು ನಮ್ಮನ್ನು ಬಿಟ್ಟು ಮೊಗಲರಲ್ಲಿ ಹೋಗಿ ಸೇರಿ ಬಹಳ ಕೆಟ್ಟ ಕೆಲಸವನ್ನು ಮಾಡಿದಿರಿ. ಅವರಂಗಜೇಬನಿಗೂ ದಿಲೇರಿಖಾನನಿಗೂ ನಮಗೂ ಬದ್ಧ ವೈರವಿದೆ. ಆದರೂ ನೀವಾಗಿ ಹೋಗಿ ದಿಲೇರಿಖಾನನ ಪಾಶಕ್ಕೆ ಬಿದ್ದಿರಿ. ಇಂತಹ ಹೆಡ್ಡತನವುಂಟೆ? ಅವನು ನಿಮ್ಮನ್ನು ಮೋಸಗೊಳಿಸುತ್ತಿದ್ದನು. ಆದರೆ ಜಗದಂಬೆಯ ಕೃಪೆಯಿಂದ ನೀವು ಅವನ ಕೈಯಿಂದ ಬಿಡಿಸಿಕೊಂಡು ಜೀವವಂತರಾಗಿ ಬಂದಿರಿ. ದಿಲೇರಿ ಖಾನನಿಂದ ನಮಗೊಂದು ಉಪಕಾರವೇ ಆಯಿತು. ನೀವು ಸಾಮಾನ್ಯ ರಲ್ಲ ; ಹಿಂದೂ ರಾಜ್ಯಕ್ಕೆ ಅಧಿಕಾರಿಗಳಾಗಿ ದೊಡ್ಡ ಮನೆತನದಲ್ಲಿ ಹುಟ್ಟಿದವರು. ನಾವು ಈ ವರೆಗೆ ಸಂಪಾದಿಸಿದುದೆಲ್ಲವೂ ನಿಮಗಾಗಿ ಯೇ. ಹೀಗಿರುವಲ್ಲಿ, ಯಃಕಶ್ಚಿತ್ ಸರದಾರನಾದ ದಿಲೇರಿಖಾನನ ಆಶ್ರಯವನ್ನು ಸೇರಿ ಅಪಮಾನವನ್ನು ಹೊಂದಿ ಪೆಟ್ಟು ತಿನ್ನುವುದು ನಿಮ್ಮಂತಹ ಬುದ್ಧಿವಂತರೂ ಚಾಗರೂಕರೂ ಮಾನಿಷ್ಠರೂ ಆದವರಿಗೆ ಸಲ್ಲುವುದೆ? ನೀವು ಮುಂದೆ ನಮ್ಮ ಗದ್ದುಗೆಗೆ ಬರತಕ್ಕವರು. ಆಗ ನೀವು ನಿಮ್ಮ ಪ್ರಜೆಗಳನ್ನು ನಿಮ್ಮ ಮಕ್ಕಳಂತೆ ಭಾವಿಸಿ ಅವರ ಧನ ಮಾನ ಪ್ರಾಣಗಳನ್ನು ರಕ್ಷಿಸುವುದು ನಿಮ್ಮ ಪವಿತ್ರ ಕರ್ತವ್ಯವಾಗಿರುವುದು. ಹೀಗಿರುವಲ್ಲಿ, ನೀವು ಇಂತಹ ಅಸಂಗತ ಕಾರ್ಯಗಳನ್ನು ಮಾಡಿ ನಿಮ್ಮ ಪ್ರಜೆಗಳನ್ನು ದುಃಖಪಡಿಸಲು ಹೊರಟರೆ ಅವರ ಪಾಲನೆಯಾಗುವುದು ಹೇಗೆ? ಅಗಮ್ಯಾಗಮನ, ಅಥವಾ ಪರಸ್ತ್ರೀ ಗಮನವು, ಯಶೋಹಾನಿಗೂ ವಿನಾಶಕ್ಕೂ ಮೂಲವು. ರಾವಣಾದಿ ರಾಜ್ಯಕರ್ತರು ಈ ಪಾತಕದ ದೆಸೆಯಿಂದ ಯಾವ ದುರ್ದಶೆಗೆ

ಬಂದರು ? ರಾಜ್ಯ ಭ್ರಂಶವೂ ಕುಲಕ್ಷಯವೂ ಹೇಗಾಯಿತು ? ಯೋಚಿಸಿರಿ. ನಿಮ್ಮ ಈ ದೋಷವನ್ನು ಹೋಗಲಾಡಿಸಬೇಕೆಂದು, ಕೇವಲ ಪುತ್ರ ವಾತ್ಸಲ್ಯದಿಂದ, ಅತ್ಯಲ್ಪವಾಗಿ ನಿಮ್ಮನ್ನು ದಂಡಿಸಿದೆನು. ಆ ದುಃಖದಿಂದ ನೀವು ಈ ಹೆಡ್ಡ ಕೆಲಸವನ್ನು ಮಾಡಿದಿರಿ. ಆದರೆ ಅದರಿಂದ ಯಾವ ಅನಿಷ್ಟವೂ ಆಗಲಿಲ್ಲ. ಅದು ಜಗದಂಬೆಯ ಅನುಗ್ರಹವೆಂದೇ ಹೇಳಬೇಕು. ಇಂತಹ ಕೆಟ್ಟ ಕೆಲಸವನ್ನು ಮತ್ತೆ ಮಾಡಬೇಡಿರಿ. ಹಗೆಗಳು ಇಂತಹ ಗೃಹಚ್ಛಿದ್ರಗಳನ್ನು ಕಂಡರೆ ಆನಂದಿಸಿ ನಮ್ಮನ್ನು ಹಾಳುಮಾಡಲು ಉದ್ಯುಕ್ತರಾಗುವರು. ಯವನರ ಅಧೀನತೆಯಿಂದ ಜಡುಗಡೆಯಾಗಲು ಇಷ್ಟು ವರ್ಷಗಳೂ ಎಡೆಬಿಡದೆ ಶ್ರಮಪಟ್ಟು ಸ್ವಾತಂತ್ರ್ಯವನ್ನೂ ಸ್ವರಾಜ್ಯವನ್ನೂ ಸಂಪಾದಿಸಿದೆವು. ಇದೊಂದನ್ನೂ ಯೋಚಿಸದೆ ಮರಳಿ ಯವನರ ಆಶ್ರಯವನ್ನು ಹೊಂದಬೇಕೆಂಬ ದುರ್ಬುದ್ಧಿ ನಿಮಗೆ ಹುಟ್ಟಿದುದು ಎಂತಹ ದೌರ್ಭಾಗ್ಯ! ನಿಮಗೆ ರಾಜಪದವಿಯ ಮೇಲೆ ಇಚ್ಛೆಯಿದ್ದರೆ, ರಾಜ್ಯವನ್ನು ಎರಡು ಭಾಗ ಮಾಡಿ ತುಂಗಭದ್ರೆಯಿಂದ ಕಾವೇರಿಯ ವರೆಗಿರುವ ನಾಡನ್ನು ನಿಮಗೂ, ನರ್ಮದಾ ನದಿಯಿಂದ ತುಂಗಭದ್ರೆಯ ವರೆಗಿರುವ ಪ್ರದೇಶವನ್ನು ರಾಜಾರಾಮರಿಗೂ ಕೊಡುವೆನು; ನಾನು ಯಾವುದಾದರೊಂದು ಪುಣ್ಯಕ್ಷೇತ್ರದಲ್ಲಿ ಹೋಗಿರುವೆನು; ಇಲ್ಲವೆ, ರಾಮದಾಸ ಸ್ವಾಮಿಯವರ ಚರಣ ಸನ್ನಿಧಿಯಲ್ಲಿದ್ದು ಪರಮೇಶ್ವರನ ಸೇವೆಯಲ್ಲಿ ನನ್ನ ಉಳಿದ ಆಯುಸ್ಸನ್ನು ಕಳೆಯುವೆನು. ಆದರೆ ಈ ಪ್ರಕಾರವಾಗಿ ವ್ಯವಸ್ಥೆ ಮಾಡುವ ವರೆಗೂ ನೀವು ಪನ್ಹಾಲ ದುರ್ಗದಲ್ಲಿ ನಿರ್ಬಂಧದಲ್ಲಿರತಕ್ಕದು. ಏಕೆಂದರೆ, ನಿಮ್ಮಲ್ಲಿ ನನಗೆ ನಂಬುಗೆ ಹೋಯಿತು.''

ಹೀಗೆ ಹೇಳಿ ಶಿವಾಜಿಯು ಮಗನನ್ನು ಪನ್ಹಾಲ ದುರ್ಗದಲ್ಲಿಟ್ಟು ಅವನ ಮೇಲೆ ಕಾವಲು ಹಾಕಿ ಅವನ ಗೃಹಕೃತ್ಯವು ನಡೆಯುವುದಕ್ಕೆ ತಕ್ಕ ಸೌಕರ್ಯಗಳನ್ನು ಕಲ್ಪಿಸಿ ರಾಯಗಡಕ್ಕೆ ಪಯಣಮಾಡಿದನು.

ಶಿವಾಜಿಯ ಆಜ್ಞಾನುಸಾರವಾಗಿ ಹಂಬೀರರಾಯನು ಸೇನೆಯೊಡನೆ ಮಸೂದಖಾನನ ಸಹಾಯಕ್ಕೆ ಬಿಜಾಪುರದ ಕಡೆಗೆ ಹೋಗುತ್ತಿದ್ದನು. ಅದೇ ಸಮಯದಲ್ಲಿ ರಣಮಸ್ತಖಾನನು ಹತ್ತು ಸಾವಿರ

ಅಶ್ವ ಸೇನೆಯೊಡನೆ ದಿಲೇರಿಖಾನನ ಸಹಾಯಕ್ಕೆ ಹೋಗುತ್ತಿದ್ದನು. ಇಬ್ಬರೂ ಸಂಧಿಸಿ ಹೊಡೆದಾಡಲಾರಂಭಿಸಿದರು. ರಣಮುಸ್ತಖಾನನು ಸೋತನು. ದಿಲೇರಿಖಾನನಿಗೆ ಸಹಾಯವಿಲ್ಲವಾಯಿತು. ಹಂಬೀರ ರಾಯನು ದಿಲೇರಿಖಾನನ ಶಿಬಿರದ ಸುತ್ತಲೂ ದಂಡನ್ನಿಟ್ಟು ಆಹಾರ ಪದಾರ್ಥಗಳಾಗಲಿ ಜನ ಸಹಾಯವಾಗಲಿ ಅವನಿಗೆ ಮುಟ್ಟದಂತೆ ಮಾಡಿ ದನು. ಮಸೂದಖಾನನ ಪ್ರೋತ್ಸಾಹದಿಂದ ಅವನ ಸೈನಿಕರು ಕೋಟೆಯ ರಕ್ಷಣಾರ್ಥವಾಗಿ ಶತ್ರುಗಳ ಸಂಗಡ ವಿಕ್ರಮದಿಂದ ಹೋರಾಡುತ್ತಿದ್ದರು. ದಿಲೇರಿಖಾನನು ಬಿಜಾಪುರವನ್ನು ಸಾಧಿಸುವ ಆಸೆಯನ್ನು ತೊರೆದು ಅಲ್ಲಿಂದ ಹೊರಟು ಕೃಷ್ಣಾ ನದಿಯನ್ನು ದಾಟಿ ಕರ್ಣಾಟಕದಲ್ಲಿ ಕೊಳ್ಳೆ ಹೊಡೆಯುತ್ತಿದ್ದನು. ಆ ವೇಳೆಗೆ ಜನಾರ್ದನ ಪಂತನು ತನ್ನ ದಂಡಿನೊಡನೆ ಹೋಗಿ ದಿಲೇರಿಖಾನನ ಸೇನೆಯನ್ನು ನುಚ್ಚು ನುರಿ ಮಾಡಿ ಅವನನ್ನು ಹಿಂದಕ್ಕಟ್ಟಿದನು. ಇತ್ತ, ಮೋರೋ ಪಂತನು ಖಾನ್‌ದೇಶಕ್ಕೆ ಹೋಗಿ ದಿಕ್ಕುದಿಕ್ಕಿಗೂ ತನ್ನ ಸೈನಿಕರನ್ನು ಕಳುಹಿಸಿ ಲೂಟಿಮಾಡಿಸಿದನು.

ಈ ರೀತಿಯಾಗಿ, ಕಾಲಿಟ್ಟೆಡೆಯಲ್ಲೆಲ್ಲ ಮೊಗಲರು ಪರಾಭವವನ್ನು ಹೊಂದಿ ಬಂದ ದಾರಿಯನ್ನು ಹಿಡಿದು ಸ್ವಸ್ಥಾನವನ್ನು ಸೇರಿದರು.

ಬಿಜಾಪುರ ಸಂಸ್ಥಾನಕ್ಕೆ ಬಂದ ಗಂಡವು ತತ್ಕಾಲಕ್ಕೆ ನಿವಾರಣ ವಾಯಿತು. ಬಾಲಕನಾದ ಸುಲ್ತಾನನೂ ಮಸೂದಖಾನನೇ ಮೊದಲಾದ ಸರ್ದಾರರೂ ಆನಂದ ಪರವಶರಾಗಿ ತಮ್ಮ ಸಂತೋಷವನ್ನು ಬಗೆ ಬಗೆಯ ಉತ್ಸವಗಳಿಂದ ಪ್ರಕಾಶಗೊಳಿಸಿದರು. ಶಿವಾಜಿಯನ್ನು ರಾಜಧಾನಿಗೆ ಬರಮಾಡಿಕೊಂಡು, ಆ ಮಹಾರಾಯನೇ ತಮ್ಮನ್ನು ಮೊಗಲರ ಬಾಧೆ ಯಿಂದ ಉದ್ಧಾರ ಮಾಡಿದನೆಂದು ಸುಲ್ತಾನನೂ ಶ್ರೀಮಂತರೂ ನಗರ ವಾಸಿಗಳೂ, ನಾವು ಮುಂದು ತಾವು ಮುಂದು ಎಂದು, ಅವನನ್ನೂ ಅವನ ಪರಿವಾರವನ್ನೂ ಆದರದಿಂದ ಸತ್ಕರಿಸಿದರು. ಆ ಸಮಯದಲ್ಲಿ, ಬಿಜಾಪುರ ಸಂಸ್ಥಾನದವರು ಕೃಷ್ಣಾ ನದಿಯಿಂದ ತಂಜಾವೂರಿನ ಕಡೆಯ ವರೆಗೂ ಶಿವಾಜಿಯೇ ಸ್ವತಂತ್ರ ರಾಜ್ಯಾಧಿಪತಿಯೆಂದೊಪ್ಪಿಕೊಂಡು,

ಅಂದಿನಿಂದ ವೆಂಕೋಜಿಯೂ ಶಿವಾಜಿಯ ಆಶ್ರಿತನಾಗಿ ತಂಜಾವೂರನ್ನು ಆಳತಕ್ಕುದೆಂದು ತೀರ್ಮಾನ ಮಾಡಿದರು. ಅಷ್ಟರಲ್ಲೇ ತೃಪ್ತರಾಗದೆ ಸುಲ್ತಾನನೂ ಮುಸೂರಖಾನನೂ ಈ ಅರ್ಥಕ್ಕೆ ಒಂದು ಕಾಗದವನ್ನು ಬರೆದರು :—

"ನೀವು ಸಮಯದಲ್ಲಿ ಸಹಾಯ ಮಾಡಿ ನಮ್ಮನ್ನು ಶತ್ರುಬಾಧೆ ಯಿಂದ ಸಲಹಿದಿರಿ. ಇದು ನಿಮ್ಮ ಮಹತ್ತ್ವಕ್ಕೂ ಕುಲೀನತೆಗೂ ಅನುರೂಪವಾಗಿರುವುದು. ನೀವು ಷಾಹಜಿ ರಾಜರ ಕುಮಾರರು; ಇಂದು ಅವರನ್ನು ಋಣ ಮುಕ್ತರನ್ನಾಗಿ ಮಾಡಿದಿರಿ. ಹಿಂದೆ ನೀವು ನಮ್ಮ ಸಂಸ್ಥಾನಕ್ಕೆ ವಿರೋಧಿಗಳಾಗಿದ್ದುದರಿಂದ ನಮಗೂ ನಿಮಗೂ ಇಷ್ಟು ದಿವಸಗಳು ವೈರವಿದ್ದಿತು; ಅಲ್ಲದೆ, ನಿಮ್ಮ ವರ್ತನದಿಂದ ನಮ್ಮ ಸಂಸ್ಥಾನದವರು ಷಾಹಜಿ ರಾಜರಿಗೆ ತೊಂದರೆ ಮಾಡಿದರು. ಹಾಗೆ ಮಾಡಿದ ತೊಂದರೆಯನ್ನು ನೀವು ಮನಸ್ಸಿಗೆ ತಾರದೆ ನಮ್ಮ ಬಿನ್ನಪ ವನ್ನು ಗೌರವಿಸಿ ಸಕಾಲಕ್ಕೆ ಸಹಾಯ ಮಾಡಿ ದಿಗಂತ ವಿಶ್ರಾಂತ ಕೀರ್ತಿಯನ್ನು ಪಡೆದಿರಿ."

ಈ ಕಾಗದವನ್ನೂ ವಸ್ತ್ರಾಭರಣಗಳನ್ನೂ ಆನೆ ಕುದುರೆಗಳನ್ನೂ ಕಾಣಿಕೆಯನ್ನಾಗಿ ಸುಲ್ತಾನನೂ ಖಾನನೂ ದೂತನ ಮೂಲಕ ಮಹಾ ರಾಜನಿಗೆ ಕೊಟ್ಟು ಕಳುಹಿಸಿದರು. ಅದಕ್ಕುತ್ತರವಾಗಿ ಮಹಾ ರಾಜನು—

"ನಾನು ತಮ್ಮ ರಾಷ್ಟ್ರದ ಹಲವು ನಾಡುಗಳನ್ನು ತೆಗೆದು ಕೊಂಡಿರುವುದೇನೋ ಸತ್ಯ. ಆದರೆ ಅದಕ್ಕೆ ನಮ್ಮ ತೀರ್ಥರೂಪರು ಒಳಗಾಗಿರಲಿಲ್ಲವೆಂಬ ಸಂಗತಿ ತಮಗೆ ಗೊತ್ತಿರಬಹುದು. ಆದುದ ರಿಂದಲೆ ತಮ್ಮ ಸಂಸ್ಥಾನದವರು ಅವರಿಗೆ ಜಹಗೀರನ್ನು ಕೊಟ್ಟು ಅವರ ಜೀವಿತ ಕಾಲದಲ್ಲಿ ಅದನ್ನು ಅವರಿಗೆ ನಡೆಯಿಸಿದುದಲ್ಲದೆ ಅವರ ತರು ವಾಯ ದೊಡ್ಡ ಮನಸ್ಸು ಮಾಡಿ ಅವರ ಎರಡನೆಯ ಮಗನಿಗೂ ನಡೆಯಿಸುತ್ತಿದ್ದೀರಿ. ಈ ತೆರದಲ್ಲಿ ನಮ್ಮ ಕುಟುಂಬಕ್ಕೆ ತಮ್ಮ ಸಂಸ್ಥಾನ ದಿಂದ ಮಹೋಪಕಾರವಾಗಿರುತ್ತದೆ. ನಾನು ತಮ್ಮ ಆಶ್ರಯ ಬಲ ದಿಂದ ಈ ವರೆಗೂ ವೃದ್ಧಿಗೆ ಬಂದಿದ್ದೇನೆ. ನಾನು ಸಂಪಾದಿಸಿರುವ

ಅಧಿಕಾರವೂ ಸೇರಿಸಿರುವ ಸೇನೆಯೂ ತಮಗೆ ಲೇಶವಾದರೂ ಪ್ರಯೋಜನವಾದಲ್ಲಿ ನಾನು ಕೃತಾರ್ಥನಾಗುವೆನು. ತಾವು ಬಲಾಧಿಕರಾಗಿದ್ದಾಗ ದಿಗ್ವಿಜಯವನ್ನು ಪಡೆದಿರಿ. ನನ್ನ ಕೈಯಲ್ಲಾದುದನ್ನು ನಾನೂ ಮಾಡಿದೆನು. ಮುಂದೆ ಕಷ್ಟಕಾಲದಲ್ಲಿ ನನ್ನ ಸಹಾಯ ಬೇಕಾದರೆ ತಾವು ಅವಶ್ಯವಾಗಿ ಬರೆಯಬಹುದು; ಅನ್ಯಥಾ ಭಾವಿಸಕೆಲಸವಿಲ್ಲ'' ಎಂದು ಬರೆಯಿಸಿ ರಾಜ ಮರ್ಯಾದೆಗಳೊಂದಿಗೆ ಪತ್ರವನ್ನು ಕಳುಹಿಸಿದನು.

ಶಿವಾಜಿಗೂ ಬಿಜಾಪುರದವರಿಗೂ ನಡೆದ ಒಡಂಬಡಿಕೆಯ ಮೇರೆಗೆ ವೆಂಕೋಜಿಯು ಶಿವಾಜಿಗೆ ಅಂಕಿತನಾಗಿ ಅವನ ಆಶ್ರಿತನಾದನು. ಅಂದಿನಿಂದ ಅವನು ತನ್ನ ಸ್ವಾತಂತ್ರ್ಯಕ್ಕೆ ಲೋಪ ಬಂದಿತೆಂದು ಮರುಗುತ್ತ, ರಘುನಾಥ ಪಂತನು ಕಾರ್ಯಾರ್ಥವಾಗಿ ಹೋದರೂ ಭೇಟಿ ಕೊಡದೆಯೂ, ರಾಜ್ಯ ಕಾರ್ಯಗಳನ್ನು ಮಾಡದೆಯೂ ಬೈರಾಗಿಯಂತಾಡುತ್ತಿದ್ದನು. ರಘುನಾಥ ಪಂತನು ತನ್ನ ಯಜಮಾನನ ಅವಸ್ಥೆಯನ್ನು ಲೇಖನ ಮೂಲಕವಾಗಿ ಶಿವಾಜಿಗೆ ತಿಳಿಸಲು, ಅವನು ನೊಂದು ತಮ್ಮನಿಗೆ ಇಂತೆಂದು ಉಪದೇಶ ಗರ್ಭಿತವಾದ ಒಂದು ಕಾಗದವನ್ನು ಬರೆಯಿಸಿದನು:—

''ರಘುನಾಥ ಪಂತರ ಬರೆಹದಿಂದ ನನಗೆ ತಿಳಿದು ಬರುವುದೇನೆಂದರೆ, ನೀವು ಯಾವಾಗಲೂ ಶೋಕಾಕುಲರಾಗಿ ದೇಹ ಪೋಷಣೆಗೂ ಗಮನ ಕೊಡದೆ ಹಬ್ಬಗಳೇ ಮೊದಲಾದ ಶುಭ ಕಾರ್ಯಗಳನ್ನೂ ಮಾಡದೆ ಇರುತ್ತೀರಿ. ಸೈನಿಕರು ಕೆಲಸ ಮಾಡದೆ ತೆಪ್ಪಗಿರುವರು. ನೀವು ರಾಜ ಕಾರ್ಯಗಳಲ್ಲಿ ಪ್ರವೇಶ ಮಾಡದೆ ಉದಾಸೀನರಾಗಿ ಯಾವ ಯೋಚನೆಯನ್ನೂ ಹಚ್ಚಿಕೊಳ್ಳದೆ ಬೈರಾಗಿಗಳಾಗಿ ಕಾಲಹರಣ ಮಾಡುತ್ತಿರುತ್ತೀರಿ. ನಮ್ಮ ತೀರ್ಥರೂಪರು ಧೈರ್ಯೋತ್ಸಾಹಗಳನ್ನು ಬಿಡದೆ, ಬಂದ ಕಷ್ಟಗಳನ್ನು ಹೇಗೆ ನಿವಾರಣೆ ಮಾಡಿಕೊಂಡರು? ಮಹಾ ಕಾರ್ಯಗಳನ್ನು ಹೇಗೆ ನಿರ್ವಹಿಸಿದರು? ಅಪಾಯಗಳಿಂದ ಹೇಗೆ ಪಾರಾದರು? ಖ್ಯಾತಿಯನ್ನು ಗಳಿಸಿ ಅದನ್ನು ಕಡೆಯವರೆಗೂ ಹೇಗೆ ಕಾಪಾಡಿದರು? ಎಂಬೀ ವಿಷಯಗಳು ದೃಷ್ಟಾಂತವಾಗಿ

ನಿಮ್ಮ ಕಣ್ಣ ಮುಂದಿದ್ದರೂ ನೀವು ಹೀಗಿರುವುದು ನನಗೆ ಪರಮಾಶ್ಚರ್ಯಕರವಾಗಿದೆ. ನೀವು ಅವರ ಸತ್ಸಹವಾಸದಲ್ಲೇ ಇದ್ದು ಅವರ ಕೆಲಸಗಳೆಲ್ಲವನ್ನೂ ಕಣ್ಣಾರೆ ಕಂಡು ಅವರ ಪ್ರಜ್ಞೆಯನ್ನೂ ಸಾಮರ್ಥ್ಯವನ್ನೂ ಬಲ್ಲವರಾಗಿದ್ದುದರಿಂದ ಅವರ ಸುಗುಣಗಳನ್ನು ಕಲಿಯುವುದಕ್ಕೆ ಬೇಕಾದಷ್ಟು ಅವಕಾಶವಿದ್ದಿತು. ನಾನೂ ಸಂದರ್ಭಾನುಸಾರವಾಗಿ ಆತ್ಮರಕ್ಷಣೆ ಮಾಡಿಕೊಂಡು ಸ್ವರಾಜ್ಯ ಸ್ಥಾಪನೆ ಮಾಡಿದೆನೆಂಬುದು ನೀವು ಕಾಣದ ಸಂಗತಿಯಲ್ಲ. ಅನುಕೂಲ ಸಮಯವು ದೊರೆತಿರುವಲ್ಲಿ ನೀವು ಲೋಕ ವ್ಯವಹಾರವನ್ನು ತೊರೆದು ವೈರಾಗಿಗಳಾಗುವುದು ಸರಿಯೆ? ನಿಮ್ಮ ಕಾರ್ಯಗಳೆಲ್ಲವನ್ನೂ ಎರಡನೆಯವರಿಗೊಪ್ಪಿಸಿ ಅವರು ನಿಮ್ಮ ಸಂಸ್ಥಾನವನ್ನು ಕವಳಿಸಲವಕಾಶ ಕೊಡುವುದು ಉಚಿತವೆ? ನೀವು ನಿಮ್ಮ ಅಧಿಕಾರವನ್ನು ನೀಗಿ ಆರೋಗ್ಯವನ್ನು ಕೆಡಿಸಿಕೊಳ್ಳುವುದು ವಿವೇಕವೆ? ಇದೇನು ಬುದ್ಧಿ? ಇದರಿಂದ ಕಡೆಗೇನಾಗುವುದೊ ಯಾರು ಬಲ್ಲರು? ನಾನು ನಿಮಗೆ ಆಪ್ತನೆಂದು ನಂಬಿರಿ. ನಿಮ್ಮ ಯೋಗಕ್ಷೇಮವು ನನ್ನ ಕಾರ್ಯವಾಗಿರಲಿ. ನಿಮಗೆ ನನ್ನ ಭಯವು ಬೇಡ. ಮುಂದೆ ಹೀಗಿರಬೇಡಿರಿ; ವಿರಕ್ತರಾಗಬೇಡಿರಿ; ಸುಖವಾಗಿ ಬದುಕಿರಿ. ವ್ರತಗಳು, ಉದ್ಯಾಪನೆಗಳು, ಹಬ್ಬಗಳು ಇತ್ಯಾದಿ ಕರ್ತವ್ಯಗಳನ್ನು ಕ್ರಮವಾಗಿ ಆಚರಿಸುತ್ತ, ನಿಮ್ಮ ದೇಹ ಪೋಷಣೆಯನ್ನು ಉಪೇಕ್ಷೆ ಮಾಡದೆ, ನಿಮ್ಮ ಉದ್ಯೋಗಸ್ಥರು ಅವರವರ ಕೆಲಸಗಳನ್ನು ಸರಿಯಾಗಿ ನಡೆಯಿಸುವ ಹಾಗೆ ನೋಡಿಕೊಂಡು, ನಿಮ್ಮ ಸೈನಿಕರನ್ನು ಸುಶಿಕ್ಷಿತರನ್ನಾಗಿಯೂ ವಿಧೇಯರನ್ನಾಗಿಯೂ ಇಡಿರಿ. ಗುರುತರ ಕಾರ್ಯಗಳಿಗೆ ಮನಸ್ಸು ಕೊಟ್ಟು ನೀವು ಏಳಿಗೆಗೆ ಬಂದು ಕೀರ್ತಿಯನ್ನು ಸಂಪಾದಿಸಿದಲ್ಲಿ ನನಗೆ ಪರಮ ಸಂತೋಷ. ನಿಮ್ಮ ಹತ್ತಿರ ರಘುನಾಥ ಪಂತರು ಇರುವರು. ಅವರು ನಿಮಗೆ ಪರಕೀಯರಲ್ಲ. ಯಾವ ಕಾರ್ಯವನ್ನು ಮಾಡಬೇಕಾದರೂ ಅವರನ್ನು ಕೇಳಿದರೆ ನಿಮಗೆ ಸರಿಯಾದ ಆಲೋಚನೆಯನ್ನು ಹೇಳುವರು. ಅವರು ನನ್ನನ್ನು ಕಾಣುವಂತೆಯೇ ನಿಮ್ಮನ್ನೂ ಕಾಣುವರು. ನಾನು ಅವರನ್ನು ನಂಬುತ್ತೇನೆ; ನೀವೂ ನಂಬಿರಿ; ಅವರನ್ನು ಬಿಡಬೇಡಿರಿ. ನೀವಿಬ್ಬರೂ

ಅನ್ಯೋನ್ಯರಾಗಿದ್ದಲ್ಲಿ ಅದರಿಂದ ನಿಮಗೆ ಖ್ಯಾತಿ ಬರುವುದು. ಹೆಚ್ಚು ಮಾತೇಕೆ? ಆಲಸ್ಯಕ್ಕೆ ಎಡೆಗೊಡಬೇಡಿರಿ. ಸಮಯ ಬಂದಲ್ಲಿ ಬಿಡದೆ ನಿಮ್ಮ ದಂಡಿನಿಂದಾಗತಕ್ಕ ಪ್ರಯೋಜನವನ್ನು ಪಡೆಯಿರಿ. ಇದು ನಿಮಗೆ ಪರಾಕ್ರಮವನ್ನು ತೋರಿಸತಕ್ಕ ವಯಸ್ಸು; ವೈರಾಗ್ಯವು ವಾರ್ಧಕ್ಯಕ್ಕೆ ಇರಲಿ. ಎಚ್ಚರಗೊಳ್ಳಿರಿ; ಅಲಸತೆಯನ್ನು ಬಿಟ್ಟು ಕಾರ್ಯದ ಮೇಲೆ ಹೊರಡಿರಿ; ನಿಮ್ಮ ಸಾಮರ್ಥ್ಯವನ್ನು ತೋರಿಸಿರಿ; ನಾನು ನೋಡಿ ಸಂತೋಷಪಡುವೆನು. ನೀವು ತಿಳಿದವರು, ಇನ್ನು ಹೆಚ್ಚಾಗಿ ಬರೆಯುವುದೇನಿದೆ?''

ಇಂತೆಂದು ಶಿವಾಜಿ ತಮ್ಮನಿಗೆ ಬುದ್ಧಿವಾದವನ್ನು ಹೇಳಿ ಪಿತ್ರಾರ್ಜಿತವೆಲ್ಲವನ್ನೂ ಅವನಿಗೇ ಬಿಟ್ಟುಬಿಟ್ಟು, ಅವನು ರಾಜ್ಯಕಾರ್ಯಗಳನ್ನು ವಹಿಸಿ ಅದರಲ್ಲಿ ಆಸಕ್ತನಾಗಿರುವಂತೆ ಮಾಡಿದನು.

ಶಿವಾಜಿಯ ಅಂತಿಮ ಕಾಲವು ಸಮೀಪಿಸಿತು. ಅದು ಮನಸ್ಸಿಗೆ ಹೊಳೆಯಲು, ಅವನು ರಾಮದಾಸ ಸ್ವಾಮಿಯ ದರ್ಶನಕ್ಕೆ ಹೋಗಿ ಸ್ವಾಮಿಯೊಡನೆ ತನ್ನ ಗೃಹಕೃತ್ಯವೆಲ್ಲವನ್ನೂ ಹೇಳಿಕೊಂಡು ರಾಜ್ಯದ ಭವಿಷ್ಯವನ್ನು ಕುರಿತು ತನಗಿದ್ದ ಚಿಂತೆಯನ್ನರುಹಿ, ತಾನು ಅಜ್ಞಾನವಶಾತ್ ಮಾಡಿದ ಅಪರಾಧಗಳನ್ನು ಮನ್ನಿಸಿರೆಂದು ಬೇಡಿ, ತಮ್ಮಿಬ್ಬರ ಸಮಾಗಮಕ್ಕೆ ಅದೇ ಕಡೆಯೆಂದು ಹೇಳಿದನು. ಆ ಮಾತನ್ನು ಕೇಳಿ ರಾಮದಾಸನು, ''ಅದೇಕೆ ಹೀಗೆ ಹೇಳುತ್ತೀರಿ? ನಾನು ನಿಮಗೆ ಉಪದೇಶ ಮಾಡಿದುದಕ್ಕೆ ಇದೇ ಫಲವೊ?'' ಎಂದು ಕೇಳಿದುದಕ್ಕೆ ಮಹಾರಾಜನು ಸುಮ್ಮನಿದ್ದು ಗುರುವಿಗೆ ನಮಸ್ಕಾರ ಮಾಡಿ ಹಿಂದಿರುಗಿದನು.

೧೬೮೦ರಲ್ಲಿ ಶಿವಾಜಿಯ ಮೊಣಕಾಲಿನ ಕೀಲು ಬಾತುಕೊಂಡಿತು; ಅಲ್ಲದೆ, ಅವನಿಗೆ ಜ್ವರವೂ ಕಾಣಿಸಿಕೊಂಡಿತು. ಅವನು ಈ ಸ್ಥಿತಿಯಲ್ಲಿರುವಾಗ ತಾನು ಯಾವಜ್ಜೀವವೂ ಪ್ರಯಾಸಪಟ್ಟು ಸ್ಥಾಪಿಸಿದ ರಾಜ್ಯವು ಏನಾಗುವುದೊ, ಯಾರ ಪಾಲಾಗುವುದೊ ಎಂದು ಹಾಸಿಗೆಯಲ್ಲಿ ಮಲಗಿ ಚಿಂತಿಸುತ್ತ ತನ್ನ ಮುಖ್ಯಾಧಿಕಾರಿಗಳನ್ನು ಕರೆಯಿಸಿ ತನ್ನ ಮನೋಗತ ಭಾವವನ್ನು ಹೀಗೆಂದು ಅವರಿಗೆ ತಿಳಿಸಿದನು:—'' ಇಬ್ಬರು

ಮಕ್ಕಳಲ್ಲಿ ಸಾಂಬಾಜಿ ದೊಡ್ಡವನು, ಸಮರ್ಥನು; ಆದರೆ ದುಷ್ಟನು, ವಿಲಾಸ ಪ್ರಿಯನು, ಚಪಲ ಚಿತ್ತನು, ದೂರ ದೃಷ್ಟಿಯಿಲ್ಲದವನು. ಅವನು ದೊಡ್ಡವನೆಂದು ಸೇನಾನಾಯಕರೂ ಸೈನಿಕರೂ ಅವನ ಪಕ್ಷವನ್ನು ಸೇರುವರು. ಆದರೂ ರಾಜ್ಯವು ಅವನ ಕೈಗೆ ಸಿಕ್ಕಿದರೆ ಹಾಳಾಗುವು ದೇನೊ ನಿಶ್ಚಯ. ಅವನು ಪದವಿಗೆ ಬರುತ್ತಲೆ ಘೋರ ವಿಪ್ಲವ ವುಂಟಾಗುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಹಿಂದೂಗಳಲ್ಲಿ ಬದ್ಧ ವೈರವುಳ್ಳ ಅವರಂಗಜೇಬನು ಸಮಯ ಸಿಕ್ಕಿದರೆ ಸಾಕೆಂದು ಕಾಯು ತ್ತಿರುವನು. ಅವನ ವಿಶ್ವಾಸ ಘಾತುಕತೆಗೆ ಸಾಂಬಾಜಿಯೇನೊ ಗುರಿಯಾಗಿ ಅವನಿಂದಲೇ ಹತನಾಗುವನು. ಗೋಲ್ಕೊಂಡ, ಬಿಜಾಪುರ, ರಾಯಗಡ ಮೊದಲಾದುವು ಮೊಗಲರ ಕೈಸೇರುವುವು. ರಾಜಾರಾಮ ನಾದರೊ ಇನ್ನೂ ಹುಡುಗನು, ಅರಿಯದವನು; ಆದರೆ ದೊಡ್ಡ ದೊಡ್ಡ ಮನೆತನದವರೂ ಮಂತ್ರಿಗಳೂ ಅವನನ್ನು ಪ್ರೀತಿಸುವರು; ಅವನು ಬದುಕಿದ್ದರೆ ರಾಜ್ಯವನ್ನಾಳಲು ಸಮರ್ಥನಾಗುವನು; ಅಲ್ಲದೆ, ಅನ್ಯಾಕ್ರಾಂತವಾದ ರಾಜ್ಯವನ್ನು ಮತ್ತೆ ಸಂಪಾದಿಸಬಲ್ಲನು. ರಾಜ ಪುರುಷರೆಲ್ಲರೂ ಒಕ್ಕಟ್ಟಾಗಿ ರಾಜಾರಾಮನಿಗೆ ಸಹಾಯ ಮಾಡಿದ ಪಕ್ಷದಲ್ಲಿ ಅನೇಕ ಸಾಂಬಾಜಿಗಳೂ ಅವರಂಗಜೇಬರೂ ಇದ್ದರೂ ಭಯವಿಲ್ಲ''. ಈ ಬಗೆಯಲ್ಲಿ ಶಿವಾಜಿಯು ತನ್ನ ಪಾರ್ಶ್ವದಲ್ಲಿದ್ದವರಿಗೆ ಧೈರ್ಯ ಹೇಳಿದನು.

ಶಿವಾಜಿಯಾಡಿದ ಮಾತುಗಳನ್ನು ಕೇಳಿ ಅಲ್ಲಿದ್ದವರೆಲ್ಲರೂ ಕಣ್ಣೀರ ಸುರಿಸುತ್ತ ಸ್ತಂಭದಂತೆ ನಿಂತರು. ಆ ಸಮಯದಲ್ಲಿ ಮೋರೋ ಪಂತನೂ ಹಂಬೀರರಾಯನೂ ಶಿವಾಜಿಯ ಹತ್ತಿರ ಇರಲಿಲ್ಲ; ಅವರು ದೂರದೇಶದಲ್ಲಿದ್ದರು. ಶಿವಾಜಿಯು ಸಂಸಾರ ಚಿಂತೆಯನ್ನು ಪರಿತ್ಯಜಿಸಿ ಗಂಗಾನದಿಯಿಂದ ತಂದ ತೀರ್ಥದಲ್ಲಿ ಸ್ನಾನಮಾಡಿ ರುದ್ರಾಕ್ಷ ಮಾಲೆಯನ್ನು ಧರಿಸಿ ವಿಷ್ಣು ಸಹಸ್ರ ನಾಮವನ್ನೂ ಭಗವದ್ಗೀತೆಯನ್ನೂ ತದೇಕ ಧ್ಯಾನದಿಂದ ಕಡೆಯ ವರೆಗೂ ಕೇಳು ತ್ತಿದ್ದನು. ಆರೇಳು ದಿವಸಗಳು ಉತ್ಕಟ ರೋಗವನ್ನನುಭವಿಸಿದರೂ ಅವನಿಗೆ ಇಂದ್ರಿಯ ಪಾಟವವು ತಪ್ಪಲಿಲ್ಲ. ಹೀಗೆ ಕಡೆಯ ವರೆಗೂ

ಪ್ರಜ್ಞೆಯುಳ್ಳವನಾಗಿದ್ದನು, ಪುಣ್ಯಶ್ಲೋಕನಾದ ಶಿವಾಜಿಯು ರೌದ್ರಿ ನಾಮ ಸಂವತ್ಸರದ ಚೈತ್ರ ಶುದ್ಧ ಪೂರ್ಣಿಮಾ ಆದಿತ್ಯವಾರ ದಿವಿ ಎರಡು ಗಂಟೆಯಲ್ಲಿ ಪಾರ್ಥಿವ ಶರೀರವನ್ನು ಪರಿತ್ಯಜಿಸಿದನು.

---

## ಹದಿನೇಳನೆಯ ಪ್ರಕರಣ

---

# ರಾಜ್ಯಭಾರ ಕ್ರಮ.

ರಾಜ್ಯೋಪಾರ್ಜನೆಗಿಂತ ರಾಜ್ಯ ರಕ್ಷಣೆಯೂ ಪ್ರಜಾ ಪಾಲನೆಯೂ ಕ್ಲೇಶಕರವು. ಯುದ್ಧ ಕಾರ್ಯದಲ್ಲಿ ಶಿವಾಜಿ ಪ್ರಚಂಡ ವಿಕ್ರಮ, ಧೈರ್ಯ, ಕ್ಲೇಶ ಸಹಿಷ್ಣುತೆ, ಅಧ್ಯವಸಾಯ, ಪ್ರತ್ಯುತ್ಪನ್ನ ಬುದ್ಧಿ, ಇತ್ಯಾದಿ ವೀರೋಚಿತ ಗುಣಗಳನ್ನು ಪ್ರಕಾಶಗೊಳಿಸಿ ಪ್ರಚಂಡ ಯೋಧನೆಂದು ಖ್ಯಾತಿಗೊಂಡನು. ಈ ಪ್ರಕರಣದಲ್ಲಿ ಆ ಭೂಪನ ರಾಜ್ಯ ಶಾಸನ ಶಕ್ತಿಯನ್ನೂ, ಪ್ರಜಾ ಪಾಲನೆಯ ವಿಷಯದಲ್ಲಿ ಅವನು ಮಾಡಿದ ಕಾರ್ಯಗಳನ್ನೂ ಕುರಿತು ಸಂಕ್ಷೇಪವಾಗಿ ವಿಚಾರ ಮಾಡೋಣ.

ಶಿವಾಜಿ ತನ್ನ ಭುಜ ಬಲದಿಂದ ಆರ್ಜಿಸಿದ ರಾಜ್ಯವು ಬಹು ದೂರ ವಿಸ್ತರಿಸಿದ್ದಿತು. ಅವನು ತನ್ನ ರಾಷ್ಟ್ರವನ್ನು ಪ್ರಾಂತಗಳನ್ನಾಗಿ ವಿಭಾಗಿಸಿದನು. ಸಾಕ್ಷಾತ್ತಾಗಿ ಅವನ ಪ್ರಭುತ್ವಕ್ಕೊಳಪಟ್ಟು ಸ್ವರಾಜ್ಯವೆನಿಸಿದ ಪ್ರದೇಶವು ಒಂಬತ್ತು ಪ್ರಾಂತಗಳಾಗಿ ವಿಭಾಗವಾಗಿದ್ದಿತು. ಅವು ಯಾವುವೆಂದರೆ:—

(೧) ಈಗ ಮಾವಳ, ಸಾಸವಾಡ, ಜುನ್ನಾರ, ಖೇಡ ಎಂದೆನಿಸಿರುವ ತಾಲ್ಲೂಕುಗಳಿಂದ ಕೂಡಿದ ಮಾವಳ ಪ್ರಾಂತ. ಇದಕ್ಕೆ ಹದಿನೆಂಟು ದುರ್ಗಗಳು ಸೇರಿದ್ದುವು.

(೨) ಈಗಿನ ಸತಾರ ಜಿಲ್ಲೆಯ ಪಶ್ಚಿಮ ಭಾಗಕ್ಕೆ ಸರಿಹೋಗುವ ವಾಯಿ, ಸತಾರ, ಕರಾಡ ಎಂಬ ಪ್ರದೇಶಗಳಿಂದ ಕೂಡಿದ ಪ್ರಾಂತ. ಇದಕ್ಕೆ ಹದಿನೈದು ದುರ್ಗಗಳು ಸೇರಿದ್ದುವು.

(೩) ಕೊಲ್ಹಾಪುರದ ಪಶ್ಚಿಮ ಭಾಗಕ್ಕೆ ಸರಿಹೋಗುವ ಪನ್ಹಾಲ ಪ್ರಾಂತ. ಇದರ ರಕ್ಷಣೆಗಾಗಿ ಹದಿಮೂರು ದುರ್ಗಗಳಿದ್ದುವು.

(೪) ಈಗಿನ ರತ್ನಗಿರಿಗೆ ಸರಿಹೋಗುವ ದಕ್ಷಿಣ ಕೊಂಕಣ ಪ್ರಾಂತ. ಗಿರಿ ದುರ್ಗ ಜಲ ದುರ್ಗಗಳೆರಡೂ ಕೂಡಿ ಇದಕ್ಕೆ ಐವತ್ತೆಂಟು ದುರ್ಗಗಳು ಸೇರಿದ್ದುವು.

(೫) ಉತ್ತರ ಕೊಂಕಣ ಜಿಲ್ಲೆಗೆ ಸರಿಹೋಗುವ ರಾಣಾ ಪ್ರಾಂತ. ಇದಕ್ಕೆ ಸೇರಿದ ದುರ್ಗಗಳು ಹನ್ನೆರಡು.

(೬–೭) ನಾಸಿಕ ಜಿಲ್ಲೆಯ ಪಶ್ಚಿಮ ಭಾಗಕ್ಕೆ ಸರಿಹೋಗುವ ತ್ರಿಯಂಬಕ, ಬಾಗಲಾಣ ಪ್ರಾಂತಗಳು. ಈ ಪ್ರಾಂತಗಳಲ್ಲಿ ಅರುವತ್ತೆರಡು ದುರ್ಗಗಳಿದ್ದುವು.

ಈ ಪ್ರಾಂತಗಳೂ, ಶಿವಾಜಿಗೆ ಪಿತ್ರಾರ್ಜಿತವಾಗಿ ಬಂದ ಪುಣೆ ಮತ್ತು ಅದರೊತ್ತಿನ ಜಹಗೀರಿನ ನಾಡೂ ಶಿವಾಜಿಯ ಸ್ವರಾಜ್ಯವೆಂದು ಪ್ರಸಿದ್ಧವಾಗಿದ್ದುವು.

ಇದಲ್ಲದೆ, ಶಿವಾಜಿ ಠಾಣೆಗಳನ್ನಿಟ್ಟಿದ್ದ ಮೊಗಲಾಯಿ, ಅಥವಾ ಪರ ರಾಜ್ಯಗಳಲ್ಲಿಯ, ಪ್ರಾಂತಗಳು ಬೇರೆಯಿದ್ದುವು. ಅವು ಯಾವುವೆಂದರೆ: —

(೧) ಧಾರವಾಡ ಜಿಲ್ಲೆಯ ದಕ್ಷಿಣ ಭಾಗಕ್ಕೆ ಸಮನಾದ ವನಗಡ ಮತ್ತು ಅದಕ್ಕೆ ಸೇರಿದ ಇಪ್ಪತ್ತೆರಡು ದುರ್ಗಗಳು.

(೨–೪) ಮೈಸೂರು ಸೀಮೆಯಲ್ಲಿ ಜದನೂರು, ಕೋಲಾರ, ಶ್ರೀರಂಗಪಟ್ಟಣ ಪ್ರಾಂತಗಳು ಮತ್ತು ಅವುಗಳಿಗೆ ಸೇರಿದ ಹದಿನೆಂಟು ದುರ್ಗಗಳು.

(೫) ಕೃಷ್ಣಾನದಿಗೆ ದಕ್ಷಿಣದಲ್ಲಿರುವ ಕಡಪ, ಕರ್ನೂಲು, ಬಳ್ಳಾರಿ, ಅನಂತಪುರ—ಇವುಗಳಿಂದ ಕೂಡಿರುವ ಕರ್ನಾಟಕ ಪ್ರಾಂತ ಮತ್ತು ಅದಕ್ಕೆ ಸೇರಿದ ಹದಿನೆಂಟು ದುರ್ಗಗಳು.

(೬) ಈಗ ಆರ್ಕಾಟು ಜಿಲ್ಲೆಗಳೆನಿಸಿರುವ ವೇಲೂರು ಪ್ರಾಂತ; ಇದಕ್ಕೆ ಸೇರಿದ ದುರ್ಗಗಳು ಇಪ್ಪತ್ತೈದು.

(೭) ತಂಜಾವೂರು ಪ್ರಾಂತ ಮತ್ತು ಅದಕ್ಕೆ ಸೇರಿದ ಆರು ದುರ್ಗಗಳು.

ಈ ಪರ ರಾಜ್ಯಗಳಲ್ಲಿ ಶಿವಾಜಿ ಚೌತ್ಥಾಯಿಯನ್ನೂ ಸರ್ದೇಶಮುಖಿಯನ್ನೂ ಎತ್ತುತ್ತಿದ್ದನು; ಆದರೆ ಅವುಗಳ ಒಳ ಆಡಳಿತಗಳಲ್ಲಿ ಪ್ರವೇಶಿಸುತ್ತಿರಲಿಲ್ಲ. ತಂಜಾವೂರಂತೂ ಅವನ ಭಿನ್ನೋದರನಾದ

ವೆಂಕೋಜಿಯ ಆಧಿಪತ್ಯಕ್ಕೊಳಪಟ್ಟಿದ್ದಿತು. ಸಹ್ಯಾದ್ರಿ ಪರ್ವತ ಶ್ರೇಣಿಯಲ್ಲಿ ದುರ್ಗಗಳು ತುಂಬಿದ್ದುವು.

ಶಿವಾಜಿಯು ತಾನು ಸಂಪಾದಿಸಿದ ರಾಜ್ಯರಕ್ಷಣೆಗಾಗಿ ಮಾಡಿದ ಉಪಾಯಗಳಲ್ಲಿ ದುರ್ಗನಿರ್ಮಾಣವು ಮುಖ್ಯವಾದುದು. ದುರ್ಗಗಳನ್ನು ಕಟ್ಟಿಸುವುದರಲ್ಲಿಯೂ ಅವುಗಳನ್ನು ಜೀರ್ಣೋದ್ಧಾರ ಮಾಡುವುದರಲ್ಲಿಯೂ ಅವನು ಯಥೇಚ್ಛವಾಗಿ ದ್ರವ್ಯವನ್ನು ವೆಚ್ಚಮಾಡಿದನು. ಅವನ ವಶದಲ್ಲಿ ಹಾಗೂ ಹೀಗೂ ಇನ್ನೂರೆಂಬತ್ತು ದುರ್ಗಗಳಿದ್ದುವು. ಆ ದುರ್ಗಗಳ ಬಲದಿಂದ ಅವನು ಆತ್ಮ ರಕ್ಷಣೆ, ಸ್ವದೇಶ ರಕ್ಷಣೆ, ಶತ್ರುನಿಗ್ರಹ ಮೊದಲಾದ ಕಾರ್ಯಗಳನ್ನು ಮಾಡಲು ಸಮರ್ಥನಾಗಿದ್ದನು. ಶಿವನೇರು ದುರ್ಗದೊಳಗೆ ಜೀಜಾಬಾಯಿ ಭಾವಿ ಛತ್ರಪತಿಗೆ ತೊಟ್ಟಿಲಿಟ್ಟಳು; ತೋರಣ ದುರ್ಗದಲ್ಲಿ ಮಹಾರಾಷ್ಟ್ರರ ದಿಗ್ವಿಜಯಕ್ಕೆ ನಾಂದೀ ಕಾರ್ಯವು ನಡೆಯಿತು; ರಾಂಗಣ ದುರ್ಗವು ಬಾಜೀ ಪ್ರಭುವಿನ ಪ್ರಭು ಪರಾಯಣತೆಯಿಂದ ಪಾವನವಾದ ಕ್ಷೇತ್ರವು; ಪುರಂದರವು ಬಾಜೀ ಪ್ರಭುವಿನ ಶೌರ್ಯ ರಂಗವು; ಸಿಂಹಗಡವು ತಾನಾಜಿ ಮಲಸೂರೆಯ ಪವಿತ್ರ ರಕ್ತದಿಂದ ಪ್ರಕ್ಷಾಳಿತವಾದ ಪುಣ್ಯಭೂಮಿ; ಪ್ರತಾಪಗಡವು ಶಿವಾಜಿಯ ಶತ್ರುನಿಧನ ಸ್ಥಾನವು; ಪನ್ಹಾಲ, ಸಾಲೇರಿ, ಮಾಹೂಲಿ ಮೊದಲಾದುವು ಮಾವಳಿಗಳ ಕೀರ್ತಿಯನ್ನು ಸೂರೆಗೊಂಡ ದುರ್ಗಗಳು; ಮಾಲವಣ, ಕೊಲಾಬ ಎಂಬ ದುರ್ಗಗಳು ಮಹಾರಾಷ್ಟ್ರರು ನೌಬಲವನ್ನು ಕಟ್ಟಿದ ಸ್ಥಳಗಳು. ಇವೆಲ್ಲವೂ ಶಿವಾಜಿಯ ದುರ್ಗಗಳೊಳಗೆ ಪ್ರಸಿದ್ಧವಾದುವು. ರಾಯಗಡವು ಸರ್ವಪ್ರಧಾನ ದುರ್ಗವು.

ದುರ್ಗಕ್ಕೆ ಹವಾಲ್ದಾರನೆಂಬವನು ಮುಖ್ಯಾಧಿಕಾರಿ. ಅವನ ಕೈಯ ಕೆಳಗೆ ಕೆಲವು ಮಂದಿ ಅಧಿಕಾರಿಗಳಿರುವರು. ಠಾಣೆಯ ವಿಚಾರಣೆಯೆಲ್ಲವೂ ಹವಾಲ್ದಾರನಿಗೆ ಸೇರಿದುದು. ಹವಾಲ್ದಾರರೂ ಅವರ ಕೈಯ ಕೆಳಗಿನ ಅಧಿಕಾರಿಗಳೂ ಮರಾಠಿಯವರಾಗಿರುತ್ತಿದ್ದರು. ಇದಲ್ಲದೆ, ಕೋಟೆಕೋಟೆಗೂ ಬ್ರಾಹ್ಮಣನಾದ ಸುಬೇದಾರನೊಬ್ಬನೂ,

ಪ್ರಭು ಜಾತಿಯವನಾದ ಕಾರ್ಖಾನನೀಸನೊಬ್ಬನೂ ಇರುತ್ತಿದ್ದರು. ಸುಬೇದಾರನು ದುರ್ಗ ಮತ್ತು ಅದಕ್ಕೆ ಸೇರಿದ ಗ್ರಾಮಗಳ ಆಯ ವ್ಯಯಕ್ಕೆ ಸಂಬಂಧಪಟ್ಟ ಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಸೇನೆಗೆ ಬೇಕಾದ ಧಾನ್ಯಾದಿ ಸಕಲ ಪದಾರ್ಥಗಳನ್ನೂ ಕೂಡಿಟ್ಟು ಕಾಲ ಕಾಲಕ್ಕೆ ಒದಗಿಸುವುದು ಕಾರ್ಖಾನನೀಸನ ಕೆಲಸವು. ಒಂದೊಂದು ದುರ್ಗದಲ್ಲಿ ಸಾಧಾರಣವಾಗಿ ಆರು ವರುಷಕ್ಕಾಗುವಷ್ಟು ಪದಾರ್ಥಗಳಿರುತ್ತಿದ್ದುವು. ದಂಡಿನ ಸಂಖ್ಯೆ ದುರ್ಗದ ಮರ್ಯಾದೆಗೆ ತಕ್ಕಹಾಗಿರುತ್ತಿದ್ದಿತು. ಒಂಬತ್ತು ಮಂದಿ ಸೈನಿಕರ ಮೇಲೆ ಒಬ್ಬ ನಾಯಕನಿರುತ್ತಿದ್ದನು. ಎಲ್ಲರಿಗೂ ಅವರವರ ಉದ್ಯೋಗಕ್ಕೆ ತಕ್ಕ ಹಾಗೆ ಹಣವಾಗಿಯಾಗಲಿ ದವಸವಾಗಿಯಾಗಲಿ ಸಂಬಳಗಳು ಸಲ್ಲುತ್ತಿದ್ದುವು. ಗಿರಿದುರ್ಗದ ಆಡಳಿತವು ಈ ಬಗೆಯಾಗಿದ್ದಿತು.

ಶಿವಾಜಿಯ ಸೈನಿಕ ನಿಯಮಗಳು ಸಮಯೋಚಿತವಾಗಿಯೂ ಜನಗಳ ಶೀಲ ಸ್ವಭಾವಕ್ಕನುಗುಣವಾಗಿಯೂ ಇದ್ದುವು. ಪದಾತಿಯೇ ಶಿವಾಜಿಯ ಪ್ರಾಬಲ್ಯಕ್ಕೆ ಮುಖ್ಯ ಬಲವಾಗಿದ್ದಿತು. ಆದುದರಿಂದ ಅವನು ಅದರ ಉತ್ಕರ್ಷಕ್ಕಾಗಿ ಸರ್ವದಾ ಯತ್ನಿಸುತ್ತಿದ್ದನು; ಕಾಲ ಕ್ರಮದಲ್ಲಿ ರಾಜ್ಯವು ವೃದ್ಧಿಗೆ ಬಂದ ಹಾಗೆಲ್ಲ ಅಶ್ವಸೇನೆಯನ್ನು ವೃದ್ಧಿಗೊಳಿಸಿದನು. ಪದಾತಿಯಲ್ಲಿ ಹತ್ತು ಮಂದಿಗೊಬ್ಬ ನಾಯಕನೂ, ಇಂತಹ ಐದು ದಳಗಳಿಗೊಬ್ಬ ಹವಾಲ್ದಾರನೂ, ಎರಡು ಹವಾಲುಗಳಿಗೊಬ್ಬ ಜುಮ್ಲೆದಾರನೂ, ಹತ್ತು ಜುಮ್ಲೆಗಳಿಗೊಬ್ಬ ಹಜಾರಿಯೂ, ಏಳು ಹಜಾರಿಗಳಿಗೊಬ್ಬ ಸರ್ ನೌಬತ್ತನೂ, ಎಂದರೆ ಸೇನಾಪತಿಯೂ, ಇರುತ್ತಿದ್ದರು. ಶಿವಾಜಿಯು ಘಾಟಮಾಥವೆಂಬ ಪ್ರದೇಶದ ನಿವಾಸಿಗಳಾದ ಮಾವಳಿಗಳನ್ನೂ ಕೊಂಕಣ ದೇಶದವರಾದ ಹಟಿಕಾರಿಗಳೆಂಬವರನ್ನೂ ಕೂಡಿಸಿ ಪದಾತಿಯನ್ನು ಕಟ್ಟಿದನು. ಮಾವಳಿಗಳು ದುರ್ಗಗಳನ್ನು ಹತ್ತುವುದರಲ್ಲಿ ನಿಪುಣರು, ಹಟಿಕಾರಿಗಳು ಗುರಿಯಿಡುವುದರಲ್ಲಿ ಜಾಣರು. ಈ ಉಭಯ ಜಾತಿಯವರೂ ಕ್ಲೇಶ ಸಹಿಷ್ಣುಗಳು, ದೃಢ ಕಾಯರು, ಯುದ್ಧ ಪ್ರಿಯರು, ಸಾಹಸಿಗಳು. ಅಶ್ವ ಸೇನೆಯಲ್ಲಿ ಬಾರ್ಗೀರಿಯವರೂ ಸಿಲೇದಾರರೂ ಎಂದು

ಎರಡು ಬಗೆಯುವರಿದ್ದರು. ಬಾರ್ಗೀರರಿಗೆ ಕುದುರೆಗಳನ್ನೂ ಯುದ್ಧ ಸಾಮಗ್ರಿಗಳನ್ನೂ ಸಂಸ್ಥಾನದಿಂದ ಕೊಡುತ್ತಿದ್ದರು; ಸಿಲೇದಾರರು ಅವುಗಳನ್ನು ತಾವೇ ಕೊಳ್ಳುತ್ತಿದ್ದರು. ಅಶ್ವ ಸೇನೆಯ ವಿಭಾಗದಲ್ಲಿ ಇಪ್ಪತ್ತೈದು ಮಂದಿ ಬಾರ್ಗೀರರಿಗೆ, ಅಥವಾ ಸಿಲೇದಾರರಿಗೆ, ಒಬ್ಬ ಹವಾಲ್ದಾರನೂ, ಐದು ಹವಾಲುಗಳ ಮೇಲೆ ಒಬ್ಬ ಜುಮ್ಲೆದಾರನೂ ಹತ್ತು ಜುಮ್ಲೆಗಳ ಮೇಲೆ ಒಬ್ಬ ಹಜಾರಿಯೂ, ಐದು ಹಜಾರಿಗಳ ಮೇಲೆ ಒಬ್ಬ ಪಂಚ್ ಹಜಾರಿಯೂ ಇರುತ್ತಿದ್ದರು. ಪದಾತಿಯಲ್ಲಿದ್ದಂತೆ ಇವರೆಲ್ಲರ ಮೇಲೂ ಸರ್‌ನೌಬತ್ತನು ಪ್ರಧಾನಾಧಿಕಾರಿಯಾಗಿದ್ದನು. ಬಾರ್ಗೀರಿಯ ಒಂದು ಭಾಗವನ್ನು ಶಿವಾಜಿ ಅರಮನೆಯ ದಂಡನ್ನಾಗಿಟ್ಟಿದ್ದನು; ಅದನ್ನು ಪಾಗಾ ಎಂದೆನ್ನುತ್ತಿದ್ದರು.

ಸೇನೆಯ ಉಭಯ ವಿಭಾಗಗಳಲ್ಲಿಯೂ ಕಟ್ಟಳೆಯ ಮೇರೆಗೆ ಎಲ್ಲರಿಗೂ ಸಂಬಳಗಳು ಸಲ್ಲುತ್ತಿದ್ದುವು. ಅಶ್ವ ಸೇನೆಯಲ್ಲಿ ಪಂಚ್ ಹಜಾರಿಗೆ ವರ್ಷಕ್ಕೆ ಎರಡು ಸಾವಿರ ಹೊನ್ನುಗಳು, ಹಜಾರಿಗೆ ಸಾವಿರ ಹೊನ್ನುಗಳು, ಪದಾತಿಯಲ್ಲಿ ಹಜಾರಿಗೆ ಐನೂರು ಹೊನ್ನುಗಳು, ಈ ಮೇರೆಗೆ ಸಂಬಳಗಳು ಸಲ್ಲುತ್ತಿದ್ದುವು. ಉಳಿದವರಿಗೆ ಪದಾತಿಯಲ್ಲಿ ತಿಂಗಳಿಗೆ ಒಂಬತ್ತರಿಂದ ಮೂರು ರೂಪಾಯಿಗಳ ವರೆಗೂ, ಅಶ್ವ ಸೇನೆಯಲ್ಲಿ ಇಪ್ಪತ್ತರಿಂದ ಆರು ರೂಪಾಯಿಗಳ ವರೆಗೂ ತಾರತಮ್ಯಾನುಸಾರವಾಗಿ ಸಂಬಳಗಳು ಸಲ್ಲುತ್ತಿದ್ದುವು. ಆದರೆ ಸೈನಿಕರು ಸಂವತ್ಸರಕ್ಕೆಂಟು ತಿಂಗಳು ಸೇನೆಯ ಪೋಷಣೆಗಾಗುವಷ್ಟು ಹಣವನ್ನು ಮೊಗಲಾಯಿ ಸೀಮೆಯಲ್ಲಿ ಅಥವಾ ಪರ ರಾಜ್ಯಗಳಲ್ಲಿ ಚೌತಾಯಿಯನ್ನೂ ಸರ್ದೇಶಮುಖಿಯನ್ನೂ ಎತ್ತುವುದರಿಂದ ತರತಕ್ಕುದೆಂದು ನಿಯಮವಿದ್ದಿತು. ಪದಾತಿಯಲ್ಲೂ ಅಶ್ವಸೇನೆಯಲ್ಲೂ ಮುಖ್ಯಾಧಿಕಾರಿಗಳ ಕೈಯ ಕೆಳಗೆ ಆದಾಯ ವೆಚ್ಚಗಳ ವಿಚಾರಣೆಗೂ ಲೆಕ್ಕಗಳನ್ನಿಡುವುದಕ್ಕೂ ಬರೆವಣಿಗೆಯ ಕೆಲಸಕ್ಕೂ ದಂಡಿಗೆ ಬೇಕಾದಷ್ಟು ಧಾನ್ಯ ಮೊದಲಾದ ಸಮಸ್ತ ಪದಾರ್ಥಗಳನ್ನೂ ಒದಗಿಸಿ ಕೊಡುವುದಕ್ಕೂ ಒಬ್ಬೊಬ್ಬ ಅಧಿಕಾರಿಯೂ, ಅವನ ಕೈಯ ಕೆಳಗೆ ಕಾರಕೂನರು ಮೊದಲಾದ ಲೇಖಕರೂ ಗಣಕರೂ, ಅಲ್ಲಲ್ಲಿ ಹೋಗಿ ಸಮಾಚಾರಗಳನ್ನು

ತರುವುದಕ್ಕೂ ಕೊಡುವುದಕ್ಕೂ ಬೇಹುಕಾರರೂ ಹರಿಕಾರರೂ ಸಮಾಚಾರ ಲೇಖಕರೂ ಇರುತ್ತಿದ್ದರು.

ಕಾಲಾಳುಗಳು ಯುದ್ಧಯಾತ್ರೆಗೆ ಪಗಡಿ, ಅಂಗಿ, ಅರೆತೊಡೆ ಚಲ್ಲಣ, ದಟ್ಟಿ—ಇವುಗಳಿಂದ ಸಜ್ಜಿತರಾಗಿ ಹೋಗುತ್ತಿದ್ದರು. ಕತ್ತಿ ಗುರಾಣಿ, ತುಪಾಕಿಗಳು ಅವರ ಆಯುಧಗಳು; ಕೆಲವರು ಅಂಬು ಬಿಲ್ಲುಗಳನ್ನು ತೆಗೆದುಕೊಂಡು ಹೋಗುತ್ತಿದ್ದರು; ಅಂಬು ಬಿಲ್ಲುಗಳನ್ನು ವಿಶೇಷವಾಗಿ ರಾತ್ರಿಯ ಯುದ್ಧದಲ್ಲಿ ಉಪಯೋಗಿಸುತ್ತಿದ್ದರು. ಕಾಲಾಳುಗಳು ತಮ್ಮ ತಮ್ಮ ಆಯುಧಗಳನ್ನು ತಾವೇ ಕೊಳ್ಳುತ್ತಿದ್ದರು; ಆದರೆ ಯುದ್ಧಕಾಲದಲ್ಲಿ ಅವರಿಗೆ ಸಂಸ್ಥಾನದಿಂದ ಮದ್ದುಗುಂಡುಗಳನ್ನು ಕೊಡುತ್ತಿದ್ದರು. ರಾವುತರ ಉಡಿಗೆ ತೊಡಿಗೆಗಳು ಕಾಲಾಳುಗಳ ಉಡಿಗೆ ತೊಡಿಗೆಗಳಂತೆಯೇ ಇದ್ದುವು. ಆದರೆ ಅವರ ಚಲ್ಲಣವು ಮೊಣಕಾಲಿನ ವರೆಗೆ ಬರುತ್ತಿದ್ದಿತು. ಕತ್ತಿ, ಭಲ್ಲೆಯಗಳು ಅವರ ಆಯುಧಗಳು. ಹಲವು ಮಂದಿ ರಾವುತರು ತುಪಾಕಿಯನ್ನೂ ಹಿಡಿಯುತ್ತಿದ್ದರು. ಶಿವಾಜಿಯ ರಾವುತರು ಕುದುರೆಯ ಸವಾರಿಯಲ್ಲೂ ತಮ್ಮ ತಮ್ಮ ಆಯುಧಗಳನ್ನು ಪ್ರಯೋಗ ಮಾಡುವುದರಲ್ಲೂ ಚತುರರಾಗಿದ್ದರು. ಯುದ್ಧಯಾತ್ರೆಯಲ್ಲಿ ಸೈನಿಕರು ಶಯನ ಭೋಜನಾದಿ ಸಕಲ ಸಮಯಗಳಲ್ಲೂ ಸಜ್ಜಿತರಾಗಿರುವಂತೆ ಶಿವಾಜಿ ಕಟ್ಟುಮಾಡಿದ್ದನು.

ಸೇನೆಗಳು ಶರತ್ಕಾಲದಲ್ಲಿ ವಿಜಯ ದಶಮಿಯ ದಿವಸ ದಿಗ್ವಿಜಯಕ್ಕೆ ಹೊರಡುತ್ತಿದ್ದುವು. ದೂರ ಪ್ರದೇಶಗಳ ಆಕ್ರಮಣಕ್ಕೆ ಸಾಧಾರಣವಾಗಿ ಅಶ್ವ ಸೇನೆಯೇ ಹೋಗುತ್ತಿದ್ದಿತು. ಸೇನೆಯು ಹೊರಡುವುದಕ್ಕೆ ಮುಂಚೆ, ಆಯಾ ಪ್ರದೇಶಗಳ ಆಚಾರ ವ್ಯವಹಾರ, ವೇಷ, ಭಾಷೆ ಮೊದಲಾದುವುಗಳನ್ನು ಬಲ್ಲ ಗೂಢಚಾರರು ಹೋಗಿ ಶತ್ರುಗಳ ಸ್ಥಿತಿ, ಸಂಖ್ಯೆ, ಪ್ರದೇಶವಾಸಿಗಳ ಮನೋಗತ ಭಾವ ಮುಂತಾದುವನ್ನು ಸೂಕ್ಷ್ಮವಾಗಿ ತಿಳಿದುಕೊಂಡು ಬರುತ್ತಿದ್ದರು. ಸೈನಿಕರು ಅನವಶ್ಯಕ ಪದಾರ್ಥಗಳನ್ನು ಸಂಗಡ ತೆಗೆದುಕೊಂಡು ಹೋಗಕೂಡದು, ಹೆಂಡಿತಿ ಮಕ್ಕಳನ್ನು ಕರೆದುಕೊಂಡು

ಹೋಗಕೂಡದು, ಊರಿಂದ ಹೊರಡುವ ಸಮಯದಲ್ಲಿ ಪ್ರತಿ ಸೈನಿಕನೂ ಸಂಗಡ ತೆಗೆದುಕೊಂಡು ಹೋಗುವ ಪದಾರ್ಥಗಳ ಪಟ್ಟಿಯನ್ನು ಕೊಡತಕ್ಕದ್ದು; ಊರಿಗೆ ಬಂದ ಬಳಿಕ ಆ ಪಟ್ಟಿಯಲ್ಲಿಲ್ಲದ ಪದಾರ್ಥಗಳು ಅವನಲ್ಲಿರಕೂಡದು, ಎಂಬೀ ನಿಯಮಗಳು ಸೇನೆ ಯೊಳಗೆ ಆಚರಣೆಯಲ್ಲಿದ್ದುವು. ಯಾರದಾದರೂ ಪದಾರ್ಥವು ಹೋದರೆ, ತಕ್ಕ ಕಾರಣವಿದ್ದಲ್ಲಿ, ಸಂಸ್ಥಾನದಿಂದ ಪ್ರತಿಯಾಗಿ ಪದಾರ್ಥವನ್ನು ಕೊಡುತ್ತಿದ್ದರು.

ಯಾವುದಾದರೊಂದು ಗ್ರಾಮವನ್ನು ಸೂರೆಗೊಂಡರೆ, ಸೈನಿಕರು ತಮ್ಮ ಕೈಗೆ ಸಿಕ್ಕಿದ ಪದಾರ್ಥಗಳೊಂದನ್ನೂ ಬಿಡದೆ ಲೆಕ್ಕವಾಡಿ ತಮ್ಮ ಮೇಲಣ ಅಧಿಕಾರಿಗೆ ತಂದೊಪ್ಪಿಸತಕ್ಕದ್ದು; ಅದಕ್ಕೆ ತಪ್ಪಿದವನು ಕಠಿನ ದಂಡನೆಗೆ ಗುರಿಯಾಗುತ್ತಿದ್ದನು. ಬೇಸಾಯಗಾರರು ಯಾವ ಜಾತಿ ಯವರೇ ಆಗಲಿ ಅವರನ್ನೂ, ಹೆಂಗುಸರನ್ನೂ, ಹಸುಗಳನ್ನೂ ಸೈನಿಕರು ಯುದ್ಧಕಾಲದಲ್ಲಿ ಬಾಧಿಸಕೂಡದು; ಅವರನ್ನೆಷ್ಟು ಮಾತ್ರವೂ ಸೆರೆ ಹಿಡಿಯಕೂಡದು; ಹಾಗೆಯೇ, ಯಾವ ಜಾತಿಯವರಿಗೆ ಸೇರಿದುವೇ ಆಗಲಿ, ದೇವಸ್ಥಾನ ಮೊದಲಾದ ಪವಿತ್ರ ಮಂದಿರಗಳ ತಂಟೆಗೂ ಹೋಗ ಕೂಡದು. ಸಾರಾಯಿ, ಅಫೀಮು, ಗಾಂಜ ಮೊದಲಾದ ಮಾದಕ ದ್ರವ್ಯಗಳನ್ನು ದಂಡಿಗೆ ತರಕೂಡದು. ಸೈನಿಕರು ಧರ್ಮ ಬದ್ಧ ರಾಗಿಯೂ ಸಚ್ಚರಿತ್ರರಾಗಿಯೂ ಕರ್ತವ್ಯ ಪರಾಯಣರಾಗಿಯೂ ಇರು ವಂತೆ ಧರ್ಮೋಪದೇಶವನ್ನು ಮಾಡುವುದಕ್ಕೆ ಪ್ರತಿ ಸೇನಾ ದಳದಲ್ಲೂ ಸಂಸ್ಥಾನದಿಂದ ನಿಯಮಿತರಾದ ಶಾಸ್ತ್ರಜ್ಞ ಬ್ರಾಹ್ಮಣರು ಇರು ತ್ತಿದ್ದರು; ಅವರು ಸೈನಿಕರಿಗೆ ಉಪಾಖ್ಯಾನಗಳ ಮೂಲಕ ರಾಜ ಧರ್ಮ ಗಳನ್ನು ಬೋಧಿಸುತ್ತಿದ್ದರು. ಒಳ್ಳೆಯ ನಡತೆಗೆ ಹೊಣೆಯನ್ನು ಕೊಟ್ಟ ಹೊರತು ಶಿವಾಜಿ ಯಾರನ್ನೂ ಸೇನೆಗೆ ಸೇರಿಸುತ್ತಿರಲಿಲ್ಲ. ಈ ರೀತಿ ಯಾಗಿ ಒಬ್ಬೊಬ್ಬ ಸೈನಿಕನ ನಡತೆಗೂ ಒಬ್ಬ ಉತ್ತರವಾದಿ ಇರು ತ್ತಿದ್ದನು. ಇಷ್ಟು ನಿರ್ಬಂಧಗಳಿಗೊಳಪಡಬೇಕಾಗಿದ್ದರೂ ಜನರು ಶಿವಾಜಿಯ ಸೇನೆಗೆ ಉತ್ಸಾಹದಿಂದ ಬಂದು ಸೇರುತ್ತಿದ್ದರು. ಬಲಿಷ್ಠರೂ ಪ್ರತ್ಯುತ್ಪನ್ನ ಬುದ್ಧಿಯುಳ್ಳವರೂ ಸಾಹಸಿಗಳೂ ಆದವರನ್ನು

ಶಿವಾಜಿಯು ಕಾಲ ಕ್ರಮದಲ್ಲಿ ಸೇನಾ ನಾಯಕ ಪದವಿಗೆ ತರುತ್ತಿದ್ದನು ; ಯಾವನಿಗೂ ಅವನಪ್ಪನವುಗನೆಂದ ಮಾತ್ರಕ್ಕೇ ಉನ್ನತ ಪದವಿಯನ್ನು ಕೊಡುತ್ತಿರಲಿಲ್ಲ; ಮೇಲೂ, ಸಾಮಾನ್ಯವಾಗಿ ಸೈನಿಕರೆಲ್ಲರನ್ನೂ ಪ್ರೋತ್ಸಾಹಗೊಳಿಸುತ್ತಿದ್ದನು. ಶತ್ರು ಪಕ್ಷದವರಾಗಲಿ, ಸ್ವಪಕ್ಷದವರಾಗಲಿ, ಯಾರಿಗೆ ಗಾಯವಾದರೂ, ಅವರ ಚಿಕಿತ್ಸೆಗಾಗಿ ವೈದ್ಯರು ನಿಯಮಿತರಾಗಿದ್ದರು.

ಶಿವಾಜಿ ದೋರ್ದಂಡ ಪ್ರತಾಪದಿಂದ ರಾಜ್ಯವನ್ನು ಆರ್ಜಿಸಿ ಆರ್ಜಿತ ರಾಜ್ಯವು ಶತ್ರುಗಳ ಬಾಧೆಯಿಲ್ಲದೆ ಸುರಕ್ಷಿತವಾಗಿರುವಂತೆ ಗಿರಿ ದುರ್ಗ ಜಲ ದುರ್ಗಗಳಿಂದ ದಿಗ್ಬಂಧನವನ್ನು ಮಾಡಿದಂತೆಯೇ ತನ್ನ ನೆರಳನ್ನು ಸಂಬದ್ಧ ಸರ್ವ ಪ್ರಾಣಿಗಳೂ ತಣ್ಣಗೆ ಒದುಕುವಂತೆ—

> ಭಾವಿಸಲು ದುರ್ಗಂಗಳವು ನಾ।
> ನಾ ವಿಧಗಳಾಗಿಪ್ಪುದದರೊಳು।
> ಭೂವರಗೆ ನರದುರ್ಗವೇ ಪಿರಿದೆನಿಪುದದರಿಂದ॥
> ನೋವ ಮಾಡದೆ ಸಲಹಬೇಹುದಿ।
> ಳಾ ವಲಯದಲಿ ನಾಲ್ಕು ವರ್ಣವ।
> ನಾವಕಾಲಕ್ಕಾದಡಾ ನೃಪ ಕೆಡನು ಕೇಳೆಂದ॥

ಎಂಬ ನೀತಿಯನ್ನು ಹಿಡಿದು ನಿಷ್ಪಕ್ಷಪಾತ ಬುದ್ಧಿಯಿಂದಲೂ ಧರ್ಮದಿಂದಲೂ ದೊರೆತನವನ್ನು ಮಾಡಿದನು ; ಬಲಿಷ್ಠರು ದುರ್ಬಲರನ್ನು ಪೀಡಿಸದ ಹಾಗೂ, ರಾಜ ಪುರುಷರು ಪ್ರಜೆಗಳಿಗೆ ಅನ್ಯಾಯಗಳನ್ನು ಮಾಡದ ಹಾಗೂ, ಕೃಷಿ ವಾಣಿಜ್ಯಾದಿಗಳು ವೃದ್ಧಿಗೊಂಡು ಪ್ರಜೆಗಳು ಸುಖವಾಗಿರುವ ಹಾಗೂ, ಎಲ್ಲರೂ ತಮ್ಮ ತಮ್ಮ ಧರ್ಮಗಳನ್ನೂ ಆಚಾರ ವ್ಯವಹಾರಗಳನ್ನೂ ನಿರಾತಂಕವಾಗಿ ಅನುಷ್ಠಾನ ಮಾಡುವ ಹಾಗೂ ತಕ್ಕ ಕಟ್ಟಳೆಗಳನ್ನು ಮಾಡಿ ಪ್ರಜೆಗಳನ್ನು ಪಾಲಿಸಿದನು.

ಶಿವಾಜಿಯು ಸಂಸ್ಥಾನದ ಆಯ ವ್ಯಯದ ವಿಷಯದಲ್ಲಿ ದಾದಾಜಿ ಕೊಂಡದೇವನ ಕಟ್ಟಳೆಯನ್ನು ಅನುಸರಿಸಿದನು. ಅದಕ್ಕೆ ಮುಂಚೆ ಕಂದಾಯವೆತ್ತುವುದು ಮೊದಲಾದ ಗ್ರಾಮದ ಆಡಳಿತಗಳೆಲ್ಲವೂ ಗ್ರಾಮಾಧಿಕಾರಿಯಾದ ಗೌಡ, ಗ್ರಾಮ ಲೇಖಕನಾದ ಕುಲಕರಣಿ, ಅಥವಾ ಶಾನುಭೋಗ, ಇವರಿಬ್ಬರ ಕೈಯಲ್ಲಿದ್ದುವು. ಹಾಗೆಯೇ,

ಒಂದು ಪ್ರಾಂತದ ಆಡಳಿತಗಳೆಲ್ಲವೂ ದೇಶಾಧಿಕಾರಿಯಾದ ದೇಶಮುಖ್ಯ, ದೇಶ ಲೇಖಕನಾದ ದೇಶಪಾಂಡೆ, ದೇಶಾಯಿ, ಪುರಾಸದಾರ, ಜಮಿನಾದಾರ, ಎಂಬೀ ಅಧಿಕಾರಿಗಳ ಅಧೀನವಾಗಿದ್ದುವು. ಇವರು ರೈತರಿಂದ ಹೆಚ್ಚಾಗಿ ಕಂದಾಯವನ್ನು ಎತ್ತುತ್ತಲೂ ಸಂಸ್ಥಾನಕ್ಕೆ ಕಡಿಮೆಯಾಗಿ ಸಲಿಸುತ್ತಲೂ ಅಡಿಗಡಿಗೆ ಸಂಸ್ಥಾನಾಧಿಕಾರಿಗಳ ಮೇಲೆ ತಿರುಗಿ ಬೀಳುತ್ತಲೂ ಇದ್ದುದನ್ನು ಕಂಡು ಶಿವಾಜಿಯು ಕಂದಾಯವನ್ನು ಗುತ್ತಿಗೆಗೆ ಕೊಡುವ ಪದ್ಧತಿಯನ್ನು ತಪ್ಪಿಸಿ ಆ ಕೆಲಸಕ್ಕೆ ಸಂಬಳವನ್ನು ಕೊಟ್ಟು ಜನಗಳನ್ನಿಟ್ಟನು. ಎರಡು ಮೂರು ಗ್ರಾಮಗಳಿಗೆ ಒಬ್ಬೊಬ್ಬ ಕಮಾವೀಸದಾರ, ಅಥವಾ ಕುಲಕರಣಿಯನ್ನು ನೇಮಿಸಿದ್ದನು. ಹಲವು ಗ್ರಾಮಗಳ ಸಮುದಾಯವು ಮಹಲೆನಿಸಿಕೊಳ್ಳುತ್ತಿದ್ದಿತು. ಮಹಲಿನ ಅಧಿಕಾರಿಯ ಹೆಸರು ಮುಹಲ್ದಾರ. ಮೂರು ನಾಲ್ಕು ಮಹಲುಗಳು ಸೇರಿದರೆ ಒಂದು ಸುಭೆ; ಅದಕ್ಕೆ ಸುಬೇದಾರನು ಮುಖ್ಯಾಧಿಕಾರಿ. ಲೆಕ್ಕವಿಡುವುದಕ್ಕೆ ಕಮಾವೀಸದಾರನ ಕೈಯ ಕೆಳಗೆ ಒಬ್ಬ ಕಾರಕೂನನೂ, ಮಹಲ್ದಾರನ ಕೈಯ ಕೆಳಗೆ ಒಬ್ಬ ಹವಾಲ್ದಾರನೂ, ಸುಬೇದಾರನ ಕೈಯ ಕೆಳಗೆ ಒಬ್ಬ ಮೊಜುಮ್ದಾರನೂ ಇರುತ್ತಿದ್ದರು. ಒಂದು ಮಹಲಿಗೆ ಸಾಧಾರಣವಾಗಿ ಇಪ್ಪತ್ತೈದು ಸಾವಿರದಿಂದ ಒಂದೂಕಾಲು ಲಕ್ಷ ಹೊನ್ನಿನ ವರೆಗೂ ಹುಟ್ಟುವಳಿಯಾಗುತ್ತಿದ್ದಿತು. ಸುಬೇದಾರನಿಗೆ ವರ್ಷಕ್ಕೆ ನಾನೂರು ಹೊನ್ನು ಎಂದರೆ, ಅಷ್ಟಿಷ್ಟು ಕಡಿಮೆಯಾಗಿ, ತಿಂಗಳಿಗೆ ನೂರು ರೂಪಾಯಿ ಸಂಬಳವಿದ್ದಿತು.

ಶಿವಾಜಿ ಭೂಮಿಯನ್ನು ಅಳೆಯಿಸಿ ಒಬ್ಬೊಬ್ಬನ ಹಿಡುವಳಿಯಲ್ಲಿದ್ದ ನೆಲವು ಇಷ್ಟೆಂದು ನಿರ್ಧರಿಸಿದುದಲ್ಲದೆ ಕಂದಾಯವನ್ನು ಬೆಳೆಯ ಮೇಲೆ ಹಾಕುತ್ತಿದ್ದನು. ಇದರಿಂದ ಬೆಳೆಯಲ್ಲಿ ಹೆಚ್ಚುಕಡಿಮೆಯಾದ ಹಾಗೆಲ್ಲ ರೈತನು ತೆರುವ ಕಂದಾಯದಲ್ಲೂ ಹೆಚ್ಚು ಕಡಿಮೆಯಾಗುತ್ತಿದ್ದಿತು. ಬೆಳೆದ ಬೆಳೆಯಲ್ಲಿ ಐದರಲ್ಲಿ ಎರಡು ರಾಜಪಾಲು, ಮೂರು ಕುಳಪಾಲು, ಹೀಗೆ ಹಸಿಗೆಯಾಗುತ್ತಿದ್ದಿತು. ಕಂದಾಯವನ್ನು ಧಾನ್ಯ ರೂಪವಾಗಿಯಾದರೂ ಧನ ರೂಪವಾಗಿಯಾದರೂ ಕೊಡಬಹುದಾಗಿದ್ದಿತು. ಬೆಳೆ ಕೆಟ್ಟುದರಿಂದಾಗಲಿ ಮತ್ತೆ ಯಾವ ಕಾರಣ

ದಿಂದಾಗಲಿ ರೈತನು ಕಷ್ಟಕ್ಕೆ ಸಿಕ್ಕಿದರೆ ಸಂಸ್ಥಾನದಿಂದ ತಕಾವಿ ದೊರೆಯುತ್ತಿದ್ದಿತು.

ಶಿವಾಜಿ ಯಾವ ಅಭಿಪ್ರಾಯದಿಂದ ಕಂದಾಯವನ್ನು ಗುತ್ತಿಗೆಗೆ ಕೊಡುತ್ತಿರಲಿಲ್ಲವೊ ಅದೇ ಅಭಿಪ್ರಾಯದಿಂದ ಸಂಸ್ಥಾನದ ಅಧಿಕಾರಿ ಗಳಿಗೆ ಊರುಂಬಳಿ (ಮಾನ್ಯ) ಗಳನ್ನೂ ಕೊಡುತ್ತಿರಲಿಲ್ಲ. ಅದರಿಂದ ಪ್ರಜಾ ಪೀಡನವೊಂದೇ ಅಲ್ಲದೆ ಸಂಸ್ಥಾನದೊಳಗೆ ಅನೇಕ ಕ್ಷುದ್ರ ಸಂಸ್ಥಾನಗಳೂ, ಪುಂಡರಸರಲ್ಲಿ ಪರಸ್ಪರ ಕಲಹಗಳೂ ಹುಟ್ಟುವು ವೆಂದು ಅವನು ಯೋಚಿಸಿದನು. ಜಹಗೀರ್ದಾರರು ಆರಂಭದಲ್ಲಿ ಗುತ್ತಿಗೆ ದಾರರಾಗಿಯೂ ತರುವಾಯ, ಕ್ರಮವಾಗಿ ನಾಯಕರು, ಪಾಳೆಯ ಗಾರರು, ಮಾಂಡಲಿಕರು, ಕಡೆಗೆ ರಾಜರು ಆಗಿ ರಾಷ್ಟ್ರಾಧಿಪತಿಗಳಿಗೆ ಪ್ರತಿದ್ವಂದ್ವಿಗಳಾಗುತ್ತಿದ್ದುದನ್ನು ಕಂಡು ಅವನು ಈ ಎರಡು ಪದ್ಧತಿ ಗಳಿಗೂ ವಿರೋಧಿಯಾಗಿದ್ದನು. ಅವರು ಹೀಗೆ ಮುಲೆಯದೆ ಇರುವ ಹಾಗೆ, ಆತ್ಮ ಸಂರಕ್ಷಣಾರ್ಥವಾಗಿ ಕೂಡ ಕೋಟೆಗಳನ್ನು ಕಟ್ಟಕೂಡ ದೆಂದು ಕಟ್ಟುಮಾಡಿ, ಇದ್ದ ಕೋಟೆಗಳನ್ನು ಒಡೆಯಿಸಿದನು. ಈ ರೀತಿ ಯಲ್ಲಿ, ಸ್ವತಂತ್ರರಾಗಿ ಪಾರುಪತ್ಯಗಳನ್ನು ಮಾಡುತ್ತಿದ್ದವರೆಲ್ಲರೂ ವೇತನಾ ಭೋಗಿಗಳಾದ ಉದ್ಯೋಗಸ್ಥರಾದರು.

ಕೃಷಿ ಪ್ರಚುರ ದೇಶದಲ್ಲಿ ಪಶುಪಾಲನೆ ಅವಶ್ಯ ಕಾರ್ಯವು. ಈ ವಿಷಯದಲ್ಲಿ ಶಿವಾಜಿ ದೃಷ್ಟಿಯಿಡದಿರಲಿಲ್ಲ. ತೃಣ ಸಮೃದ್ಧಿಯುಳ್ಳ ಮಾನದೇಶ, ಭೀಮಖಂಡಿ ಮೊದಲಾದ ಪ್ರದೇಶಗಳಲ್ಲಿ ಒಳ್ಳೆಯ ಹುಟ್ಟಿನ ಕುದುರೆಗಳನ್ನೂ, ದೇಶದಲ್ಲೂ ಕೊಂಕಣದಲ್ಲೂ ಹುಲ್ಲು ಗಾವಲುಗಳನ್ನು ಬಿಡಿಸಿ ಹಸು, ಎತ್ತು, ಎಮ್ಮೆ, ಕೋಣ, ಆಡು, ಕುರಿ ಮೊದಲಾದ ಕಾಲ್ನಡೆಗಳನ್ನೂ ಸಾಕಿಸಿದನು. ಈ ಏರ್ಪಾಡಿನಿಂದ ಕೆಲವು ವರ್ಷಗಳೊಳಗೆ ಒಳ್ಳೆಯ ಜಾತಿಯ ಕಾಲ್ನಡೆಗಳು ಹುಟ್ಟಿದುವು. ಆ ಕಾವಲುಗಳಲ್ಲಿ ಹುಟ್ಟಿ ಬೆಳೆದ ಎತ್ತು, ಕುದುರೆ ಮೊದಲಾದುವು ಬಲ ವುಳ್ಳವಾಗಿಯೂ ಶ್ರಮವನ್ನು ಸಹಿಸತಕ್ಕವಾಗಿಯೂ ಇದ್ದುದರಿಂದ ಜನರು ಅವುಗಳನ್ನು ವಿಶೇಷವಾಗಿ ಮೋಹಿಸುತ್ತಿದ್ದರು. ಆ ಕುದುರೆ ಗಳು ಯುದ್ಧ ಕಾರ್ಯಗಳಿಗೂ ತಕ್ಕುವಾಗಿದ್ದುವು.

ಪ್ರಜೆಗಳಿಗೆ ಕಳ್ಳಕಾಕರ ಭಯವನ್ನು ತಪ್ಪಿಸುವುದರಲ್ಲಿ ಅಧಿಕಾರಿಗಳು ವಿಶೇಷ ದೃಷ್ಟಿಯಿಡುತ್ತಿದ್ದರು. ಮೊದಮೊದಲು ಶಿವಾಜಿ ಕೆಲವು ಮಂದಿ ತುಂಟರಿಗೆ ಪ್ರಾಣದಂಡನೆಯನ್ನು ವಿಧಿಸಿ ದುಷ್ಟರಿಗೆ ಭಯ ಹುಟ್ಟುವಂತೆ ಮಾಡಿದನು. ಕಳ್ಳತನದಿಂದ ಜೀವಿಸುತ್ತಿದ್ದವರನ್ನು ಕಂಡುಹಿಡಿದು ಅವರವರ ಊರಿನ ಹತ್ತಿರ ಭೂಮಿಯನ್ನು ಕೊಟ್ಟು ಅವರು ಉತ್ತು ಜೀವಿಸುವಂತೆ ಮಾಡಿದನು. ಗ್ರಾಮದಲ್ಲಿ ಕಳವಾದರೆ ಗ್ರಾಮಸ್ಥರು ಕಳ್ಳನ ವಿಷಯದಲ್ಲಿ ವರ್ತಮಾನವನ್ನು ಕೊಡತಕ್ಕದ್ದು, ತಪ್ಪಿದರೆ ಒಡವೆಯವನಿಗೆ ನಷ್ಟವನ್ನು ಕಟ್ಟಿಕೊಡತಕ್ಕದ್ದು ಎಂದು ಕಟ್ಟುಮಾಡಿದನು. ಬ್ರಾಹ್ಮಣನಿಗೆ ಯಾವ ಅಪರಾಧಕ್ಕೂ ಪ್ರಾಣದಂಡನೆ ಇರಲಿಲ್ಲ; ಅವನಿಗೆ ಗಡಿಯಪಾರೇ ಚರಮ ದಂಡನೆ. ಕೃಷಿಯಿಂದ ಜೀವಿಸುವುದಕ್ಕೆ ತನಗೆ ಹೊಲ ಮನೆಗಳಿದ್ದರೂ ಯಾವನಾದರೂ ಕಳವನ್ನು ಮಾಡಿದರೆ ಅವನಿಗೆ ಕಠಿನ ದಂಡನೆಯಾಗುತ್ತಿದ್ದಿತು.

ದಾಯಭಾಗ ಮೊದಲಾದ ವಿವಾದಗಳನ್ನು ಪಂಚಾಯತರು ವಿಚಾರಿಸಿ ತೀರಿಸುತ್ತಿದ್ದರು. ವೃದ್ಧರೂ ಅನುಭವಶಾಲಿಗಳೂ ಅಭಿಜ್ಞರೂ ಪಾಪಭೀರುಗಳೂ ಆದವರು ಪಂಚಾಯತರಾಗಿ ನಿಯಮಿತರಾಗುತ್ತಿದ್ದರು. ಮುಸಲ್ಮಾನರು ಮೊದಲಾದ ಅನ್ಯಮತಾವಲಂಬಿಗಳ ವ್ಯಾಜ್ಯಗಳನ್ನು ತೀರಿಸುವುದಕ್ಕೆ ಆಯಾ ಮತದವರೇ ಪಂಚಾಯತರಾಗಿ ನೇಮಿಸಲ್ಪಡುತ್ತಿದ್ದರು. ಪಂಚಾಯತರಿಂದ ವ್ಯಾಜ್ಯವು ಹರಿಯದ ಪಕ್ಷಕ್ಕೆ ಯಥಾ ಕ್ರಮವಾಗಿ ಕಾರಕೂನನು, ಮಹಲ್ದಾರನು, ಸುಬೇದಾರನು, ಕಟ್ಟಕಡೆಗೆ ನ್ಯಾಯಾಧೀಶನು ಅಂತಹ ವ್ಯಾಜ್ಯವನ್ನು ವಿಚಾರಮಾಡುತ್ತಿದ್ದನು. ನ್ಯಾಯಾಧೀಶನೇ ಸರ್ವ ಪ್ರಧಾನ ವಿಚಾರಕರ್ತನು. ಕಾಯಿಕ ದಂಡನೆಯನ್ನು ಕೊಡಬೇಕಾದ ಸಂದರ್ಭದಲ್ಲಿ ಪಂಚಾಯತರು ವಿಚಾರ ಮಾಡಿ ಸಂಸ್ಥಾನಾಧಿಕಾರಿಗಳಿಗೆ ತಿಳಿಸಿ ಅವರು ವಿಧಿಸಿದ ದಂಡನೆಯನ್ನು ಆಚರಣೆಗೆ ತರುತ್ತಿದ್ದರು.

ವಿದ್ಯೆಯ ವಿಷಯದಲ್ಲಿ ಶಿವಾಜಿ ಗಮನ ಕೊಡದಿರಲಿಲ್ಲ. ಈಗಿನ ಹಾಗೆ ಅವನು ಜನ ಸಾಮಾನ್ಯಕ್ಕೆ ಪಾಠಶಾಲೆಗಳನ್ನಿಡಿಸದೆ ಹೋದರೂ

ಕೈಗಾರಿಕೆಯ ಕೆಲಸಗಳಲ್ಲಿ ಆಯಾ ಪಣದವರು ಬುದ್ಧಿವಂತರಾಗುವ ಹಾಗೆ, ಅವರಿಂದ ಸಂಸ್ಥಾನಕ್ಕೆ ಬೇಕಾದ ಪದಾರ್ಥಗಳನ್ನು ಮಾಡಿಸುವುದರ ಮೂಲಕ, ಅವರನ್ನು ವಿಶೇಷ ಪ್ರೋತ್ಸಾಹಗೊಳಿಸುತ್ತಿದ್ದನು; ಅಲ್ಲದೆ, ಅವರ ಮಕ್ಕಳು ತಮ್ಮ ತಮ್ಮ ಕುಲವಿದ್ಯೆಯನ್ನು ಕಲಿವಂತೆಯೂ ಪ್ರೋತ್ಸಾಹವನ್ನು ಮಾಡುತ್ತಿದ್ದನು. ಬ್ರಾಹ್ಮಣರು ಸಮಾಜಕ್ಕೆ ಶಿರಃಪ್ರಾಯರೆಂದು ಅವರ ವಿದ್ಯಾವರ್ಧನ ವಿಷಯದಲ್ಲಿ ಶಿವಾಜಿ ವಿಶೇಷವಾಗಿ ಮನಸ್ಸಿಡುತ್ತಿದ್ದನು; ಸಂಸ್ಕೃತ ವಿದ್ಯಾಭ್ಯಾಸವು ಕ್ಷೀಣ ದಶೆಯಲ್ಲಿದ್ದುದನ್ನು ಕಂಡು ಆ ಭಾಷೆಯ ಉತ್ಕರ್ಷಾರ್ಥವಾಗಿ ರಾಮ ದಾಸನು ಹೇಳಿದಂತೆ ದಕ್ಷಿಣೆಯೆಂಬ ಹೆಸರಿಂದ ಪುದುಪಟ್ಟು ಹಾಕಿ ಅಧ್ಯಾಪಕರಾದ ಬ್ರಾಹ್ಮಣರಿಗೆ ದ್ರವ್ಯಸಹಾಯವನ್ನು ಮಾಡು ತ್ತಿದ್ದನು. ಗುರುಗಳು ಶಿಷ್ಯರಿಗೆ ತಮ್ಮ ತಮ್ಮ ಮನೆಗಳಲ್ಲೇ ಪಾಠ ಗಳನ್ನು ಹೇಳಿಕೊಡುತ್ತಿದ್ದರು. ಪ್ರತಿ ಶ್ರಾವಣಮಾಸದಲ್ಲೂ ರಾಯ ಗಡದಲ್ಲಿ ವಿದ್ವಾಂಸರ ಸಭೆ ಸೇರುತ್ತಿದ್ದಿತು. ಆ ಸಮಯದಲ್ಲಿ ಪರೀಕ್ಷೆ ಮಾಡಿಸಿ, ಅವರವರ ಯೋಗ್ಯತಾನುಸಾರವಾಗಿ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಶಿವಾಜಿ ಪಾರಿತೋಷಿಕಗಳನ್ನು ಕೊಡುತ್ತಿದ್ದನು; ಅಲ್ಲದೆ, ಅಲ್ಲಲ್ಲಿ ವಿದ್ಯಾರ್ಥಿಗಳಿಗಾಗಿ ಅನ್ನಸತ್ರಗಳನ್ನೂ ಹಾಕಿಸಿದ್ದನು. ಅನೇಕರು ರಾಜನಿಂದ ಪ್ರೋತ್ಸಾಹಹೊಂದಿ ವಿದ್ಯಾಭ್ಯಾಸಕ್ಕಾಗಿ ಮಹಾ ರಾಷ್ಟ್ರದಿಂದ ಕಾಶಿಗೆ ಹೋಗಿ, ಅಲ್ಲಿಂದ ಪೂರ್ಣ ಪಂಡಿತರಾಗಿ ಬರುತ್ತಿದ್ದರು. ಈ ವಿಧವಾಗಿ ಶಿವಾಜಿಯ ಆಳಿಕೆಯಲ್ಲಿ ಅನೇಕ ಜನ ದಿಗ್ದಂತಿಗಳಾದ ಸಂಸ್ಕೃತ ಪಂಡಿತರು ಉತ್ಪನ್ನರಾದರು.

ಶಿವಾಜಿಯು ಜನಗಳಿಗೆ ಭೂಮಿಯನ್ನು ಮಾನ್ಯವಾಗಿ ಕೊಡುವ ಪದ್ಧತಿಗೆ ವಿರೋಧಿಯಾದರೂ ದೇವಸ್ಥಾನಗಳಿಗೂ ಧರ್ಮಕಾರ್ಯ ಗಳಿಗೂ ಮಾನ್ಯಗಳನ್ನು ಕೊಡುತ್ತಿದ್ದನು. ಈ ವಿಷಯದಲ್ಲಿ ಅವನು ಅತ್ಯೌದಾರ್ಯವನ್ನು ತೋರಿಸಿದನು. ಈ ಔದಾರ್ಯವನ್ನು ಕೇವಲ ಹಿಂದೂಗಳ ದೇವಸ್ಥಾನಗಳ ವಿಷಯದಲ್ಲೇ ಅಲ್ಲ, ಮುಸಲ್ಮಾನರ ಮಸೀದಿ, ಗೋರಿ ಮುಂತಾದುವುಗಳ ವಿಷಯದಲ್ಲೂ ತೋರಿಸು ತ್ತಿದ್ದನು.

ದೇಶ ಹಿತೈಷಿಯಾದ ಆ ಮಹಾರಾಜನು ಯಾವಾಗಲೂ ವಿದ್ವಾಂಸರನ್ನು ಆದರಿಸುತ್ತ ಮಹಾರಾಷ್ಟ್ರ ಭಾಷೆಯು ಉತ್ಕರ್ಷ ವನ್ನೈದುವಂತೆ ಮಾಡಿದನು. ಅವನ ಸಮಕಾಲೀನ ಕವಿಗಳೊಳಗೆ ರಾಮದಾಸ ಸ್ವಾಮಿ, ತುಕಾರಾಮ್ ಬಾವ, ವಾಮನ ಪಂಡಿತ, ಇವರು ಪ್ರಧಾನರು. ರಾಮದಾಸನು ಶಿವಾಜಿಯ ಗುರು. ಇವನ ದಾಸ ಬೋಧೆಯೆಂಬ ಗ್ರಂಥವು ಮಹಾರಾಷ್ಟ್ರೀಯ ಸಾಹಿತ್ಯದಲ್ಲಿ ಅತ್ಯುತ್ತಮ ವಾದುದೆನ್ನುವರು. ತುಕರಾಮ್ ಬಾವನು ಕ್ರಿ. ಶ. ೧೬೦೮ನೆಯ ಸಂವತ್ಸರದಲ್ಲಿ ಹುಟ್ಟಿ ೧೬೪೯ನೆಯ ಸಂವತ್ಸರದಲ್ಲಿ ಮೃತನಾದನು. ಅವನ ತಂದೆ ಪುಣೆಗೆ ಸಮೀಪದಲ್ಲಿರುವ ದೇಹು ಎಂಬ ಗ್ರಾಮದಲ್ಲಿ ವಾಣಿಜ್ಯ ವೃತ್ತಿಯಿಂದ ಜೀವನ ಮಾಡುತ್ತಿದ್ದನು. ತುಕಾರಾಮನು ಸಂನ್ಯಾಸಿಯಾಗಿ ಸಂಕೀರ್ತನೆಗಳನ್ನು ಮಾಡಿ ಜನಗಳಿಗೆ ಅವುಗಳ ವ್ಯಾಖ್ಯಾನವನ್ನೂ ಹೇಳಲಾರಂಭಿಸಿದನು. ಅವನ ಕವಿತ್ವವು ಪ್ರೇಮ, ಭಕ್ತಿ, ನಿರ್ಭಯತ್ವ ಮೊದಲಾದ ರಸಗಳಿಂದ ಪರಿಪೂರಿತವಾಗಿ ಶ್ರೋತೃ ಗಳ ಹೃದಯಗ್ರಾಹಿಯಾಗಿರುವುದೆಂದು ಈಗಲೂ ಅದನ್ನು ಅನೇಕರು ಭಕ್ತಿ ಶ್ರದ್ಧೆಯಿಂದ ಓದುವರು. ವಾಮನ ಪಂಡಿತನು ಕೊರೆಗಾವು– ಕುಮಟಿ ಎಂಬ ಸ್ಥಳದಲ್ಲಿ ಹುಟ್ಟಿ ಶಾ. ಶ. ೧೫೯೫ನೆಯ ಸಂವತ್ಸರದಲ್ಲಿ ಮೃತನಾದನು. ಅವನು ಕಾಶಿಗೆ ಹೋಗಿ ಅದ್ಭುತ ಪಾಂಡಿತ್ಯವನ್ನು ಸಂಪಾ ದಿಸಿ ಅನೇಕ ಮಹಾರಾಷ್ಟ್ರ ಗ್ರಂಥಗಳನ್ನು ರಚಿಸಿದನು; ಭಗವದ್ಗೀತೆಗೆ ಟೀಕೆಯನ್ನೂ ಭಾಗವತದ ಕೆಲವು ಭಾಗಕ್ಕೆ ವ್ಯಾಖ್ಯಾನವನ್ನೂ ಬರೆ ದನು. ಆ ಪಂಡಿತನ ಪುಸ್ತಕಗಳು ಭಾವ ಪೂರ್ಣವಾಗಿಯೂ ರಸ ಭರಿತ ವಾಗಿಯೂ ಭಕ್ತ ಜನರು ಆದರಿಸತಕ್ಕುವಾಗಿಯೂ ಇರುವುವು. ಶಿವಾಜಿ ಆ ಪಂಡಿತನನ್ನು ಅತ್ಯಾದರದಿಂದ ಕಾಣುತ್ತ ದ್ರವ್ಯ ಸಹಾಯವನ್ನು ಮಾಡುತ್ತಿದ್ದನು. ಉತ್ತರ ಹಿಂದೂಸ್ಥಾನದ ಭೂಷಣನೆಂಬ ಬಿರುದುಳ್ಳ ಒಬ್ಬ ಕವಿಯು ಒಂದು ದಿನ ಅವರಂಗಜೇಬನ ಮುಂದೆ ಪ್ರಾಚೀನ ಹಿಂದೂ ರಾಜರ ವೀರತ್ವವನ್ನು ಹೊಗಳಿದನು. ಈ ಮಹಾಪರಾಧಕ್ಕೆ ಅವರಂಗಜೇಬನು ಅವನನ್ನು ದಂಡಿಸಿದನು. ಭೂಷಣನು ಸ್ವದೇಶಾಭಿ ಮಾನಿ. ಅವನು ಅನೇಕ ರಾಜರನ್ನು ನೋಡಿಕೊಂಡು ಕಡೆಗೆ ಶಿವಾಜಿಯ

ದರ್ಶನಕ್ಕೆ ಬಂದನು. ಈ ಕವಿಯು ವೀರ ರಸ ವರ್ಣನೆಯಲ್ಲಿ ನಿಪುಣನೆಂದು ಖ್ಯಾತಿಗೊಂಡಿದ್ದನು. ಶಿವಾಜಿ ವೀರ ರಸ ಪೂರ್ಣವಾಗಿಯೂ ಅನುಪ್ರಾಸ ಯುಕ್ತವಾಗಿಯೂ ಓಜಸ್ವಿ ಭಾಷೆಯಲ್ಲಿ ರಚಿತವಾಗಿಯೂ ಇರುವ ಅವನ ಕವಿತೆಯನ್ನು ಕೇಳಿ ವಿಸ್ಮಿತನಾಗಿ ಅವನಿಗೆ ಯಥೇಚ್ಛವಾಗಿ ದ್ರವ್ಯವನ್ನು ಕೊಟ್ಟುದಲ್ಲದೆ ತನ್ನ ಕೊರಳಲ್ಲಿದ್ದ ಹಾರವನ್ನು ಅವನ ಕಂಠಕ್ಕೆ ಹಾಕಿದನೆಂದು ಒಂದು ಕಿಂವದಂತಿ ಇರುವುದು.

ಈ ತೆರವಾಗಿ ಶಿವಾಜಿಯ ಆದರದಿಂದಲೂ ಔದಾರ್ಯದಿಂದಲೂ ಸಂತುಷ್ಟರಾಗಿ ಅನೇಕ ಜನ ಪಂಡಿತರೂ ಕವಿಗಳೂ ಸಾಹಿತ್ಯ ಭಂಡಾರವನ್ನು ವೃದ್ಧಿಗೊಳಿಸಿದರು. ಪಂಡಿತರಾದವರು ಮೊದಲು ಮೊದಲು ಮಹಾರಾಷ್ಟ್ರ ಭಾಷೆಯಲ್ಲಿ ಗ್ರಂಥ ರಚನೆಮಾಡುವುದು ಪ್ರತಿಷ್ಠಾವಹವಲ್ಲವೆಂದು ಸಂಸ್ಕೃತದಲ್ಲೇ ವಿಶೇಷವಾಗಿ ಗ್ರಂಥಗಳನ್ನು ಮಾಡುತ್ತಿದ್ದರು. ಕಡೆ ಕಡೆಗೆ ಪ್ರತಿಷ್ಠಾಕಾಂಕ್ಷೆಗಿಂತಲೂ ಲೋಕ ಹಿತೈಷಿತೆ ಪ್ರಬಲವಾಯಿತು. ಆಗ ಲೋಕೋಪಕಾರಾರ್ಥವಾಗಿ ರಾಮಾಯಣ, ಭಾರತ, ಭಾಗವತ, ಭಗವದ್ಗೀತೆ ಮೊದಲಾದ ಅಮೋಘ ಗ್ರಂಥಗಳಲ್ಲಿ ನಿಕ್ಷಿಪ್ತವಾಗಿರುವ ಧರ್ಮ ರಹಸ್ಯಗಳೆಲ್ಲವೂ ದೇಶ ಭಾಷೆಯಲ್ಲಿ ಪ್ರಕಟಿತವಾದುವು. ಬ್ರಾಹ್ಮಣಾದಿ ಸಕಲ ವರ್ಣದವರೂ ಸ್ತ್ರೀಯರೂ ಪುರುಷರೂ ಬಾಲರೂ ವೃದ್ಧರೂ ಪಂಡಿತರೂ ಪಾಮರರೂ, ಎಲ್ಲರೂ ಯಥಾಸಾಧ್ಯವಾಗಿ ಧರ್ಮ ವಿಚಾರಮಾಡತೊಡಗಿದರು. ಗೋಬ್ರಾಹ್ಮಣ ರಕ್ಷಣೆಯಲ್ಲಿ ಉದಾಸೀನರಾಗಿರುವುದು ಪಾಪವು; ಜನ್ಮಭೂಮಿಯ ಕೀರ್ತಿ ಕಲಾಪಗಳನ್ನು ದಿಕ್ಕು ದಿಕ್ಕುಗಳಲ್ಲೂ ವ್ಯಾಪಿಸುವಂತೆ ಮಾಡುವುದು ಕರ್ತವ್ಯವು; ಕರ್ತವ್ಯ ಪರಾಯಣನೇ ಈಶ್ವರ ಭಕ್ತನು; ಅವನೇ ಯೋಗಿ, ಅವನೇ ಸಂನ್ಯಾಸಿ, ಅವನೇ ತಪಸ್ವಿ; ಸರ್ವಜನ ಪ್ರೇಮವೂ ಈಶ್ವರ ಭಕ್ತಿಯೂ ಮೋಕ್ಷಕ್ಕೆ ದಾರಿ—ಇತ್ಯಾದಿ ತತ್ತ್ವಗಳನ್ನು ರಾಮದಾಸ, ತುಕಾರಾಮ ಮೊದಲಾದ ಪರಿವ್ರಾಜಕರೂ ಸಾಧುಗಳೂ ಜನ ಸಾಮಾನ್ಯದಲ್ಲಿ ಬಿತ್ತಿ ಎಲ್ಲರನ್ನೂ ಪ್ರೇಮೈಕ ಸೂತ್ರದಿಂದ ಕಟ್ಟಿ ಸರ್ವರೂ ಅನ್ಯೋನ್ಯವಾಗಿ ಏಕ ದೇಹ ನ್ಯಾಯದಿಂದಿರುವಂತೆ ಮಾಡಿದರು. ಈ ವಿಧವಾಗಿ, ಶಿವಾಜಿಯ ಆಳಿಕೆಯಲ್ಲಿ ಏಕ

ಕಾಲದಲ್ಲಿ ಒಂದು ಕಡೆ ಸಾಹಿತ್ಯ ವೃದ್ಧಿಯೂ ಮತ್ತೊಂದು ಕಡೆ ಧರ್ಮ ಪ್ರಚಾರವೂ ನಡೆದುವು.

ಹದಿನಾಲ್ಕನೆಯ ಪ್ರಕರಣದಲ್ಲಿ ಶಿವಾಜಿಯ ಅಷ್ಟ ಪ್ರಧಾನ ಗೋಷ್ಠಿಯನ್ನು ಸೂಚಿಸಿದೆವು. ಶಿವಾಜಿಯು ರಾಜಾಜ್ಞೆಗಳೆಲ್ಲವೂ ಸಮಂಜಸವಾಗಿಯೂ ಲೋಕ ಹಿತಕರವಾಗಿಯೂ ಇರುವ ಹಾಗೆ ಈ ಅಷ್ಟ ಪ್ರಧಾನರ ಆಲೋಚನೆಯನ್ನು ಕೇಳಿ ಪ್ರಜಾ ಪಾಲನ ಸಂಧಿ ವಿಗ್ರಹಾದಿ ಸಕಲ ಕಾರ್ಯಗಳನ್ನೂ ಮಾಡುತ್ತಿದ್ದನು. ಅವನು ಸಮಸ್ತ ರಾಜ ಕಾರ್ಯಗಳನ್ನೂ ವಿಭಾಗಿಸಿ ಒಂದೊಂದು ಕಾರ್ಯ ವಿಭಾಗಕ್ಕೆ ಒಬ್ಬೊಬ್ಬ ಅಧ್ಯಕ್ಷನನ್ನಿಟ್ಟನು. ಆಯಾ ಕಾರ್ಯ ವಿಭಾಗದ ಅಧ್ಯಕ್ಷರೇ ಅಷ್ಟ ಪ್ರಧಾನ ಗೋಷ್ಠಿಯ ಸದಸ್ಯರು. ಅವರು ತಮ್ಮ ತಮ್ಮ ಶಾಖೆಯ ಕಾರ್ಯಗಳನ್ನು ಸ್ವತಂತ್ರರಾಗಿ ನಡೆಯಿಸುತ್ತ, ಗೋಷ್ಠಿಯ ಸದಸ್ಯರಾಗಿ ಸಮಸ್ತ ರಾಜ ಕಾರ್ಯಗಳಲ್ಲೂ ರಾಜನಿಗೆ ಮಂತ್ರಾಲೋಚನೆಯನ್ನು ಹೇಳುತ್ತಿದ್ದರು.

ಈ ರೀತಿಯಾಗಿ ಶಿವಾಜಿಯ ಅಷ್ಟ ಪ್ರಧಾನ ಗೋಷ್ಠಿಯು ಮಂತ್ರಾಲೋಚನ ಸಭೆಯಾಗಿ ಮಾತ್ರವೇ ಅಲ್ಲದೆ ಕರ್ಮ ಸಚಿವರಿಂದ ಕೂಡಿದ ಕಾರ್ಯ ನಿರ್ವಾಹಕ ಸಭೆಯಾಗಿಯೂ ಇದ್ದಿತು. ಶಿವಾಜಿ ಸಕಲ ರಾಜಕೀಯ ವಿಷಯಗಳಲ್ಲೂ ಅವರೊಡನೆ ವಿಚಾರ ಮಾಡಿ ಅವರ ಮತಾಮತಗಳನ್ನು ತಿಳಿದು ಕಾರ್ಯ ಪ್ರವರ್ತನೆ ಮಾಡುತ್ತಿದ್ದನು. ಪೇಶ್ವೆ, ಅಥವಾ ಮುಖ್ಯ ಪ್ರಧಾನನು, ಸರ್ವ ಶ್ರೇಷ್ಠನು. ಯುದ್ಧಾದಿ ಸಕಲ ಕಾರ್ಯ ಶಾಖೆಗಳ ಮೇಲೂ ಅವನಿಗೆ ಅಧಿಕಾರವುಂಟು. ಉಳಿದವರು ಒಂದೊಂದು ಕಾರ್ಯ ವಿಭಾಗಕ್ಕೆ ಮಾತ್ರ ಯಜಮಾನರು. ಯುದ್ಧ ವಿಭಾಗಕ್ಕೆ ಸೇನಾಪತಿ ಮುಖ್ಯನು. ಮೊಜುಮ್ದಾರ, ಅಥವಾ ಪಂತ್ ಅಮಾತ್ಯನು ಆಯ ವ್ಯಯಗಳ ವಿಚಾರಣೆಗೂ, ಸುರ್‌ನೀಸ ಅಥವಾ ಪಂತ್ ಸಚಿವನು ಸಂಸ್ಥಾನದ ಲೆಕ್ಕ, ರಾಯಸ, ನಿರೂಪ, ದಾನಪತ್ರ, ಇತ್ಯಾದಿಗಳ ರಕ್ಷಣ ಪರೀಕ್ಷಣಕ್ಕೂ ನಿಯಮಿತರಾಗಿದ್ದರು. ಪರ ರಾಷ್ಟ್ರಕ್ಕೆ ಸಂಬಂಧಪಟ್ಟ ದೌತ್ಯಾದಿ ಸಕಲ ಕಾರ್ಯಗಳನ್ನೂ ದಬೀರ, ಅಥವಾ ಸುಮಂತನೂ, ರಾಜನ ಗೃಹಕೃತ್ಯ ಮೊದಲಾದ ಅಂತ

ರಂಗ ಕಾರ್ಯಗಳನ್ನು ಮಂತ್ರಿಯೂ ನಿರ್ವಹಿಸುತ್ತಿದ್ದರು. ಧರ್ಮ ಶಾಸ್ತ್ರಾರ್ಥವನ್ನು ನಿರ್ಣಯಿಸುವುದೂ, ಆಚಾರ ವ್ಯವಹಾರ ಪ್ರಾಯಶ್ಚಿತ್ತಗಳನ್ನು ಕುರಿತ ವಿಷಯಗಳನ್ನು ವಿಚಾರ ಮಾಡುವುದೂ, ಧರ್ಮ ಕಾರ್ಯಗಳನ್ನು ನಡೆಯಿಸುವುದೂ ಪಂಡಿತರಾಯನ ಅಧೀನವು. ನ್ಯಾಯ ವಿಚಾರವು ನ್ಯಾಯಾಧೀಶನ ಕಾರ್ಯವು. ರಾಜ ಸಭೆಯಲ್ಲಿ ರಾಜನಿಗೆ ಎರಡನೆಯವನಾಗಿ ಸಿಂಹಾಸನದ ಕೆಳಗೆ ಬಲಗಡೆ ಮುಖ್ಯ ಪ್ರಧಾನನೂ, ಅವನ ಕೆಳಗೆ ಅಮಾತ್ಯನೂ, ಅವನ ತರುವಾಯ ಸಚಿವನೂ, ಅವನ ತರುವಾಯ ಮಂತ್ರಿಯೂ ಮರ್ಯಾದಾನುಸಾರವಾಗಿ ಕುಳಿತುಕೊಳ್ಳುತ್ತಿದ್ದರು. ಎಡದಲ್ಲಿ ಮೊದಲು ಸೇನಾಪತಿ, ಅವನ ತರುವಾಯ ಸುಮಂತ, ಸುಮಂತನಾದ ಮೇಲೆ ಪಂಡಿತರಾಯ, ಪಂಡಿತರಾಯನ ಕೆಳಗೆ ನ್ಯಾಯಾಧೀಶ—ಈ ಕ್ರಮವನ್ನು ಹಿಡಿದು ಮಿಕ್ಕ ಪ್ರಧಾನರು ಕುಳಿತುಕೊಳ್ಳುತ್ತಿದ್ದರು.

ಶಿವಾಜಿಯ ರಾಜ್ಯಭಾರ ಕ್ರಮವನ್ನು ಪರ್ಯಾಲೋಚನೆ ಮಾಡಲಾಗಿ ಅವನು ಯುದ್ಧ ಕಾರ್ಯಗಳಲ್ಲಿ ನಿಪುಣನಾಗಿದ್ದಂತೆಯೇ ಪ್ರಜಾಪಾಲನ ಕಾರ್ಯಗಳಲ್ಲೂ ಸುದಕ್ಷನೂ ದೂರದರ್ಶಿಯೂ ಆಗಿದ್ದನೆಂದು ಸ್ಪಷ್ಟವಾಗುವುದು. ಅವನ ಮರಣ ವೃತ್ತಾಂತವನ್ನು ಕೇಳಿ ಅವನ ಪ್ರಬಲ ಪ್ರತಿ ದ್ವಂದ್ವಿಯಾದ ಅವರಂಗಜೇಬನು, "ಶಿವಾಜಿ ಅಸಾಧಾರಣ ಯೋಧನು ; ಭಾರತವರ್ಷದ ಪ್ರಾಚೀನ ಸಂಸ್ಥಾನಗಳನ್ನು ನಿರ್ಮೂಲ ಮಾಡಲು ನಾನು ಪ್ರಬಲ ಪ್ರಯತ್ನಗಳನ್ನು ಮಾಡುತ್ತಿರುವಾಗಲೇ ಅವನೊಂದು ನವೀನ ರಾಜ್ಯವನ್ನು ಸ್ಥಾಪಿಸಿದನು. ಸರ್ವ ಸಹಾಯ ಸಂಪನ್ನರಾದ ನನ್ನ ಸೈನಿಕರು ಇಷ್ಟು ವರ್ಷಗಳ ಕಾಲ ಅವಿಶ್ರಾಂತರಾಗಿ ಯುದ್ಧಮಾಡಿದರೂ ಅವನು ತನ್ನ ರಾಜ್ಯವನ್ನು ವಿಸ್ತರಿಸಿ ರಣಪಾಂಡಿತ್ಯವನ್ನು ತೋರಿದನು" ಎಂದು ಮುಕ್ತ ಕಂಠದಿಂದ ತನ್ನ ಶತ್ರುವನ್ನು ಹೊಗಳಿರುವನು. ಶಿವಾಜಿಯ ಸಮಕಾಲೀನನಾದ ಗ್ರಂಥಕಾರನೊಬ್ಬನು, "ಶಿವಾಜಿ ಸಾಧಾರಣ ಯೋಧನಲ್ಲ, ಅವನ ರಾಜ್ಯ ಶಾಸನವು ಶೃಂಖಲಾಬದ್ಧವಾಗಿದ್ದಿತು; ಅವನು ಧಾರ್ಮಿಕನು, ಗುಣವಂತರ ಮಿತ್ರನು ; ಯಾವ ಕಾರ್ಯವನ್ನು ಮಾಡಬೇಕಾದರೂ

ಹತ್ತು ಮಂದಿಯ ಸಂಗಡ ಆಲೋಚಿಸಿ ಮಾಡುತ್ತಿದ್ದನು. ಅವನ ಮನೋಗತ ಭಾವವು ಕಾರ್ಯಕ್ಕೆ ಪೂರ್ವವಾಗಿ ಯಾರಿಗೂ ತಿಳಿಯು ತ್ತಿರಲಿಲ್ಲ, ಕಾರ್ಯ ಪರ್ಯವಸಾನದಲ್ಲಿ ಅವನ ಭಾವವು ತಿಳಿಯುತಕ್ಕದಾಗಿ ದ್ದಿತು'' ಎಂದು ಹೇಳಿರುವನು. ಈ ವಿಧವಾದ ಪ್ರಶಂಸೆ ಶಿವಾಜಿಗೆ ಸಲ್ಲುವುದು. ಪರಸ್ಪರ ವಿರೋಧಿಗಳಾಗಿ ಸರ್ವದಾ ದೇಶ ಕ್ಷಯ ಕರವಾದ ಕಲಹಗಳಲ್ಲಿ ವ್ಯಾಪೃತರಾಗಿ ನಿತ್ಯ ನಿರಂಕುಶರಾಗಿ ನಡೆಯು ತ್ತಿದ್ದ ತುಂಡರಸರು ಪಾಳೆಯಗಾರರು ಮೊದಲಾದವರ ಪಾರುಪತ್ಯ ವನ್ನು ನಿಲ್ಲಿಸಿ ದಕ್ಷಿಣ ದೇಶದಲ್ಲಿ ಹಿಂದೂ ರಾಜ್ಯವನ್ನು ಸಂಸ್ಥಾಪನೆ ಮಾಡುವುದು, ಬ್ರಾಹ್ಮಣಾದಿ ಸಕಲ ವರ್ಣದವರೂ ತಮ್ಮ ತಮ್ಮ ವರ್ಣಾಶ್ರಮ ಧರ್ಮಗಳನ್ನು ಪಾಲಿಸುತ್ತ ಈರ್ಷ್ಯಾಸೂಯಾದಿಗಳನ್ನು ಬಿಟ್ಟು ಏಕ ದೇಹ ನ್ಯಾಯವಾಗಿರುವುದು, ಪ್ರಬಲರು ದುರ್ಬಲರನ್ನು ಪೀಡಿಸದಿರುವುದು—ಇವೇ ಮೊದಲಾದುವು ಶಿವಾಜಿಯ ಮುಖ್ಯೋ ದ್ದೇಶಗಳು.

ಈ ಅಭೀಷ್ಟ ಸಾಧನಕ್ಕಾಗಿ ಆ ವೀರನು ತನ್ನ ಭುಜ ಬಲವನ್ನೂ ಬುದ್ಧಿ ಬಲವನ್ನೂ ಪ್ರಯೋಗಮಾಡಿ ಕೃತಾರ್ಥನಾದನು. ಅವನ ಶಾಸನ ಪದ್ಧತಿ ಅವನ ಇಷ್ಟಸಿದ್ಧಿಗೆ ತಕ್ಕ ಸಾಧನವಾಗಿದ್ದಿತು. ಎಂದಿನ ವರೆಗೆ ಮಹಾರಾಷ್ಟ್ರೀಯರು ಅವನು ಹಾಕಿದ ಪದ್ಧತಿಯನ್ನು ಹಿಡಿದು ಹೋಗುತ್ತಿದ್ದರೊ, ಎಂದಿನ ವರೆಗೆ ಅವರು ಅವನ ನಿಯಮಾವಳಿ ಗಳನ್ನು ಶಿರೋಧಾರ್ಯವೆಂದೆಣಿಸುತ್ತಿದ್ದರೊ, ಅಂದಿನ ವರೆಗೆ ಅವರು ಅಜೇಯರೆನಿಸಿಕೊಂಡಿದ್ದರು; ಅವರ ರಾಜ್ಯವು ಸುರಕ್ಷಿತವಾಗಿದ್ದಿತು. ಯಾವ ದಿವಸ ತಾರೆಯಲ್ಲಿ ಅವರು ಅವನ ಉಪದೇಶವನ್ನು ಅತಿಕ್ರಮಿ ಸಿದರೊ ಆ ತಾರೆಯಲ್ಲೇ ಮಹಾರಾಷ್ಟ್ರ ಸಾಮ್ರಾಜ್ಯವು ಕೆಟ್ಟಿತು. ಐಕಮತ್ಯವಿದ್ದೆಡೆಯಲ್ಲಿ ಅನೈಕ್ಯ, ಪರ ಹಿತೈಷಿತೆ ಇದ್ದೆಡೆಯಲ್ಲಿ ಈರ್ಷ್ಯಾಸೂಯೆಗಳು, ಸ್ವಾರ್ಥತ್ಯಾಗವಿದ್ದೆಡೆಯಲ್ಲಿ ಸ್ವಾರ್ಥಪರತೆ, ಕಾರ್ಯದಕ್ಷತೆಯಿದ್ದೆಡೆಯಲ್ಲಿ ಅವಿಜ್ಞತೆ, ಕಾರ್ಯ ತತ್ಪರತೆಯಿದ್ದೆಡೆ ಯಲ್ಲಿ ಅಶ್ರದ್ಧೆ, ಸ್ವಾಮಿ ಭಕ್ತಿಯಿದ್ದೆಡೆಯಲ್ಲಿ ಸ್ವಾಮಿ ದ್ರೋಹ—ಇವು ತಲೆಹಾಕಿದುವು. ಶಿವಾಜಿಯ ತರುವಾಯ ನಿರಂಕುಶ ಪ್ರಭುತ್ವಕ್ಕೆ

ತಡೆಯಾಗಿದ್ದ ಅಷ್ಟ ಪ್ರಧಾನ ಗೋಷ್ಠಿಯು ದುರ್ಬಲವಾಗುತ್ತ ಬಂದು ಕಡೆಗೆ ನಿಶ್ಚೇಷ್ಟವಾಯಿತು. ಪೇಶ್ವೆಗಳು ಸರ್ವ ಸ್ವತಂತ್ರರಾಗಿ, ಉಳಿದ ಪ್ರಧಾನರು ಕರ್ತೃತ್ವವಿಲ್ಲದವರಾದರು. ಸೇನಾ ನಾಯಕರು ತಮಗೆ ತಾವೇ ರಾಜ್ಯಾಭಿಷೇಕವನ್ನು ಮಾಡಿಕೊಂಡು, ನಿಂತಲ್ಲಿ ಸ್ವತಂತ್ರ ರಾಷ್ಟ್ರಾಧಿಪತಿಗಳಾದರು. ಉನ್ನತ ಪದವಿಗಳೆಲ್ಲವೂ ವಂಶಾನುಗತವಾಗಿ ನಿರ್ಮಲ ಸ್ವಭಾವ, ಕಾರ್ಯದಕ್ಷತೆ, ಇತ್ಯಾದಿ ಲಕ್ಷಣಗಳುಳ್ಳ ಅಧಿಕಾರಿಗಳು ವಿರಳರಾದರು. ಸಮರ್ಥರಾದವರ ಬುದ್ಧಿಗೆ ಪ್ರಾಚುರ್ಯವೂ ಪುರೋವೃದ್ಧಿಗೆ ಮಾರ್ಗವೂ ಇಲ್ಲದೆ ಹೋದುವು. ರಾಜ ಪುರುಷರು ಒಬ್ಬರನ್ನೊಬ್ಬರು ನಿರ್ಮೂಲ ಮಾಡುವ ಕಾರ್ಯಕ್ಕೆ ನಿಂತರು. ಎಂದು ಮಹಾರಾಷ್ಟ್ರರು ಛತ್ರಪತಿಯ ಮೂಲ ನೀತಿಗಳನ್ನು ಮರೆತರೊ ಅಂದೇ ಅವರು ಅಭ್ಯುತ್ಥಾನ ಕಾಲದಲ್ಲಿದ್ದ ಸದ್ಗುಣಗಳಿಗೆಲ್ಲ ಧರ್ಮೋದಕವನ್ನು ಬಿಟ್ಟರು; ಅಧರ್ಮಕ್ಕೆ ಬಿದ್ದು ಸಮ ಧರ್ಮಾವಲಂಬಿಗಳ ಮೇಲೆಯೇ ಕೈಮಾಡುವುದಕ್ಕೆ ನಿಂತರು. ರಾಜ ಧರ್ಮಗಳನ್ನು ಬಿಟ್ಟು ಕೇವಲ ಲುಂಠನಕಾರಿಗಳೆಂದು ಖ್ಯಾತನಾಮರಾದರು; ಅಂದಿನಿಂದಲೇ ಅವರ ಅಧಃಪತನವೂ ಪ್ರಾರಂಭವಾಯಿತು. ಈ ರೀತಿಯಲ್ಲಿ ಶಿವಾಜಿ ಹಾಕಿದ ರಾಜ್ಯ ಶಾಸನ ಪದ್ಧತಿಯ ಅನುಷ್ಠಾನದಿಂದುಂಟಾದ ಮಂಗಳವೂ ಉಲ್ಲಂಘನದಿಂದುಂಟಾದ ಅಮಂಗಳವೂ, ಎರಡೂ ಆ ಪದ್ಧತಿಯ ಔಚಿತ್ಯಕ್ಕೆ ಪ್ರತ್ಯಕ್ಷ ಪ್ರಮಾಣವಾಗಿರುವುವು.

---

# ಹದಿನೆಂಟನೆಯ ಪ್ರಕರಣ

## ಉಪಸಂಹಾರ.

**ಗೆಲವು ಬೇಹುದು ಮೊದಲು ತನ್ನನು।**
**ಬಳಿಕ ಹಗೆಗಳ ಗೆಲಲು ಬೇಕ।**
**ಗ್ಗಳಿಸಿದಿಂದ್ರಿಯ ಚಯವ ಗೆಲುವುದೆ ತನ್ನ ಗೆದ್ದುದದು ॥**

ಇಂತೀ ಮಹಾರಾಷ್ಟ್ರ ವೀರನ ಜೀವನ ಚರಿತೆ ಪರಿಸಮಾಪ್ತ ವಾಯಿತು. ಆ ವೀರನು ದಕ್ಷಿಣ ದೇಶದಲ್ಲಿ ತಂಡೋಪತಂಡಗಳಾಗಿಯೂ ಪರಸ್ಪರ ವಿರೋಧಿಗಳಾಗಿಯೂ ಇದ್ದ ಮಹಾರಾಷ್ಟ್ರರನ್ನೆಲ್ಲ ಏಕೀ ಕರಿಸಿ ಮಹಾರಾಷ್ಟ್ರ ರಾಜ್ಯವನ್ನು ಪುನಃ ಸ್ಥಾಪನೆ ಮಾಡಿದನು. ಪರಂತು, ರಾಜ್ಯ ಸಂಸ್ಥಾಪನೆ ಅವನ ಚರಮೋದ್ದೇಶವಲ್ಲ. ವಿದೇಶಿಗಳ ಬಾಧೆಯಿಂದ ಸ್ವಧರ್ಮವನ್ನೂ ಸ್ವಧರ್ಮಾವಲಂಬಿಗಳನ್ನೂ ರಕ್ಷಿಸುವುದೇ ಅವನ ಮುಖ್ಯೋದ್ದೇಶವು. ಆ ಉದ್ದೇಶ ಸಿದ್ಧಿಗೆ ಆತ್ಮ ರಕ್ಷಣೆ ಸರ್ವ ಪ್ರಥಮ ಕರ್ತವ್ಯವಾಯಿತು. ಆದುದರಿಂದ ಅವನು ಮೊದಲು ಪಿತ್ರಾ ರ್ಜಿತವಾಗಿ ತನಗೆ ಬಂದ ಉಂಬಳಿಯ ಗ್ರಾಮಗಳನ್ನು ಭದ್ರಪಡಿಸಿ ಕೊಳ್ಳುವ ನಿಮಿತ್ತವಾಗಿ ಕೆಲವು ದುರ್ಗಗಳನ್ನು ಹಿಡಿದನು. ಈ ಆತ್ಮ ರಕ್ಷಣ ಕಾರ್ಯವು ರಕ್ತಪಾತವಿಲ್ಲದೆ ೧೬೪೬ರಿಂದ ಆರು ವರ್ಷ ಗಳೊಳಗೆ ಕೈಗೂಡಿತು. ಶಿವಾಜಿಯ ಕಾರ್ಯ ಪರಂಪರೆಯಲ್ಲಿ ಇದು ಪ್ರಥಮ ಕಾಂಡವು. ಆ ಬಳಿಕ ಅವನು ೧೬೫೨ರಿಂದ ಹತ್ತು ವರ್ಷಗಳ ಕಾಲ ಬಿಜಾಪುರ ಸಂಸ್ಥಾನದವರ ಸಂಗಡ ಯುದ್ಧಮಾಡಿ ಪರ್ಯವ ಸಾನದಲ್ಲಿ ವಿಶಾಲ ರಾಜ್ಯಕ್ಕೊಡೆಯನಾದನು. ಇದು ಎರಡನೆಯ ಕಾಂಡವು. ಅನಂತರ ಅವನು ಮೊಗಲರ ಈರ್ಷ್ಯಾನಲಕ್ಕೆ ಗುರಿಯಾದನು. ಈ ಕಿಚ್ಚಿನುಲ್ಬಣವಾರುವುದಕ್ಕೆ ೧೬೬೨ರಿಂದ ಹನ್ನೆರಡು ವರ್ಷಗಳು ಬೇಕಾಯಿತು. ಮೊಗಲ್ ಚಕ್ರೇಶ್ವರನಿಗೆ ತೃಣ ಸ್ವರೂಪನಾಗಿದ್ದ ಇವನು ಕಡೆಗೆ ಪ್ರಬಲ ಪ್ರತಿ ದ್ವಂದ್ವಿಯಾದನು. ಇದು ಮೂರನೆಯ

ಕಾಂಡವು. ನಾಲ್ಕನೆಯ ಕಾಂಡವು ೧೬೭೪ರಲ್ಲಿ ಪಟ್ಟಾಭಿಷೇಕದಲ್ಲಿ ಆರಂಭವಾಗಿ ಆ ದೇಶವತ್ಸಲನ ಮರಣದಲ್ಲಿ ಪರಿಸಮಾಪ್ತವಾಯಿತು. ಈ ರೀತಿಯಲ್ಲಿ ಶಿವಾಜಿ ತೋರಣ ದುರ್ಗದಲ್ಲಿ ಕಾರ್ಯಕ್ಷೇತ್ರವನ್ನು ಪ್ರವೇಶಮಾಡಿ ಮೂವತ್ತುನಾಲ್ಕು ವರ್ಷಗಳ ಕಾಲ ತೆರಪಿಲ್ಲದೆ ಕಾರ್ಯಮಗ್ನನಾಗಿದ್ದನು. ಈ ಅಧ್ಯವಸಾಯಕ್ಕೆ ಫಲ ಸ್ವರೂಪವಾಗಿ, ದೇವಗಿರಿಯಲ್ಲಿ ಅಸ್ತಮಿಸಿದ ಮಹಾರಾಷ್ಟ್ರ ರಾಜ್ಯವು ಅತಿ ವಿಭವದಿಂದ ಮತ್ತೆ ರಾಯಗಡದಲ್ಲಿ ಉದಯಿಸಿತು.

ಶಿವಾಜಿಯ ಶೀಲ ಸ್ವಭಾವಗಳು ಪುರಾಣೇತಿಹಾಸ ಶ್ರವಣದಿಂದ ಸಂಘಟಿತವಾದುವು. ಈ ಪುರಾಣೇತಿಹಾಸಗಳಲ್ಲಿ ಜನಕಾದಿ ರಾಜರ್ಷಿಗಳೂ, ನಾರದಾದಿ ದೇವರ್ಷಿಗಳೂ, ವಶಿಷ್ಠಾದಿ ಬ್ರಹ್ಮರ್ಷಿಗಳೂ ಲೋಕ ಶಿಕ್ಷಕರು; ಯುಧಿಷ್ಠಿರ, ಅರ್ಜುನ, ಭೀಷ್ಮ ಪ್ರಭೃತಿಗಳು ಮಾರ್ಗದರ್ಶಿಗಳು. ಆ ಮಹಾನುಭಾವರು "ಸಿಂಹಾಸನಾರೂಢರಾಗಿದ್ದರೂ ಸ್ವಸುಖದಲ್ಲಿ ಉದಾಸೀನರು, ಧನುರ್ಧಾರಿಗಳಾದರೂ ಧರ್ಮವೇತ್ತೃಗಳು, ರಾಜರಾದರೂ ಪಂಡಿತರು, ಶಕ್ತರಾದರೂ ಸರ್ವ ಜನ ಪ್ರೇಮಮಯರು." ಈ ಮಹಾತ್ಮರನ್ನೆಲ್ಲ ಶಿವಾಜಿಯ ಹೃದಯದಲ್ಲಿ ಪ್ರತಿಷ್ಠಿಸಿದವರು ಮೂವರು—ವೀರ ಮಾತೆಯಾದ ಜೀಜಾಬಾಯಿ, ಶಿಕ್ಷಾದಾತನಾದ ಕೊಂಡದೇವನು, ದೀಕ್ಷಾಗುರುವಾದ ರಾಮದಾಸನು. ಈ ರೀತಿಯಲ್ಲಿ ಶಿವಾಜಿಗೆ ಲೋಕದಲ್ಲಿ ಸರ್ವೋತ್ತಮರಾದ ಆದರ್ಶ ಪುರುಷರೂ ಶಿಕ್ಷಕರೂ ಇದ್ದರು. ಆದರೂ ಶಿವಾಜಿ ಸರ್ವ ಗುಣ ಸಂಪನ್ನನೆಂದಾಗಲಿ ಅವನ ಕಾರ್ಯಗಳೆಲ್ಲವೂ ಸಾಧು ಕಾರ್ಯಗಳೆಂದಾಗಲಿ ಯಾರೂ ಹೇಳಲಾರರು; ಪರಂತು, ದುರ್ದಮನೀಯ ನಿಕೃಷ್ಟ ಪ್ರವೃತ್ತಿಗಳ ಸಾಮ್ರಾಜ್ಯದಲ್ಲಿ ಮಾನವನು ಉತ್ತಮಾದರ್ಶಕ್ಕನುರೂಪನಾಗದೆ ಹೋದರೂ ಅದಕ್ಕಭಿಮುಖನಾದರೂ ಲೋಕಕ್ಕೆ ಶುಭಪ್ರದವೇ. ಹೀಗಿರುವಲ್ಲಿ, ಶಿವಾಜಿಯ ಸ್ವಧರ್ಮಾನುರಾಗ, ಪ್ರಜಾಪಾಲನೆ, ಶರಣಾಗತ ರಕ್ಷಣೆ, ಪಿತೃವಾಕ್ಯ ಪರಿಪಾಲನೆ, ಮಾತೃಭಕ್ತಿ, ಭ್ರಾತೃ ಭಾವ, ಆಡಂಬರವಿಲ್ಲದ ಜೀವನ, ಇವುಗಳನ್ನು ಪರ್ಯಾಲೋಚಿಸಿದರೆ ಶಿವಾಜಿಯ ಚರಿತ್ರೆಯಲ್ಲಿ ಅವನ

ಆದರ್ಶ ಪುರುಷರ ಚರಿತ್ರೆ ವಿಶೇಷವಾಗಿ ಪ್ರತಿಫಲಿಸಿದ್ದಿತೆಂದು ಧಾರಾಳ ವಾಗಿ ಹೇಳಬಹುದು.

ಶಿವಾಜಿಯ ಗಾರ್ಹಸ್ಥ್ಯ ಜೀವನವು ಅತ್ಯಂತ ರಮಣೀಯ ವಾಗಿಯೂ ಉಪದೇಶ ಪ್ರದವಾಗಿಯೂ ಇರುವುದು. ಅವನು ತಾಯಿ ತಂದೆಗಳನ್ನು ದೇವತೆಗಳೆಂದೆಣಿಸುತ್ತಿದ್ದನು. ಅವನಂತಹ ಪಿತೃ ಪರಾಯಣ ಪುತ್ರನು ದುರ್ಲಭನು. ಷಾಹಜಿ ಬಿಜಾಪುರದಲ್ಲಿ ಬಂದಿ ಯಾದ ಸಮಯದಲ್ಲೂ, ಅನಂತರ ಅವನು ಮಗನ ಬಳಿಗೆ ಆ ಸಂಸ್ಥಾನದ ಕಡೆಯ ಗೂತನಾಗಿ ಹೋದ ಸಮಯದಲ್ಲೂ, ಶಿವಾಜಿಯ ಪಿತೃ ಭಕ್ತಿ ಪರೀಕ್ಷಿತವಾಯಿತು. ಅವನು ವಿಶಾಲ ರಾಜ್ಯಕ್ಕೆ ಅಧೀಶ್ವರನಾದರೂ ತಂದೆ ಬದುಕಿರುವ ವರೆಗೂ ರಾಜನೆಂಬ ಬಿರುದನ್ನು ವಹಿಸಲಿಲ್ಲ; ತನ್ನ ಹೆಸರಿನಿಂದ ನಾಣ್ಯವನ್ನು ಹೊಡೆಯಿಸಲಿಲ್ಲ. ಈ ವಿಧವಾದ ಪಿತೃ ಸನ್ಮಾನವು ಸಕಲರಿಗೂ ಶಿಕ್ಷಣೀಯವಾದುದು. ಶಿವಾಜಿಯ ಮಾತೃ ಭಕ್ತಿಯೆಂತೂ ಅನುಪಮೇಯವಾದುದು. ತಾಯಿಯ ಅಪ್ಪಣೆ ಯಿಲ್ಲದೆ ಅವನು ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ಅತಿ ಸಾಮಾನ್ಯ ವಿಷಯಗಳನ್ನು ಮೊದಲ್ಗೊಂಡು ರಾಜ ಕಾರ್ಯಕ್ಕೆ ಸಂಬಂಧಪಟ್ಟ ಕೂಟ ಪ್ರಶ್ನೆಗಳ ಪರ್ಯಂತವಾಗಿ ಎಲ್ಲ ಸಂಗತಿಗಳನ್ನೂ ತಾಯಿಗೆ ತಿಳಿಸಿ ಕಾರ್ಯಗಳನ್ನು ಮಾಡುತ್ತಿದ್ದನು.

ಶಿವಾಜಿಯ ಭ್ರಾತೃ ಭಾವವು ಅಸದೃಶವಾದುದು. ವೆಂಕೋಜಿ ವಿರಕ್ತಿಯಿಂದ ಬೈರಾಗಿಯಾಗಿ ಹೋಗಬೇಕೆಂದಿದ್ದ ವರ್ತಮಾನವನ್ನು ಕೇಳಿ ಅವನು ತಮ್ಮನಿಗೆ ಬರೆದ ಪತ್ರವು ಅವನ ಭ್ರಾತೃ ಭಾವಕ್ಕೆ ನಿದರ್ಶನವಾಗಿರುವುದು; ಸಾಂಬಾಜಿ ಮೊದಲಾದವರಿಗೆ ಅವನು ತೋರಿದ ದಯೆಯೂ ಉಲ್ಲೇಖ ಯೋಗ್ಯವಾಗಿರುವುದು. ಕೈಯ ಕೆಳ ಗಿನ ಉದ್ಯೋಗಸ್ಥರನ್ನು ಅವನು ಪ್ರೀತಿ ವಿಶ್ವಾಸಗಳಿಂದ ಕಾಣು ತ್ತಿದ್ದನು; ಗುರುತರವಾದ ಅಪರಾಧಕ್ಕಲ್ಲದೆ ಯಾರ ಹೊಟ್ಟೆಯ ಮೇಲೂ ಅವನು ಹೊಡೆಯುತ್ತಿರಲಿಲ್ಲ. ಆ ಕಾಲದ ಪದ್ಧತಿಯನ್ನನು ಸರಿಸಿ ಶಿವಾಜಿ ಅನೇಕ ಮದುವೆಗಳನ್ನು ಮಾಡಿಕೊಂಡನು. ಅವನ ಮೊದಲ ಹೆಂಡತಿ ಸಯಿಬಾಯಿ; ಇವಳು ಸಾಂಬಾಜಿಯ ತಾಯಿ.

ಎರಡನೆಯವಳು ರಾಜಾರಾಮನ ತಾಯಿಯಾದ ಸಾಯಿರಾಬಾಯಿ. ಮೂರನೆಯವಳು ಪುತಲಾಬಾಯಿ. ನಾಲ್ಕನೆಯವಳ ಹೆಸರು ತಿಳಿಯದು. ಶಿವಾಜಿ ಮನೆಯವರಿಗೆಲ್ಲ ವಸ್ತ್ರಾಭರಣಾದಿಗಳನ್ನು ಕೊಟ್ಟು ಸಂತೋಷಪಡಿಸುತ್ತಿದ್ದನು; ಹೃದಯವನ್ನೂ ಕೊಡುತ್ತಿದ್ದನು; ಆದರೆ ಹೃದಯದ ಕರ್ತೃತ್ವವನ್ನು ಮಾತ್ರ ಕೊಡುತ್ತಿರಲಿಲ್ಲ; ಅವನ ಪ್ರೀತಿಯಲ್ಲಿ ಇದೊಂದು ವಿಶೇಷವು. ಸಾಂಬಾಜಿಯ ದುರಾಚಾರವನ್ನು ಕೇಳಿ ಶಿವಾಜಿ ಅವನನ್ನು ದಂಡಿಸದೆ ಬಿಡಲಿಲ್ಲ. ಸಾಯಿರಾಬಾಯಿ ರಾಜಾರಾಮನಿಗೆ ಸಿಂಹಾಸನವನ್ನು ಕೊಡಿಸಬೇಕೆಂದು ಪ್ರಯಾಸಪಟ್ಟಳು; ಆಗಲೂ ಅವನು ನ್ಯಾಯ ಮಾರ್ಗವನ್ನು ಬಿಟ್ಟುಹೋಗಲಿಲ್ಲ.

ಶಿವಾಜಿ ಬಹು ಪರಿಶ್ರಮಿ. ಅವನು ವ್ಯರ್ಥ ಕಾಲಕ್ಷೇಪ ಮಾಡುತ್ತಿರಲಿಲ್ಲ; ಮನುಷ್ಯರಿಗೆ ಶತ್ರುಗಳೊಳಗೆ ಅಲಸತೆ ಪ್ರಧಾನ ಶತ್ರುವೆಂದು ಹೇಳುತ್ತಿದ್ದನು. ಅವನು ಪ್ರತಿ ದಿನವೂ ನಾಲ್ಕೈದು ಗಂಟೆಯ ಕಾಲ ವಿಶ್ರಾಂತಿಯನ್ನು ತೆಗೆದುಕೊಂಡು ಮಿಕ್ಕ ಕಾಲವೆಲ್ಲ ಕೆಲಸ ಮಾಡುತ್ತಿದ್ದನು. ಯುದ್ಧ ಕಾಲದಲ್ಲಿ, ಒಂದೊಂದು ಸಮಯದಲ್ಲಿ, ಅವನು ಹಗಲೆಲ್ಲ ಕುದುರೆಯ ಮೇಲಿರುತ್ತಿದ್ದರೂ ಬೇಸರಪಡುತ್ತಿರಲಿಲ್ಲ. ಅವನು ವರ್ಷಕ್ಕೆ ನಾಲ್ಕು ತಿಂಗಳು ಮನೆಯಲ್ಲಿದ್ದು ರಾಜ್ಯಶಾಸನ ವಿಷಯಕವಾದ ನಿಬಂಧನೆಗಳನ್ನು ಮಾಡುವುದು, ದುರ್ಗಗಳನ್ನೂ ನಗರಗಳನ್ನೂ ಪರೀಕ್ಷಿಸುವುದು, ಉದ್ಯೋಗಸ್ಥರನ್ನು ನೇಮಿಸುವುದು, ಅವರು ಮಾಡಿದ ಕೆಲಸಗಳನ್ನು ನೋಡುವುದು, ಇತ್ಯಾದಿ ಕಾರ್ಯಗಳನ್ನು ಮಾಡುತ್ತಿದ್ದನು. ಊರಿನಲ್ಲಿದ್ದ ವೇಳೆಯಲ್ಲಿ ಬೆಳಕು ಹರಿಯುತ್ತಲೇ ಅವನು ಹಾಸಿಗೆಯಿಂದೇಳುತ್ತಿದ್ದನು; ಏಳುವ ಹೊತ್ತಿಗೆ ಸರಿಯಾಗಿ ಗಾಯಕರು ವೀಣಾನಾದದೊಂದಿಗೆ ದೇವರ ನಾಮಗಳನ್ನು ಹಾಡಿ ಅವನನ್ನು ಎಬ್ಬಿಸುತ್ತಿದ್ದರು. ಎದ್ದಮೇಲೆ, ಶೌಚಾದಿ ಕಾರ್ಯಗಳಾದ ಬಳಿಕ, ಶಿವಾಜಿ ಗೋಸೇವೆಯನ್ನು ಮಾಡಿ, ಸ್ನಾನಾನಂತರ ಪೂಜಾ ಪುರಾಣ ಶ್ರವಣಾದಿ ಕಾರ್ಯಗಳನ್ನು ಮಾಡುವನು; ಆ ಬಳಿಕ ಒಂದು ಗಳಿಗೆ ಲಕ್ಷ್ಯಭೇದಾದಿ ಸಾಧನೆಗಳನ್ನು ಮಾಡುವನು; ಅನಂತರ ಸಭಾಗೃಹಕ್ಕೆ ಹೋಗಿ ದರ್ಶನಾರ್ಥಿಗಳ

ಸಂಗಡ ಯಥೋಚಿತವಾಗಿ ಮಾತನಾಡುತ್ತಲೂ ರಾಜಕೀಯ ವಿಷಯ
ಗಳನ್ನು ಕುರಿತು ಅಧಿಕಾರಿಗಳ ಸಂಗಡ ಆಲೋಚನೆಮಾಡುತ್ತಲೂ
ಇರುವನು; ಹನ್ನೆರಡು ಗಳಿಗೆಯೊಳಗಾಗಿ ರಾಜ ಕಾರ್ಯಗಳನ್ನು
ತೀರಿಸಿಕೊಂಡು ಭೋಜನಕ್ಕೆ ಹೋಗುವನು; ಬ್ರಾಹ್ಮಣರು ಭೋಜ
ನಕ್ಕೆ ಕುಳಿತ ಬಳಿಕ ಬಂಧುಗಳು ಮೊದಲಾದ ಪಙ್ಕ್ತಿಯೋಗ್ಯರ ಜೊತೆ
ಯಲ್ಲಿ ಊಟಮಾಡುವನು. ಆ ಸಮಯದಲ್ಲಿ ಸೇವ್ಯ ಸೇವಕ ಭಾವ
ವಿರುತ್ತಿರಲಿಲ್ಲ. ವಿಶೇಷ ಕಾಲಗಳಲ್ಲಿ ಹೊರತು ಅವನು ಮಾಂಸವನ್ನು
ತಿನ್ನುತ್ತಿರಲಿಲ್ಲ. ಯುದ್ಧ ಸಮಯದಲ್ಲಿ ಕಿಚಡಿಯು ಅವನ ಮುಖ್ಯಾ
ಹಾರವು. ಭೋಜನವಾದ ಮೇಲೆ, ತಾಂಬೂಲ ಚರ್ವಣವಾದ ತರು
ವಾಯ, ಅವನು ಮತ್ತೆ ಸಭಾಗೃಹಕ್ಕೆ ಹೋಗುವನು; ಆಗ, ಬಂದ
ಕಾಗದಗಳನ್ನೆಲ್ಲ ನೋಡಿ ಪ್ರತ್ಯುತ್ತರಗಳನ್ನು ಕೊಟ್ಟು, ಆಯ ವ್ಯಯದ
ಲೆಕ್ಕಗಳನ್ನು ನೋಡಿ ಅಂತಃಪುರಕ್ಕೆ ಹೋಗುವನು; ಅಲ್ಲಿ ಕೊಂಚ
ಹೊತ್ತು ತಾಯಿಯ ಸಂಗಡ ಮಾತನಾಡಿ ಗೃಹಕೃತ್ಯವನ್ನು ವಿಚಾರಿಸಿ
ಕೊಂಡು, ಅಪರಾಹ್ನದಲ್ಲಿ ಕುದುರೆಯ ಮೇಲೆ ಹೋಗಿ ನೋಡತಕ್ಕ
ಸ್ಥಳಗಳನ್ನೆಲ್ಲ ನೋಡಿಕೊಂಡು ಸಾಯಂಕಾಲಕ್ಕೆ ಸಭಾಗೃಹಕ್ಕೆ
ಹೋಗಿ ಅಲ್ಲಿ ಸ್ವಲ್ಪ ಕಾಲವಿದ್ದು ಎಲ್ಲರ ಅಭಿವಾದನವನ್ನು ಒಪ್ಪಿಸಿ
ಕೊಂಡು ಅಂತಃಪುರಕ್ಕೆ ಹೋಗುವನು; ಕೂಡಲೆ ಜಪ, ಪುರಾಣ
ಶ್ರವಣ ಮೊದಲಾದ ಕಾರ್ಯಗಳನ್ನು ಮಾಡುವನು; ರಾತ್ರಿ ಭೋಜನ
ವಾಗುತ್ತಲೆ ಮತ್ತೆ ಸಭಾಗೃಹಕ್ಕೆ ಹೋಗಿ ಮಂತ್ರಿಗಳ ಸಂಗಡ
ರಾಜ ಕಾರ್ಯಗಳನ್ನು ಕುರಿತು ಆಲೋಚಿಸಿ, ಗುಪ್ತೋಪದೇಶಗಳನ್ನು
ಕೊಡುವುದಾಗಿದ್ದರೆ ಕೊಟ್ಟು, ಬೇಹುಕಾರರು ತಂದ ರಹಸ್ಯಗಳನ್ನು
ಕೇಳಿ, ದವಸ ಮೊದಲಾದುವುಗಳ ಬೆಲೆಗಳನ್ನೂ ಇತರ ವಿಶೇಷಗಳನ್ನೂ
ತಿಳಿದು ಹನ್ನೆರಡು ಗಳಿಗೆಗೆ ಅಂತಃಪುರಕ್ಕೆ ಹೋಗುವನು. ಊರಿ
ನಲ್ಲಿರುವಾಗ ಶಿವಾಜಿ ಈ ರೀತಿಯಾಗಿ ಕಾಲಯಾಪನೆ ಮಾಡುತ್ತಿದ್ದನು.
ಅವನು ದುಷ್ಟ ಸಹವಾಸ ದುಷ್ಟಾಲಾಪಗಳಲ್ಲಿ ಸೇರುತ್ತಿರಲಿಲ್ಲ.
ಆಮೋದ ಪ್ರಮೋದಗಳು ಅವನಿಗೆ ಬೇಕೆನಿಸಿದರೆ, ಭೂಷಣನ ಕವಿತ್ವ
ವನ್ನು ಕೇಳುವನು; ಅಥವಾ, ಪಂಡಿತರ ಸಂಗಡ ಶಾಸ್ತ್ರ ವಿಚಾರ

ವನ್ನು ಮಾಡುವನು. ಪುರಾಣ ಶ್ರವಣದಲ್ಲಿ ಅವನಿಗೆ ವಿಶೇಷ ಪ್ರೀತಿ ಯಿದ್ದಿತು. ಎಲ್ಲಿ ಹರಿಕಥೆಯಾಗುತ್ತಿದ್ದರೆ ಅಲ್ಲಿಗೆ ಅವನು ಸಾಮಾನ್ಯ ರಂತೆ ಹೋಗುತ್ತಿದ್ದನು.

ಶಿವಾಜಿ ಪರ ಮತ ವಿಷಯದಲ್ಲಿ ತೋರಿಸುತ್ತಿದ್ದ ಉದಾರತೆಯೂ ಸೈರಣೆಯೂ ಸಕಲ ಕಾಲದಲ್ಲೂ ರಾಜರಿಗೆ ಉಪದೇಶದಾಯಕವಾಗಿರು ವುದು. ಯಾವ ಸಮಯದಲ್ಲಿ ಪರ ಮತ ದ್ವೇಷಿಯೂ ಅರ್ಥ ಗೃಧ್ನುವೂ ಆದ ಅವರಂಗಜೇಬನು, ಧನವಂತರೂ ದರಿದ್ರರೂ ಎಂಬ ಭೇದವಿಲ್ಲದೆ, ಹಿಂದೂಗಳಾದವರೆಲ್ಲರಿಂದಲೂ ತಲೆ ತೆರಿಗೆಯನ್ನು ಸುಲಿದು ರಾಜ ಕೋಶವನ್ನು ತುಂಬಕೊಳ್ಳಲು ದೃಢವ್ರತನಾಗಿ, ದಿಗ್ವಿಜೇತನಾದ ಬಾಬರನಿಂದ ಆರ್ಜಿತವಾದ, ಸಚ್ಚರಿತ್ರನಾದ ಅಕ್ಬರನಿಂದ ಸಂವರ್ಧಿತ ವಾದ, ಜಹಾಂಗೀರನು, ಷಾಹಜಹಾನನು—ಇವರಿಂದ ಸುರಕ್ಷಿತ ವಾಗಿದ್ದ ಅಖಂಡೈಶ್ವರ್ಯಶಾಲಿಯಾದ ಮೊಗಲ್ ಸಾಮ್ರಾಜ್ಯವನ್ನು ಒಲಿಟ್ಟು ಹಿಂದೂಗಳನ್ನು ಗೋಳಾಡಿಸಿ ಉಚ್ಛೇದನಮಾಡಲು ಉದ್ಯುಕ್ತ ನಾಗಿದ್ದನೋ ಆ ಸಮಯದಲ್ಲಿ ಮಹಾಭಾಗನೂ ವಂದನೀಯ ಚರಿತ್ರನೂ ಆದ ಶಿವಾಜಿಯು ಮುಸಲ್ಮಾನರಾದ ತನ್ನ ಪ್ರಜೆಗಳ ವಿಷಯದಲ್ಲಿ ದಯೆಯನ್ನೂ ಔದಾರ್ಯವನ್ನೂ ತೋರಿಸುತ್ತಿದ್ದನು; ಅವರ ಮಸೀದಿ ಮೊದಲಾದುವುಗಳ ಕಾರ್ಯಗಳು ಸರಿಯಾಗಿ ನಡೆವಂತೆ ರಾಜ್ಯದಿಂದ ವೃತ್ತಿಗಳನ್ನು ಕೊಡುತ್ತಿದ್ದನು; ಪ್ರಜೆಗಳು ಯಾವ ಜಾತಿ ಯವರಾದರೂ ಜಾತಿ ಭೇದ ಮತ ಭೇದಗಳೊಂದನ್ನೂ ನೋಡದೆ ಎಲ್ಲರನ್ನೂ ಸಮ ದೃಷ್ಟಿಯಿಂದ ನೋಡುತ್ತಿದ್ದನು; ಆದುದರಿಂದ ಅವನ ಪ್ರಜೆಗಳಾಗಿದ್ದ ಮುಸಲ್ಮಾನರೂ ಅವನಲ್ಲಿ ಪ್ರೀತಿ ಗೌರವಗಳನ್ನಿಟ್ಟಿ ದ್ದರು. ಮೋರೋಪಂತ, ಹಂಬೀರರಾಯ ಮೊದಲಾದ ಹಿಂದೂಗಳು ಶಿವಾಜಿಯ ಪದಾತಿಗೂ ಅಶ್ವ ಸೇನೆಗೂ ಅಧ್ಯಕ್ಷರಾಗಿ ಅವನ ಕಾರ್ಯ ದಲ್ಲಿ ಹೇಗೆ ಅರ್ಪಿತ ಪ್ರಾಣರಾಗಿದ್ದರೊ ಹಾಗೆಯೇ ದರಿಯಾ ಖಾನನೂ ಇಬ್ರಾಹಿಂ ಖಾನನೂ ಯುದ್ಧದ ಹಡಗುಗಳಿಗೆ ಅಧ್ಯಕ್ಷರಾಗಿ ಶಿವಾಜಿಯ ವಿಜಯಕ್ಕೂ ಯಶಸ್ಸಿಗೂ ಕಾರಣಭೂತರಾಗಿ ತಮ್ಮ ಪ್ರಭು ಪರಾಯಣತೆಯನ್ನು ತೋರಿದರು.

ಶಿವಾಜಿ ರಾಜ ಕಾರ್ಯ ಗೃಹ ಕಾರ್ಯಗಳೆರಡರಲ್ಲೂ ಮಿತವ್ಯಯಿ ಯಾಗಿದ್ದನು. ಅವನು ಆಯ ವ್ಯಯ ಸಂಬಂಧವಾದ ಸಕಲ ವಿಷಯ ಗಳನ್ನೂ ಆಮೂಲಾಗ್ರವಾಗಿ ವಿಚಾರಮಾಡುತ್ತಿದ್ದನು. ಅವನು ಮಿತಾಹಾರಿ; ಅವನ ಉಡಿಗೆ ತೊಡಿಗೆಗಳಲ್ಲಿ ಆಡಂಬರವಿರಲಿಲ್ಲ. ಯುದ್ಧ ಯಾತ್ರೆಯ ಕಾಲದಲ್ಲಿ ಅವನ ಉಡಿಗೆ ತೊಡಿಗೆಗಳಿಂದ ಅವನನ್ನು ರಾಜನೆಂದು ತಿಳಿವುದಕ್ಕಾಗುತ್ತಿರಲಿಲ್ಲ. ತನ್ನ ಹಾಗೆಯೇ ಸಂಸ್ಥಾನಾಧಿ ಕಾರಿಗಳೆಲ್ಲರೂ ಮಿತವ್ಯಯಿಗಳಾಗಿರಬೇಕೆಂದು ಅವನು ಅವರ ಆದಾಯ ವೆಚ್ಚಗಳನ್ನು ವಿಚಾರಿಸುತ್ತ ಋಣಗ್ರಸ್ತರನ್ನು ದಂಡಿಸು ತ್ತಿದ್ದನು. ಅವನ ಭಯದಿಂದ ಅವರೆಲ್ಲರೂ ತಮ್ಮ ತಮ್ಮ ಗೃಹಕೃತ್ಯ ದಲ್ಲಿ ದುಂದುಗಾರಿಕೆ ಮಾಡುತ್ತಿರಲಿಲ್ಲ. ಆದರೆ ಶಿವಾಜಿ ಕೃಪಣನಲ್ಲ; ಉಪಯುಕ್ತಸ್ಥಾನದಲ್ಲಿ ಅವನು ದಾನಿ; ಗುಣವಂತರಿಗೆ ಮುಕ್ತ ಹಸ್ತನು. ಶರಣಾಗತರಾದ ಶತ್ರುಗಳೂ ಅವನನ್ನು ಕೊಡಗೈಯುಳ್ಳವ ನೆಂದು ಹೊಗಳುತ್ತಿದ್ದರು.

ಶಿವಾಜಿ ಮೃದು ಸ್ವಭಾವವುಳ್ಳವನು; ರಣರಂಗದಲ್ಲಿ ಕಾಠಿನ್ಯ ವನ್ನು ತೋರಿಸಿದರೂ ಜಯೋಲ್ಲಾಸದಿಂದಾಗಲಿ ಕ್ರೋಧದಿಂದಾಗಲಿ ಪಶುಬಲವನ್ನು ತೋರಿಸನು; ವಿಜಯವಾಗುತ್ತಲೆ ಅವನು ಸೌಮ್ಯ ಮೂರ್ತಿಯಾಗಿ ಪರಾಜಿತ ವೈರಿಗಳಿಗೆ ಅಯಾಚಿತ ಕರುಣೆಯನ್ನು ತೋರಿಸುತ್ತಿದ್ದನು. ಅವನು ಪ್ರಿಯ ಭಾಷಿಯೆಂದು ಹೆಸರುಗೊಂಡಿ ದ್ದನು. ಅವನ ಹೃದಯ ಸ್ಪರ್ಶ ವಾಕ್ಕಿನಿಂದ ಶತ್ರುಗಳೂ ಮಿತ್ರರಾಗು ತ್ತಿದ್ದರು; ಅವನ ಮಾತನ್ನು ಕೇಳುತ್ತಲೆ ಯಾರೇ ಆಗಲಿ, ದೇಶಕ್ಕೆ ಬಂದ ವಿಪತ್ತಿನಲ್ಲಿ ತಾವು ವಿಪನ್ನರು, ಅಪಮಾನದಲ್ಲಿ ತಾವು ಅಪಮಾನಿತರು, ಸುಖದಲ್ಲಿ ತಾವು ಸುಖಿಗಳು ಎಂದು ಭಾವಿಸುತ್ತ ಯಾವ ಕಾರ್ಯ ಕ್ಕೆಂದರೆ ಆ ಕಾರ್ಯಕ್ಕೆ ಉತ್ಸಾಹದಿಂದ ಸೊಂಟವನ್ನು ಕಟ್ಟುತ್ತಿದ್ದರು.

ಎಷ್ಟೇ ಆಗಲಿ ಮನುಷ್ಯನು ಅವಸ್ಥಾಧೀನನು. ಅವನ ರೀತಿ ನೀತಿ ಗಳು ಪ್ರಾಯಶಃ ಅವನ ಅವಸ್ಥೆಗೆ ಅನುಗುಣವಾಗಿರುವುವೇ ಹೊರತು ಕೇವಲ ಧರ್ಮ ಸಮ್ಮತವಾಗಿರವು; ಅಷ್ಟು ಮಾತ್ರವೇ ಅಲ್ಲ, ಅವನು ಅವಸ್ಥಾ ವಶನಾಗಿ ಮಾಡುವ ಕೆಲವು ಅಧರ್ಮಗಳನ್ನೂ ಕೂಡ ಧರ್ಮ

ಗಳೆನ್ನುವನು; ಹಾಗಲ್ಲದ ಪಕ್ಷಕ್ಕೆ, ಅವನು ಅಹಿಂಸೆಯು ಪರಮ ಧರ್ಮ
ವೆಂದೊಪ್ಪಿಯೂ ಹಿಂಸಾಸ್ಪದವಾದ ಯುದ್ಧವು ಧರ್ಮ ಕಾರ್ಯವೆಂ
ದೆಣಿಸುತ್ತಿರಲಿಲ್ಲ; ರಣಧೀರನಿಗೆ ಬಿರುದಾವಳಿಗಳನ್ನು ಕೊಟ್ಟು ಕೀರ್ತಿ
ಸ್ತಂಭಗಳನ್ನು ಸ್ಥಾಪಿಸುತ್ತಿರಲಿಲ್ಲ. ಹಿರಣ್ಯಕಶಿಪು ಶತ್ರು ಮಿತ್ರರ
ವಿಷಯದಲ್ಲೂ ಸಂಧಿ ವಿಗ್ರಹಾದಿ ಕಾರ್ಯಗಳಲ್ಲೂ ಹೇಗೆ ನಡೆಯ
ಬೇಕೆಂದು ಪ್ರಹ್ಲಾದನನ್ನು ಕೇಳುತ್ತಲೆ, ಆ ಬಾಲಕನು, "ಶತ್ರು ಮಿತ್ರ
ರನ್ನು ಸಾಧಿಸುವುದಕ್ಕೆ ಸಾಮ ದಾನ ಭೇದ ದಂಡವೆಂಬೀ ಉಪಾಯ
ಚತುಷ್ಟಯವನ್ನು ಹೇಳುವರು. ಶತ್ರು ಮಿತ್ರರೆಂಬ ಭೇದವನ್ನು ನಾನರಿ
ಯೆನು. ನಾನು ಸಾಧಿಸಬೇಕಾದವರೂ ಇಲ್ಲ, ನನಗೆ ಸಾಧನೆಗಳೂ
ಬೇಕಾಗಿಲ್ಲ. ಜಗನ್ನಾಥನು ಎಲ್ಲ ಪ್ರಾಣಿಗಳಲ್ಲೂ ಇರುವನು. ಹೀಗಿರು
ವಲ್ಲಿ, ಇವನು ಮಿತ್ರನು ಅವನು ಶತ್ರುವು ಎಂದು ಹೇಳುವುದು ಹೇಗೆ?
ಚತುರುಪಾಯದಿಂದೇನು ಪ್ರಯೋಜನ?" ಎಂದನು. ಇದು ಧರ್ಮಕ್ಕೆ
ಪರಮಾವಧಿ. ಈ ವಿಶುದ್ಧ ಧರ್ಮ ಪರಾಕಾಷ್ಠತೆಯನ್ನು ಸರ್ವರೂ
ಸರ್ವ ಕಾಲದಲ್ಲೂ ಆಚರಿಸಿದಲ್ಲಿ ಮರ್ತ್ಯ ಲೋಕವೇ ಸ್ವರ್ಗ ಲೋಕವಾಗು
ವುದು. ಈ ವೈಷಮ್ಯ ಪೂರ್ಣ ಜಗತ್ತಿನಲ್ಲಿ ಅಂತಹ ಧರ್ಮವು
ಎಂದಿಗೆ ಸಾರ್ವತ್ರಿಕವಾಗುವುದೊ ಹೇಳಲು ಸಾಧ್ಯವಲ್ಲ. ಶಿವಾಜಿ
ಯಂತೂ ಅವನ ಅವಸ್ಥೆಯಲ್ಲಿ ಅಂತಹ ಧರ್ಮವನ್ನಾಚರಿಸಿ ಬದುಕು
ವುದಕ್ಕೆ ಅವಕಾಶವಿರಲಿಲ್ಲ. ಅವನ ಪುರುಷಾಯುಸ್ಸೆಲ್ಲವೂ ವೈರಿಗಳ
ಸಂಗಡ ಕಾದಾಡುವುದರಲ್ಲಿಯೇ ಪರಿಸಮಾಪ್ತವಾಯಿತು. ಅವನು
ಕಾಲಿಟ್ಟೆಡೆಯಲ್ಲಿ ಅವರು ಅವನನ್ನು ಹಿಡಿದು ಸಂಹಾರಮಾಡುವ ಸಲು
ವಾಗಿ ಬಲೆಯನ್ನು ಬೀಸುತ್ತಿದ್ದರು. ವೈರಿಗಳ ಮಾಯಾಜಾಲದಿಂದ
ಬಿಡಿಸಿಕೊಳ್ಳುವ ನಿಮಿತ್ತವಾಗಿ ಅವನು ಮಾಯಾವಿಗಳಿಗೆ ಮಾಯಾವಿ
ಯಾಗಿಯೇ ಇದ್ದು ಅವರ ಕುಟಿಲೋಪಾಯಗಳನ್ನು ಕುಟಿಲೋಪಾಯ
ಗಳಿಂದಲೇ ಮುರಿಯುತ್ತಿದ್ದನು. ಹಾಗೆ ಮಾಡದಿದ್ದ ಪಕ್ಷದಲ್ಲಿ
ಅವನೂ ಉಳಿಯುತ್ತಿರಲಿಲ್ಲ, ಆ ಕಾಲದವರ ಕಷ್ಟಗಳೂ ನಿವಾರಣ
ವಾಗುತ್ತಿರಲಿಲ್ಲ. ಶಾಂತಿಸುಖವನ್ನು ಅನುಭವಿಸುತ್ತಿರುವವರ ರೀತಿ
ನೀತಿಗಳಿಗೂ ಕಲಹಪೂರ್ಣ ಕುಟಿಲ ಕಾಲ ವಶರಾಗಿರುವವರ ರೀತಿ

ನೀತಿಗಳಿಗೂ ಇರುವ ಪ್ರಭೇದವು ಸಾಮಾನ್ಯವಾದುದಲ್ಲ. ಆದುದರಿಂದ ಬೇರೆ ಬೇರೆಯ ಅವಸ್ಥೆಯ ರೀತಿ ನೀತಿಗಳು ಪರಸ್ಪರ ಪ್ರಮಾಣವಾಗಲಾರವು. ಅನನ್ಯಗತಿಕನಾಗಿ ಮನುಷ್ಯನು ಅವಲಂಬಿಸಿದ ಆಪದ್ಧರ್ಮವು ಕಾಲಾಂತರದಲ್ಲಿ ದೂಷ್ಯವೂ ಅಗ್ರಾಹ್ಯವೂ ಆದರೂ ಆ ಕಾಲಕ್ಕೆ ಅದು ಆತ್ಮರಕ್ಷಣೆಗೆ ಅನಿವಾರ್ಯವೆಂದರೆ ಅತ್ಯುಕ್ತಿಯಾಗಲಾರದು. ಶಿವಾಜಿಯು ಆ ಕಾಲದಲ್ಲಿ ನಡೆದ ನಡತೆಗೆ ಎಷ್ಟು ಮಟ್ಟಿಗೆ ನಿಂದಾರ್ಹನೊ ನಿರ್ಧರಿಸಬೇಕಾದಲ್ಲಿ ಅವನ ಸಮಕಾಲೀನನೂ ಪ್ರಬಲ ವೈರಿಯೂ ಆದ ಅವರಂಗಜೇಬನ ರಾಜದ್ರೋಹ, ಪಿತೃದ್ರೋಹ, ಭ್ರಾತೃದ್ರೋಹ, ಪರಮತ ದ್ವೇಷ—ಇವುಗಳು ಯಾರಿಗೇ ಆಗಲಿ ಸ್ಮರಣೆಗೆ ಬಾರದಿರಲಾರವು.

ಶಿವಾಜಿಗೆ ಸ್ವಧರ್ಮ ಸ್ವದೇಶ ರಕ್ಷಣೆಯೇ ಆತ್ಮ ರಕ್ಷಣೆಯಾಗಿದ್ದಿತು. ಅವನು ರಾಜ್ಯಲೋಭ, ಧನ ಲೋಭ, ಭೋಗಾಸಕ್ತಿ, ಪ್ರತಿಷ್ಠಾ ಕಾಮನೆಗಳಿಂದ ಕ್ಷಾತ್ರಧರ್ಮವನ್ನಾಚರಿಸಿದವನಲ್ಲ; ಅವನು ತಾನು ಪ್ರಯಾಸಪಟ್ಟು ಸಂಪಾದಿಸಿದ ರಾಜ ಪದವಿಯನ್ನೇ ಬಿಟ್ಟು ಕಾರ್ಯಕ್ಷೇತ್ರದಿಂದ ನಿವೃತ್ತನಾಗುವ ಪ್ರಯತ್ನವನ್ನೂ ನಡುವೆ ನಡುವೆ ಮಾಡುತ್ತಿದ್ದನು. ದಕ್ಷಿಣ ಹಿಂದೂಸ್ಥಾನವು ಮೊಗಲರ ಪಾಲಾಗ ಬಾರದೆಂಬುದೇ ಅವನ ಹಾರೈಕೆ. ಅವರಂಗಜೇಬನು ದಕ್ಷಿಣ ದೇಶವನ್ನು ಗೆದ್ದಲ್ಲಿ, ಅಂದಿಗೆ ಮುನ್ನೂರು ವರ್ಷಗಳ ಹಿಂದೆ ಅಲ್ಲಾವುದ್ದೀನ್, ಮೊಹಮ್ಮದ್ ತೋಗ್ಲಾಖ್ ಪ್ರಭೃತಿಗಳ ದೆಸೆಯಿಂದ ಯಾವ ಅವಸ್ಥೆಯು ಪ್ರಾಪ್ತವಾಯಿತೊ ಅದೇ ಅವಸ್ಥೆಯು ಮತ್ತೆ ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲವೆಂದು ಭಯಪಟ್ಟು ಸಕಲ ಸಾಧನ ಸಂಪನ್ನನಾದ ಬಲವದ್ವೈರಿಯನ್ನು ಪ್ರತಿಭಟಿಸಲು ಅಸಹಾಯಶೂರನಾಗಿ ನಿಂತನು. ಬಿಜಾಪುರ ಗೋಲ್ಕೊಂಡ ಸಂಸ್ಥಾನಾಧಿಪತಿಗಳಿಬ್ಬರೂ ಆ ಕಾಲಕ್ಕೆ ಹತವೀರ್ಯರಾಗಿದ್ದುದರಿಂದ ಮೊಗಲರ ಮುಂದೆ ನಿಲ್ಲುವ ಸ್ಥಿತಿಯಲ್ಲಿರಲಿಲ್ಲ. ಹಿಂದೂಗಳು ಮುನ್ನೂರು ವರ್ಷಗಳ ಕಾಲ ಆಫ್ಗನರ ಮತ್ತು ತುರುಕರ ಅಧೀನದಲ್ಲಿದ್ದು, ಕೆಲಸದಲ್ಲಿ ನುರಿದು ಕಾರ್ಯದಕ್ಷತೆಯನ್ನೂ, ಕಷ್ಟಗಳಿಗೆ ಸಿಕ್ಕಿ ವಿವೇಕವನ್ನೂ, ಶತ್ರುಗಳ ನಡುವೆ ಬಾಳಿ ಐಕಮತ್ಯವನ್ನೂ

ಸಂಪಾದಿಸಿ ತಾವು ಸ್ವತಂತ್ರರಾಗಿ ರಾಜ್ಯ ಧಾರಣೆ ಘೋಷಣೆಗಳನ್ನು ಮಾಡಲು ಶಕ್ತರೆಂಬ ಧೈರ್ಯವು ಅವರಿಗೆ ಹುಟ್ಟುತ್ತ ಬಂದಿದ್ದಿತು*. ಅಷ್ಟೇ ಅಲ್ಲದೆ, ಬಹು ಕಾಲದಿಂದ ಮಹಾರಾಷ್ಟ್ರ ದೇಶದಲ್ಲಿ ಭಕ್ತ ಮಂಡಲಿಯವರು ಮಾಡುತ್ತಿದ್ದ ಧರ್ಮ ಪ್ರಚಾರದಿಂದ ಜನ ಸಾಮಾನ್ಯ ದಲ್ಲಿ ಸ್ವಧರ್ಮಾನುರಾಗವೂ ಸ್ವಾತಂತ್ರ್ಯಾಭಿಲಾಷೆಯೂ ಐಕಮತ್ಯವೂ ಹುಟ್ಟಿದ್ದುವು*. ಮುನ್ನೂರು ವರ್ಷಗಳ ಹಿಂದೆ ಅವರ ಪೂರ್ವಿಕರು ಪಟ್ಟ ಕಷ್ಟ ನಷ್ಟಗಳನ್ನು ಸ್ಮರಿಸಿಕೊಂಡು, ದಕ್ಷಿಣ ದೇಶವು ಮೊಗಲರ ವಶ ವಾದರೆ ಮತ್ತೊಂದು ಸಾರಿ ದೇಶಕ್ಕೆ ಆ ಕಷ್ಟ ನಷ್ಟಗಳು ಪ್ರಾಪ್ತ ವಾಗುವುವೆಂದು ಶಿವಾಜಿಗೆ ಇದ್ದ ಭಯವೇ ಜನ ಸಾಮಾನ್ಯಕ್ಕೂ ಇದ್ದುದರಿಂದ ಅವರು ತಮ್ಮ ಪರಸ್ಪರ ವೈಷಮ್ಯಗಳನ್ನು ಮರೆತು ಒಂದಾದರು. ಅಷ್ಟು ಮಾತ್ರವೇ ಅಲ್ಲದೆ, ಹಿಂದೂಗಳೂ ಮುಸಲ್ಮಾ ನರೂ ಕೂಡ ಅನ್ಯೋನ್ಯ ಭಾವದಿಂದಿರುತ್ತಿದ್ದರು. ದಕ್ಷಿಣ ಹಿಂದೂಸ್ಥಾನ ದಲ್ಲಿ ಹೇಗೋ ಹಾಗೆ ಉತ್ತರ ಹಿಂದೂಸ್ಥಾನದಲ್ಲಿಯೂ ಹಲವರು ಸಾಧು ಗಳ ಧರ್ಮೋಪದೇಶದಿಂದಲೂ ಉದಾರ ಹೃದಯನಾದ ಅಕ್ಬರ್ ಪಾದ ಷಾಹನ ರಾಜತಂತ್ರದಿಂದಲೂ ಪ್ರಜಾ ವಾತ್ಸಲ್ಯದಿಂದಲೂ, ಹಿಂದೂ ಗಳಿಗೂ ಮುಸಲ್ಮಾನರಿಗೂ ಇದ್ದ ಪರಸ್ಪರ ಜಾತಿ ವೈರವೂ ಮತ ವೈರವೂ ಅಡಗಿದ್ದಿತು. ಈ ಸಮಯದಲ್ಲಿ, ಹಿಂದೂಗಳನ್ನೂ ಮುಸ ಲ್ಮಾನರನ್ನೂ ಸಮ ಬುದ್ಧಿಯಿಂದ ಪಾಲಿಸುತ್ತಿದ್ದ ಆ ಪಾದಷಾಹನು ಸಿಂಹಾಸನಾರೂಢನಾಗಿದ್ದ ಪಕ್ಷದಲ್ಲಿ, ಪ್ರಜೆಗಳಲ್ಲಿ ಹುಟ್ಟಿದ್ದ ಐಕ ಮತ್ಯ, ಧರ್ಮ ಬುದ್ಧಿ, ಶಾಂತಿಪರತೆ, ಪರಮತ ಸಹಿಷ್ಣುತೆ ಮುಂತಾದ ಸದ್ಗುಣಗಳೆಲ್ಲವೂ ಮೊಗಲರ ಸಾಮ್ರಾಜ್ಯಕ್ಕೆ ಸಂಪತ್ಸಾಧನಗಳಾಗು ತ್ತಿದ್ದುವು. ದೌರ್ಭಾಗ್ಯ ವಶದಿಂದ ಆ ಕಾಲಕ್ಕೆ ಸರಿಯಾಗಿ ಆ ಸಾಮ್ರಾಜ್ಯದ ಭವಿಷ್ಯವೆಲ್ಲವೂ ಅನ್ಯ ಮತ ದ್ವೇಷಿಯೂ ಸಂಕೀರ್ಣ ಹೃದಯನೂ ಆದ ಅವರಂಗಜೇಬನ ವಶವಾಗಿದ್ದಿತು. ಶುಭ ಸಾಮಗ್ರಿ ಗಳೆಲ್ಲವೂ ಉತ್ಪಾತಗಳಾದುವು. ಅವನಿಗಿದ್ದ ಪರ ಮತ ದ್ವೇಷದಿಂದ ಹಿಂದೂಗಳಲ್ಲಿ ಅವನ ಶತ್ರು ಮಿತ್ರೋದಾಸೀನರೆಲ್ಲರೂ ಅವನ ಮೇಲೆ

---

* ಮೂರನೆಯ ಪ್ರಕರಣವನ್ನು ನೋಡಿರಿ.

ತಿರುಗಿಬಿದ್ದರು. ಅವನ ಸಂಶಯ ಪ್ರಕೃತಿಯಿಂದ ಮುಸಲ್ಮಾನರೇ ಅವನಿಗೆ ವಿರೋಧಿಗಳಾದರು. ಅಷ್ಟೇಕೆ! ಅವನ ಮಕ್ಕಳಿಗೇ ಅವನು ಅಂಜುತ್ತಿದ್ದನು. ಕುಸಂಸ್ಕಾರವಶನಾಗಿ ತನ್ನ ಪ್ರಜೆಗಳಾಗಿದ್ದ ಹಿಂದೂಗಳನ್ನು ಅವರ ಸ್ವಧರ್ಮಾನುಷ್ಠಾನಕ್ಕೆ ಸುಂಕವನ್ನು ಕೇಳದೆಯೂ ಕಾಡಿಸದೆಯೂ ಇದ್ದ ಪಕ್ಷದಲ್ಲಿ ಈ ಅನರ್ಥವು ಘಟಿಸುತ್ತಿರಲಿಲ್ಲ. ಈ ವರೆಗೆ ನಡೆದ ರಾಜ ವಿಪ್ಲವಗಳು ವಿಶೇಷವಾಗಿ ರಾಜರ ಹಾನಿ ವೃದ್ಧಿಗಳಿಗೆ ಕಾರಣವಾಗಿದ್ದುವೇ ಹೊರತು ಪ್ರಜೆಗಳ ಆಚಾರ ವ್ಯವಹಾರಗಳಿಗೆ ಬಾಧಕಗಳಾಗಿರಲಿಲ್ಲ. ರಾಷ್ಟ್ರಾಧಿಪತಿಗಳು ಯುದ್ಧ ಮಾಡುತ್ತಿದ್ದರೂ ಪ್ರಜೆಗಳು ತಮ್ಮ ಪಾಡಿಗೆ ತಾವು ನೆಮ್ಮದಿಯಾಗಿರುತ್ತಿದ್ದರು ; ತಮ್ಮ ಪ್ರಭುಗಳು ಯಾರೆಂದು ಕೇಳದೆ ರಾಜಾಜ್ಞೆಯನ್ನು ಶಿರೋಧಾರ್ಯವೆಂದೆಣಿಸಿ ಪಾಲಿಸುತ್ತಿದ್ದರು. ಆದರೆ ಅಧಿಕಾರೋನ್ಮತ್ತನಾದ ಅವರಂಗಜೇಬನ ಕಾಠಿನ್ಯವು ಪ್ರಜೆಗಳ ಬದುಕು ಬಾಳಿಗೂ ವ್ಯಾಪಿಸಿತು. ಜನಸಾಮಾನ್ಯದಲ್ಲಿ ಬಹು ಕಾಲ ಸಂಸ್ಕಾರದಿಂದುಂಟಾದ ಸ್ವಮತಾಭಿಮಾನಕ್ಕೂ ಅವರು ಬಯಸುತ್ತಿದ್ದ ಸ್ವಾತಂತ್ರ್ಯಕ್ಕೂ ವ್ಯಾಘಾತವುಂಟಾಯಿತು.

ಶಿವಾಜಿ ದಕ್ಷಿಣ ದೇಶದಲ್ಲಿ ಆ ಅನರ್ಥಕ್ಕೆ ಅವಕಾಶ ಕೊಡಕೂಡದೆಂದು ಪ್ರತಿಜ್ಞೆಮಾಡಿ ತನ್ನ ಯಾವಚ್ಛಕ್ತಿಯನ್ನೂ ಪ್ರಯೋಗಿಸಿ ಸ್ವಮತಾವಲಂಬಿಗಳಿಗೆ ಆಶ್ರಯವನ್ನಾಗಿ ಸ್ವರಾಜ್ಯ ಸಂಸ್ಥಾಪನೆ ಮಾಡಿದನು. ಬಾಲ್ಯದಿಂದಲೂ ಅವನು ಸ್ವಧರ್ಮಾಸಕ್ತನು; ಸ್ವಧರ್ಮ ರಕ್ಷಣೆ ಅವನ ಜೀವನೋದ್ದೇಶವು ; ವಿಷಯ ನಿಸ್ಪೃಹರು ಅವನ ಮಂತ್ರಿಗಳು ; ಹಾಲಿಕರು ಅವನ ಭಟರು. ರಾಜ್ಯಲೋಭದಿಂದ ಬಿಜಾಪುರ ಗೋಲ್ಕೊಂಡ ಸಂಸ್ಥಾನಗಳನ್ನು ಮೂಲೋತ್ಪಾಟನ ಮಾಡಬೇಕೆಂದು ಅವನು ಆಶಿಸಿದವನಲ್ಲ; ಆ ಸಂಸ್ಥಾನಗಳನ್ನು ಸ್ವಾರ್ಥಪರರೂ ಪರಸ್ಪರ ವೈರಿಗಳೂ ಆಗಿದ್ದ ಮುಸಲ್ಮಾನ್ ಸರದಾರರು ಮುಣುಗಿಸಿ ತಾವು ಬದುಕಬೇಕೆಂದು ಸಂಚುಮಾಡುತ್ತಿದ್ದ ಸಮಯದಲ್ಲಿ ಅವನು ಅವುಗಳನ್ನುಳಿಸಿದನು ; ಅಲ್ಲದೆ, ದೋರ್ದಂಡ ಪ್ರತಾಪಶಾಲಿಯಾದ ಮೊಗಲ್ ಚಕ್ರೇಶ್ವರನು ಆಸೇತು ಹಿಮಾಚಲ ಪರ್ಯಂತವಾಗಿ ತನ್ನ ಸಾರ್ವ

ಭೌಮತ್ವವನ್ನು ವಿಸ್ತರಿಸುವ ಸಲುವಾಗಿ ದಕ್ಷಿಣ ದೇಶಕ್ಕೆ ಮೇಲೆ ಮೇಲೆ ತನ್ನ ಪ್ರಚಂಡ ಸೇನಾ ನಾಯಕರನ್ನೂ ದಂಡುಗಳನ್ನೂ ಕಳುಹಿಸುತ್ತಿದ್ದ ಸಮಯದಲ್ಲಿ ಆ ಎರಡು ಸಂಸ್ಥಾನಗಳನ್ನೂ ಉದ್ಧಾರಮಾಡಿದನು. ಶಿವಾಜಿ ಕಾಲಗತಿಯನ್ನೈದಿದನು ; ಅವನು ಅಡಿಗಡಿಗೆ ಬಲಾಧಿಕರಾದ ಶತ್ರುಗಳ ಕೈಗೆ ಸಿಕ್ಕಿ, ವಿಪನ್ನಾವಸ್ಥೆಯಲ್ಲಿ ಬಿದ್ದು, ವಿಧ ವಿಧ ಕ್ಲೇಶಗಳನ್ನನುಭವಿಸಿ ಕಟ್ಟಿದ ಸ್ವರಾಜ್ಯವೂ ನಷ್ಟವಾಗಿ ಹೋಯಿತು ; ಅವನ ಬೆಂಬಲದಿಂದುಳಿದಿದ್ದ ಷಾಹಿ ಸಂಸ್ಥಾನಗಳೂ ಹೋದುವು. ಆದರೆ ಅವನ ಉಪದೇಶ ಬಲದಿಂದಲೂ ದೃಷ್ಟಾಂತ ಪ್ರಭಾವದಿಂದಲೂ ಮಹಾರಾಷ್ಟ್ರರಲ್ಲಿ ಹುಟ್ಟಿದ್ದ ಧೈರ್ಯೋತ್ಸಾಹಗಳು ಮಾತ್ರ ಅಷ್ಟು ಬೇಗ ಹೋಗಲಿಲ್ಲ; ಅವನು ಹೊತ್ತಿಟ್ಟ ಶೌರ್ಯಾಗ್ನಿ ಬಹು ಕಾಲ ಪ್ರಜ್ವಲಿಸುತ್ತಿದ್ದಿತು. ವಂದನೀಯ ಚರಿತ್ರರಾದ ಅವರಂಗಜೇಬನ ಪಿತೃ ಪಿತಾಮಹರಿಂದ ರಾಶೀಕೃತವಾಗಿದ್ದ ಅಖಂಡೈಶ್ವರ್ಯವೆಲ್ಲವೂ ಆ ಶೌರ್ಯಾಗ್ನಿಗೆ ಪೂರ್ಣಾಹುತಿಯಾಯಿತು. ತರಂಗಾಕುಲ ಸಮುದ್ರದಲ್ಲಿಯ ತರಣಿಯಂತಿದ್ದ ಭಾರತ ರಾಜತ್ವವು ಪ್ರಕೃತಿಯ ನಿಯಮಾನುಸಾರವಾಗಿ ಹಿಂದೂಗಳ ಕೈಸೋಕಿ ಬ್ರಿಟಿಷ್ ಸಾರ್ವಭೌಮರ ಹಸ್ತಗತವಾಯಿತು. ಕೋಲಾಹಲವು ಶಾಂತವಾಯಿತು.



1040—25 ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.